# ಅರ್ಚನ

## (ಸಂಘದ ಸಂಸ್ಮರಣ ಸಂಪುಟ)


ಸಂಪಾದಕರು :

ಶ್ರೀ ಮಲ್ಲಿಕಾರ್ಜುನ ದೇವರು, ತೆಲಸಂಗ. ಎಂ.ಎ.

ಶ್ರೀ ಪ್ರಭುದೇವರು, ಹುಲಸೂರು-ಬಸವಕಲ್ಯಾಣ. ಬಿ.ಎ.

ಶ್ರೀ ಶಿವಲಿಂಗದೇವರು ಶಿವಲಿಂಗೇಶ್ವರಮಠ. ಜೇಳಗಿ.

ಶ್ರೀ ವಿಶ್ವನಾಥ ದೇವರು. ರುದ್ರಾಕ್ಷಿಮಠ. ಹುಬ್ಬಳ್ಳಿ.


*


ಪ್ರಕಾಶಕರು

ಶ್ರೀ ಜಗದ್ಗುರು ಮೂರುಸಾವಿರಮಠ ಕುಮಾರೇಶ್ವರ ಶಿವಯೋಗಿ ಸಂಘದ
ದ್ವಾದಶ ವಾರ್ಷಿಕ ಮಹೋತ್ಸವ ಸಮಿತಿ ಹುಬ್ಬಳ್ಳಿ.

೧೯೭೮

# "ARCHANA"

**Publishers**
SHRI MURUSAVIRMATH KUMARESHWAR SHIVAYOGI SANGHADA DWADASHA VARSHIKA MAHOTSAVA SAMITI
HUBLI—580020.

**Edited By**
SHRI MALLIKARJUN DEVARU M. A. TELSANG etc.

**First Edition: 1978.** **Copies: 1000**

**Prisc Rs. 10-00** 

- ಸಲಹಾ ಮಂಡಳ -

ಶಿವಕುಮಾರ ದೇವರು ಕುನ್ನಾಳ ಬಿ. ಎ.
ಷಡಕ್ಷರದೇವರು ಗುತ್ತಲ ಬಿ. ಎ.
ಚಂದ್ರಶೇಖರ ದೇವರು ಮುಳ್ಳೂರ ಬಿ. ಎ.
ವೃಷಭಲಿಂಗದೇವರು ಬಂಥನಾಳ
ರೇಣುಕ ದೇವರು ಚಿಕ್ಕತೊಟ್ಟಲಕೇರಿ
ಮಹೇಶ್ವರದೇವರು ಮಂತ್ರೋಡಿ
ಶಿವಯೋಗಿದೇವರು ಮುಳ್ಳಳ್ಳಿ-ಬಮ್ಮನಹಳ್ಳಿ
ಚನ್ನವೀರದೇವರು ನರಗುಂದ.



**Printers :**
**SHRI M. S. VIRAKTAMATH**
**Manohar Publication and Printery, Fort, (c. b. t.)**
**HUBLI-580020.**

# ಪರಿವಿಡಿ

## ಎರಡು : ಕಾವ್ಯಗಂಗೆ

## ಮೂರು : ನವ ಚೇತನ

ಜಾತಿ, ಮತ, ಕುಲ, ಭೇದಾತೀತವಾದ ಆಧುನಿಕ ಪ್ರಮಾಣದ ಅನ್ನ-ದಾಸೋಹ ವಂತೂ ನಾಡಿನಲ್ಲೆಲ್ಲ ಅವರ ಬೆಳ್ದಸವನ್ನು ಹರಡಿಸಿತು. ಅವರ ಈ ಸರ್ವ ಜೀವ ದಯಾಪಾರಿತ್ವವೇ ಅವರಿಗೆ ವೀರಶೈವರಲ್ಲಿಯೂ, ವೀರಶೈವೇತರರಲ್ಲಿಯೂ ಅಸಂಖ್ಯ ಆರಾಧಕರನ್ನು ಒದಗಿಸಿದೆ.

ಅವರು ಕೈಗೆತ್ತಿ ಕೊಂಡಿರುವ ಅನೇಕ ಮಹತ್ಕಾರ್ಯಗಳಲ್ಲಿ 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ'ದ ಕಾರ್ಯಕ್ಕೆ ವಿಶೇಷ ಮಹತ್ವವಿದೆ. ಅಥಣಿಯ ಶಿವಯೋಗಿಗಳು, ಹಾನಗಲ್ಲ ಕುಮಾರ ಶಿವಯೋಗಿಗಳು ಕನ್ನಡ ನಾಡಿನ ಕ್ಷಿತಿಜದ ಮೇಲೆ ಉದಯರಾದರೆಂದೇ ಈ ನಾಡಿನಲ್ಲಿ ಸರ್ವೋದಯವೊಂದು ತಲೆದೋರಿತು. ಇವರಿಬ್ಬರ ಪ್ರಭೆ, ಪ್ರಭಾವಗಳಿಂದ ಅನೇಕ ಅನುಭಾವಿಗಳೂ, ಸಮಾಜದ ಸನ್ಮಾರ್ಗ ದರ್ಶಕರೂ, ಕ್ರಿಯಾ-ವೀರರೂ, ಕವಿ ಕಲಾವಿದರೂ, ತ್ಯಾಗಶೀಲ ಸಮಾಜ ಸೇವಕರೂ ಹುಟ್ಟಿ ಸಮಾಜದ ಹೊಸ ಹುಟ್ಟಿಗಾಗಿ ಹೆಣಗಿದರು. ಹಾನಗಲ್ಲ ಶ್ರೀ ಕುಮಾರೇಶ್ವರ ಶಿವಯೋಗಿ ಪುಂಗವರಂತೂ ಸಮಾಜದ ಸರ್ವಾಂಗೀಣ ಪ್ರಗತಿಯ ಸಮಗ್ರ ಯೋಜನೆಯನ್ನೇ ರೂಪಿಸಿ ಅದರ ಯಶಸ್ವಿಗಾಗಿ ಹೋರಾಟವನ್ನೇ ಹೂಡಿದರು. ಅವರ ಚರಿತ್ರೆಯನ್ನು ಓದುವುದೆಂದರೆ ಸಮಾಜದ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಂಡಂತೆ; ಸಮಾಜದ ಪ್ರಗತಿ ಪೂರ್ಣ ಯೋಜನೆಯೊಂದನ್ನು ಪಡೆದು ಕೊಂಡಂತೆ; ನಾಡು ನುಡಿಗಳ ನವೋದಯಕ್ಕೆ ನೆರವಾಗುವ ಸುವರ್ಣ ಸೂತ್ರಗಳನ್ನು ಅರಿತುಕೊಂಡಂತೆ. ಶ್ರೀ 'ಮೂಜಗಂ' ಅವರು ಮಾರ್ಮಿಕವಾಗಿ ವಚನಿಸಿರುವಂತೆ ನುಡಿಗಲಿಸಿದರು, ನಡೆಗಲಿಸಿದರು.' ಪರಂಪರೆಯನ್ನು ತ್ಯಜಿಸದೆ ಪ್ರಗತಿಯನ್ನು ಬರ ಮಾಡಿಕೊಳ್ಳುವ ಪರಿಯನ್ನು ಅವರು ತೋರಿರುವಂತೆ ಇನ್ನಾರು ತೋರಿದ್ದಾರೆ? ಪರಮತ ಸಹಿಷ್ಣುತೆಯನ್ನು ಬಿಡದೆ ಸ್ವಮತ ನಿಷ್ಠೆಯನ್ನು ಹಿಡಿದು ಹಾದಿಯನ್ನು ಅವರಂತೆ ತುಳಿದು, ಇತರರಿಗೂ ತೋರಿದವರು ಎಷ್ಟು ಜನರಿದ್ದಾರೆ? ಸ್ವಯಂಪೂರ್ಣ ಸ್ವಾವಲಂಬೀ ಸಮಾಜದ, ಅನುಭಾವಿಕ-ಆರ್ಥಿಕ ಅಭ್ಯುದಯದ ಸಮನ್ವಯ ನೀತಿಯನ್ನು ಅವರಂತೆ ವಿವರಿಸಿದವರು ಎಲ್ಲಿ ಸಿಕ್ಕುತ್ತಾರೆ.

ಆದುದರಿಂದಲೇ 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ'ದಲ್ಲಿ ನಡೆದ ಸಾಧನೆಗಳಿಗೆ ವಿಶೇಷ ಮಹತ್ತ್ವವಿದೆಯೆಂದು ಹೇಳಿದುದು. ಈಗ ಎಲ್ಲ ರಂಗಗಳಲ್ಲಿ ವೀರಶೈವರ ವರ್ಚಸ್ಸು ಮಾಯವಾಗುತ್ತಿದೆಯೆಂದು ಹಳಹಳಿಸುವವರಿಗೆ, ಕಳವಳಿಸುವವರಿಗೆ ಕೊರತೆಯಿಲ್ಲ. ಆದರೆ ಯಾಕೆ ಈ ವರ್ಚಸ್ಸು ಮಾಯವಾಗುತ್ತಿದೆಯೆಂಬುದನ್ನು ವಿಶ್ಲೇಷಿಸಿ ನೋಡಬೇಡವೇ! ಇದನ್ನು ವಿಶ್ಲೇಷಿಸುವ ಮುನ್ನ ಒಂದು ವಿಷಯವನ್ನಿಲ್ಲಿ ಉಲ್ಲೇಖಿಸಲೇ ಬೇಕು. ಇದ್ದಾಗಲೂ ವೀರಶೈವರ ವರ್ಚಸ್ಸು ಕೇವಲ ವೀರಶೈವರಿಗಾಗಿ ವಿನಿಯೋಗವಾಗಿರಲಿಲ್ಲ ಅದು ಅವರ ಆಶ್ರಯ ಬೇಡಿದ ಎಲ್ಲ ದುರ್ಬಲ ವರ್ಗಗಳಿಗಾಗಿ ವಿನಿಯೋಗವಾಗುತ್ತಿದ್ದಿತೆಂಬುದು ಐತಿಹಾಸಿಕ ಸತ್ಯ. ಇದನ್ನು

ನ ಕೆಲವರು ಒಪ್ಪದಿರಬಹುದು; ಆದರೆ ಮುಂದಿನ ವಸ್ತುನಿಷ್ಠ ಇತಿಹಾಸಕಾರರಾದರೂ ಕನ್ನಡ ನಾಡಿನಲ್ಲಿ ಅನೇಕ ದಶಕಗಳ ದಲಿತೋದ್ಯಮದ, ದುರ್ಬಲ ವರ್ಗಾಭಿವೃದ್ಧಿಯ, ಅಲ್ಪ ಸಂಖ್ಯಾಕರ ಅಭ್ಯುದಯದ ಕಾರ್ಯವನ್ನು ಮಾಡುವ ಔದಾರ್ಯವನ್ನು ವೀರಶೈವರು ತೋರಿಸಿದರೆಂಬುದನ್ನು ಒಪ್ಪುವರೆಂದು ನಂಬೋಣ.

'ಈ ಸಕಲ ಸದ್ಗತಿಗೆ ವಿನಿಯೋಗವಾಗುತ್ತಲಿದ್ದ ವೀರಶೈವ ವರ್ಚಸ್ಸು' ಮಾಯವಾಗುತ್ತಿರುವುದೇಕೆ? ಶಿವಯೋಗಿಗಳಂಥವರು, ಶ್ರೀ ಕುಮಾರೇಶ್ವರ ಶಿವಯೋಗಿಗಳಂಥವರು ತಮ್ಮ ತಪಸ್ಸಿನ ತೇಜಸ್ಸಿನಿಂದ, ತ್ಯಾಗವೀರ ಲಿಂಗರಾಜ ದಾನವೀರ ವಂಟಮುರಿ ದೇಸಾಯಿಯವರು, ದಯಾವೀರ ವಾರದ ಮಲ್ಲಪ್ಪರಂಥವರು ತಮ್ಮ ಔದಾರ್ಯದ ಓಜಸ್ಸಿನಿಂದ, ಹಳಕಟ್ಟಿ, ಹರ್ಡೇಕರ, ಬಸವನಾಳ, ನಂದೀಮಠರಂಥವರು ತಮ್ಮ ಸೇವಾ ಪ್ರದೀಪದಿಂದ, ಅನೇಕ ದೇಶ ಭಕ್ತರು ತಮ್ಮ ತ್ಯಾಗ ಬಲಿದಾನಗಳಿಂದ ಸೃಜಿಸಿದ್ದ ವರ್ಚಸ್ಸನ್ನೇ ಇದುವರೆಗೆ ಉಪಯೋಗಿಸಿಕೊಂಡು ಮೆರೆದೆವು. ಹೊಸ ವರ್ಚಸ್ಸನ್ನು ಹುಟ್ಟಿಸಲಿಲ್ಲ. 'ಸಮಾಜ ನನಗೇನು ನೀಡುವುದು, ಎಂದು ಕೇಳಿದೆವಾಗಲಿ, 'ಸಮಾಜಕ್ಕೆ ನಾನೇನು ನೀಡಿದೆ?' ಎಂದು ಒಮ್ಮೆಯೂ ಕೇಳಿಕೊಳ್ಳಲಿಲ್ಲ! ಹೇಗೆ ಉಳಿವುದು ವರ್ಚಸ್ಸು?

ಬೇಡಿದೊಡನೆ ಬರುವ ವಸ್ತುವಲ್ಲ, ಪೇಟೆಯಲ್ಲಿ ಕೊಂಡು ತರುವ ವಸ್ತುವಲ್ಲ ವರ್ಚಸ್ಸು, ವ್ಯಕ್ತಿ ವ್ಯಕ್ತಿಗಳ ಶಕ್ತಿ ವಿಕಾಸವಾಗಿ, ಅದು ಸಹಿತ ಪರಹಿತಗಳಿಗಾಗಿ ವ್ಯಯವಾದಾಗಲೇ, ನಾಡು ನುಡಿಗಳ, ನಾಡಿಗರ ಸೇವೆಗಾಗಿ, ವಿಶೇಷವಾಗಿ ದೀನ ದುಃಖಿತ–ದಲಿತರ ಸೇವೆಗಾಗಿ ಸಮರ್ಪಿತವಾದಾಗಲೇ ಉದಿಸುವದು ವರ್ಚಸ್ಸು. ಹೀಗೆ ಸ್ವಶಕ್ತಿ ವಿಕಸನವನ್ನು ಸಾಧಿಸಿ, ಅದನ್ನು ಸ್ವಾರ್ಥಮಾತ್ರಕ್ಕಾಗಿ ವ್ಯಯಿಸದೆ, ಸಕಲ ಸದ್ಗತಿಗಾಗಿ ವಿನಿಯೋಗಿಸುವವರು ಸಾವಿರ ಸಾವಿರವಲ್ಲ, ಲಕ್ಷ ಲಕ್ಷ ಸಂಖ್ಯೆಯಲ್ಲಿ ಸಿದ್ಧಾಗಬೇಕು. ಸಿದ್ಧರಾಗುವುದು 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ' ಗಳಂಥ ಸಂಸ್ಥೆಗಳಲ್ಲಿಯೇ ಸಾಧ್ಯ. ಇಂಥ ಸಂಸ್ಥೆಗಳಲ್ಲಿ ನೂರು ಸಾಧಕರು ಸಿದ್ಧರಾದರೂ ಅವರಲ್ಲಿ ಒಬ್ಬೊಬ್ಬರೂ ನೂರು ಸಾಧಕರನ್ನು ಸಿದ್ಧಗೊಳಿಸಬಲ್ಲರು. ಹೀಗೆ ಜ್ಯೋತಿಯಿಂದ ಜ್ಯೋತಿ ಹೊತ್ತುತ್ತ ಸಮಾಜವೇ ಜ್ಯೋತಿರ್ಮಯವಾಗಿ ಪ್ರಕಾಶಿಸಿ ಮುನ್ನಿನ–ಅದಕ್ಕೂ ಹೆಚ್ಚಿನ ವರ್ಚಸ್ಸನ್ನು ಪಡೆದು ಹಿಂದುಳಿದವರ ಮುಂದಾಳಾಗಬಹುದು– ಹೀಗೆ ಆಗುವುದೇ? 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ'ದ ಸಾಧಕರೇ ಉತ್ತರ ಹೇಳಬೇಕು!

ಸಿದ್ಧಯ್ಯ ಪುರಾಣಿಕ
18–2–78

"ಶ್ರೀ ಗಿರಿ"
4/5A, ಅಲಿ ಅಸ್ಕರ್ ರಸ್ತೆ,
ಬೆಂಗಳೂರ–560052

# Flowers of Praise

*The following handsome tributes high-light the significant contribution of Shree Kumareshwar Shivayogi Sangha to the spiritual awakening of mankind.*

Shree Jagadguru Moorusavirmath Hubli
Hubli, India

Dear Friend;

I take this occasion, if belatedly, to send warm congratulations to the Shree Kumar Shivayog Sangha on its 12th anniversary year.

Also I want, on behalf of the officers and membership of the World Conference on Religion and Peace to salute you and your selfless devotion to humanity and the preservation of the Veerashaiva religion.

We must keep constantly in touch and I look forward to your participating In the third World Conference on Religion and Peace, to be held in the U. S. A. in mid-1979.

My wife joins me in sending to Hubli and you every good wish.

Cordially,

Dr. Homer A. Jack

*Secretary-General*

*WORLD CONFERENCE ON RELIGION AND PEACE*
*777 United Nations Plaza, New York, New York 10017, U. S. A.*
*Telephone : (code 212) 687-2163 † Cable : Relpeace New York*

February 24, 1978

## MESSAGE

### FROM ARCHBISHOP ANGELO FERNANDES
President,
World Conference of Religion for Peace

Greetings to all the Shree Jagadguru Moorusavir Math, HUBLI. I am happy to hear that the institution for aspirants "Kumareshwara Shivayogi Sangha" is having a major celebration on the occasion of the 12th anniversary of its foundation. Few will deny that the situation today, whether in India or elsewhere, calls for a deep spiritual renewal in the men of our time. The adverse influence arising from an unenlightened application of an industrial technology and economic power call for a very determined effort to bring into play the vision of man and human values that can make for peace and brotherhood. All religions have a challenging role to play in this endeavour and inasmuch as the Sangha is concerned with youth and their contribution to the life and welfare of people, it is very significant indeed.

May the young men concerned be filled with the power of the Spirit and may all concerned with the remaking of man through wisdom from on high, be blessed by the Almighty.

Archbishop Angelo Fernandes
Archbishop of Delhi
*ARCHBISHOP'S HOUSE*
*ASHOK PLACE NEW DELHI-110001.*
*20th February, 1978.*
*Phone : 343457*

# ಸಂಪಾದಕರ ಮಾತು...

ಹುಬ್ಬಳ್ಳಿ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸನ್ನಿಧಿಯುವರ ಕೃಪಾ ಛತ್ರದಲ್ಲಿ ಹಲವು-ಹನ್ನೊಂದು ಸಂಸ್ಥೆಗಳು ಮೈದಾಳಿ ಬೆಳೆಯುತ್ತಿರುವದು ಸಂತಸದ ಸಂಗತಿ. ಅವುಗಳಲ್ಲಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘವು ಒಂದು. ಇದು ಶ್ರೀ ಸನ್ನಿಧಿಯವರ ಅಚ್ಚು ಮೆಚ್ಚಿನ ಸಂಘ. ಇದೀಗ ಇದು ಹನ್ನೆರಡು ವರ್ಷದ ಅನುಭವ ಪಡೆದು ಸ್ವಾಮಿಗಳ ಸಾಧನೆ (ನಿರ್ಮಾಣ) ಕೇಂದ್ರವಾಗಿದೆ.

ಈ ಸಂಘದ ದ್ವಾದಶ ವಾರ್ಷಿಕೋತ್ಸವವನ್ನು ಆಚರಿಸಬೇಕೆಂದು ಸಂಘದ ಸಂಸ್ಥಾಪಕರಾದ ಶ್ರೀ ಜಗದ್ಗುರುಗಳವರಿಗೆ ಸಂಘದ ಸಾಧಕರು ಕೇಳಿದಾಗ ವೈಭವದಿಂದ ವಿಧಾಯುಕವಾಗಿ ಆಚರಿಸಲು ಅವರು 'ಅಸ್ತು' ಎಂದರು. ನಾವು ಪ್ರಾರಂಭದಲ್ಲಿ ನಿಯೋಜಿಸಿದ್ದ ಕಾರ್ಯಕ್ರಮ ಅತಿ ಸ್ವಲ್ಪ. ಅದು ಬೆಳೆದು ಹತ್ತು-ಹನ್ನೊಂದಾಗಿ ಪರಿಣಮಿಸಿತು. ದ್ವಾದಶ ವಾರ್ಷಿಕೋತ್ಸವದ ಸಂಸ್ಮರಣಾರ್ಥವಾಗಿ ಕೆಲವು ಪುಸ್ತಕಗಳು ಪ್ರಕಟಗೊಂಡಿವೆ ಅವುಗಳಲ್ಲಿ 'ಅರ್ಚನ' ಸಂಸ್ಮರಣ ಸಂಚಿಕೆಯು ಪ್ರಧಾನವಾದ ಗ್ರಂಥ. ಇದು ಗ್ರಂಥಕ್ಕೆ ಸಾಂಕೇತಿಕ ಹೆಸರು. ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳು ನಿಯೋಜಿಸಿದ ಧ್ಯೇಯೋದ್ದೇಶಗಳೆಲ್ಲ ಒಟ್ಟುಗೂಡಿ ಮೈದಾಳಿ, ಬಂದಂತಿರುವ, ಶ್ರೀ ಜಗದ್ಗುರುಗಳು ನಡೆಸಿದ, 'ಅರ್ಚನ'ವು ನಾಲ್ಕು ಗೋಡೆಗಳ ಮಧ್ಯ ಕುಳಿತು ಷೋಡಶೋಪಚಾರಗಳಿಂದ ಮಾಡಿದ ನೇರವಾದ ಪೂಜೆಯಲ್ಲ. ಸಮಾಜ ಸೇವೆಯೇ ಪೂಜೆಯೆಂದು ಹಗಲಿರುಳೂ ಸಮಾಜದ ಉದ್ಧಾರಕ್ಕಾಗಿ ಮಾಡಿರುವ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಜಾಗೃತಿ, ಬರಗಾಲದಲ್ಲಿ ಮಾಡಿದ ಸೇವೆ, ಅಜ್ಞಾನ, ಅಂಧಕಾರದಲ್ಲಿ ತಿರುಗಾಡುವ ಜನತೆಗೆ ಜ್ಞಾನದ ಅವಕಾಶಗಳನ್ನು ಒದಗಿಸುವಿಕೆ, ಸಾಹಿತ್ಯದ ಮೂಲಕ, ಹೃದಯ ವೈಶಾಲ್ಯತೆಯಿಂದ ಆರೋಗ್ಯಭಾಗ್ಯಕ್ಕಾಗಿ ಆರೋಗ್ಯಧಾಮ ಸ್ಥಾಪಿಸುವಿಕೆ ಹೀಗೆ ಹಲವಂದದಲ್ಲಿ ಜನತಾ

ಜನಾರ್ದನನ ಸೇವೆ ಮಾಡಿರುವುದೇ ಶ್ರೀ ಜಗದ್ಗುರುಗಳವರು ಗೈದ 'ಅರ್ಚನ'. ಕಾಲ-ದೇಶಗಳಿಗೆ ತಕ್ಕಂತೆ ಸಮಾಜದ ಅರ್ಚನೆ ಮಾಡುವಂಥ ನೂರು ನೂರು ವ್ಯಕ್ತಿಗಳನ್ನು ತಯಾರು ಮಾಡುವದು ಕುಮಾರೇಶ್ವರ ಶಿವಯೋಗಿ ಸಂಘದ ಅರ್ಚನೆ. ಅದಕ್ಕೆಂದೆ ಈ ಸಂಘದ ದ್ವಾದಶ ವಾರ್ಷಿಕೋತ್ಸವದ ಸಂಸ್ಮರಣ ಹೆಸರು 'ಅರ್ಚನ' ಎಂದು ಸಮಂಜಸವಾಗಿದೆ.

ಈ ಸಂಸ್ಮರಣ ಸಂಪುಟಕ್ಕೆ ಮುನ್ನುಡಿ ಬರೆಯಲು ಕೇಳಿದೊಡನೆ ಅಲ್ಪಾವಧಿ ಯಲ್ಲಿ ಧರ್ಮನಿಷ್ಠೆಯಿಂದ ಕನ್ನಡಮ್ಮನ ಸೇವೆಗೈದ, ಕನ್ನಡದ ಕೋಗಿಲೆ ಡಾ॥ ಸಿದ್ಧಯ್ಯನವರು ಪುರಾಣಿಕ ಅವರಿಗೆ ಸಂಪಾದಕ ಮಂಡಳಿಯವರು ಹಾಗು ಸಂಘದ ಸಮಿತಿಯವರು ಚಿರಋಣಿಯಾಗಿರುವೆವು.

ಈ ಸಂಘದಲ್ಲಿಯೇ ಸಮಗ್ರ ಹತ್ತು ವರ್ಷಗಳವರೆಗೆ ಇದ್ದು, ಅಲ್ಪಾವಧಿ ಯಲ್ಲಿಯೇ ಮೇರುಸದೃಶ ಸಾಧನೆ ಗೈದು, ಇಂದು ಡಂಬಳ-ಗದಗ ತೋಂಟದಾರ್ಯ ಮಠದ ಜಗದ್ಗುರು ಪೀಠವನ್ನೇರಿರುವ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ತಮ್ಮ ಅಮೃತ ಹಸ್ತದಿಂದ ಈ 'ಅರ್ಚನ' ಗ್ರಂಥದ ಬಿಡುಗಡೆಯನ್ನು ಮಾಡಿರುವ ಕೃಪೆಗಾಗಿ ಅವರಿಗೆ ನಾವು ತುಂಬಾ ಉಪಕೃತರಾಗಿದ್ದೇವೆ.

ಕೃಪೆ ಮಾಡಿ ಅರ್ಚನವನ್ನು ಬೆಳಕಿಗೆ ತರುವಂತೆ ಆಶೀರ್ವದಿಸಿರುವ ಶ್ರೀ 'ಮೂ. ಜ. ಗಂ.' ಸನ್ನಿಧಿಯವರಿಗೂ, ಸಮಯಕ್ಕೆ ಸರಿಯಾಗಿ ವಿದ್ವತ್ ಪೂರ್ಣ ಲೇಖನ, ಕವನಗಳನ್ನೂ ಕಳಿಸಿಕೊಟ್ಟ ಸಾಹಿತಿಗಳಿಗೂ, ಸಲಹೆ ಸೂಚನೆ ನೀಡಿರುವ ಡಾ॥ ಕೆಳದಿ ಪಟ್ಟಾಧ್ಯಕ್ಷರು (ಎಮ್. ಎ. ಪಿ. ಎಚ್. ಡಿ.) ಇವರಿಗೂ ಹಾಗೂ ತಮ್ಮ ತಮ್ಮ ಭಾವಚಿತ್ರಗಳನ್ನು ಒದಗಿಸುವದರೊಂದಿಗೆ ಎಲ್ಲ ವಿಧದಿಂದಲೂ ಜೊತೆಗೆ ಸಹಕರಿಸಿರುವ ನಮ್ಮ ಸಂಘದ ಎಲ್ಲ ಸದಸ್ಯರಿಗೂ ನನ್ನ ಹಾಗೂ ಸಮಿತಿಯ ನೆನಪುಗಳು.

ಅನೇಕ ತೊಂದರೆಗಳನ್ನು ಸಹಿಸಿಕೊಂಡು ಸಕಾಲಕ್ಕೆ ಗ್ರಂಥವನ್ನು ಅಚ್ಚು ಮಾಡಿಕೊಟ್ಟ 'ಮನೋಹರ ಪಬ್ಲಿಸಿಟಿ, ಪ್ರಿಂಟಿಂಗ್ ಪ್ರೆಸ್ಸಿನವರಿಗೆ ತುಂಬಾ ಅಭಿನಂದನೆಗಳು.

ಪ್ರಧಾನ ಸಂಪಾದಕರು
ಶ್ರೀ ಮಲ್ಲಿಕಾರ್ಜುನ ದೇವರು ಎಂ. ಎ.
ತೆಲಸಂಗ

# ಅ ರ್ಚ ನ

ಹುಬ್ಬಳ್ಳಿ ಮೂರುಸಾವಿರ ಜಗದ್ಗುರು ಪೀಠ
ಪ್ರೇರಿಸಿಹ ಶ್ರೀ ಕುಮಾರೇಶ್ವರ ಸಂಘ
ಅರ್ಚನೆಗೆ ತಂದಿಹುದು ಅಚ್ಚಮಾನಸ ಜಲವ
ಅಭಿಷೇಕ ಗೈಯಲಾನಂದದಿಂದ

ನಿಷ್ಠೆಯೇ ಬಿಲ್ವದಳ, ಅರಳಿಹ ಬಗೆಯೆ ಹೂವು
ಸಾಹಿತ್ಯ ಸಂಸ್ಕೃತಿಯು ಮಂಟಪದಲಿ
ಬೆಳಗುವರುಹೇ ದೀಪ, ಸುಳಿದ ಅನಿಸಿಕೆ ಧೂಪ
ಸುವಿವೇಕ ನುಡಿವ ನುಡಿ ಗಂಟೆಯ ದನಿ

ನಿಚ್ಚ ನಿಚ್ಚಳ ಭಾವ ತಾನೆ ಎಚ್ಚರಗೊಳಲು
ಓಜೆನಡೆವುದು ಪೂಜೆ ನೈಜದಲ್ಲಿ
ಅನುಭವವು ಅನುಭಾವವಾಗಿ ಪರಿಣಮಿಸುತಿರೆ
ಪರಿಣಾಮ ಕಾಣ ಸಮಚಿತ್ತದಲ್ಲಿ

—ಡಿ. ಎಸ್. ಕರ್ಕಿ



ನಿರ್ವಿಕಲ್ಪ ಸಮಾಧಿಸ್ಥರೂ, ಶಾಪಾನುಗ್ರಹ ಸಮರ್ಥರೂ ಆದ ಚಿರಂತನ
ಚೇತನದಾಯಿ ಮೂಲಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರು



ಶಿಕ್ಷಣ ಕ್ಷೇತ್ರದಲ್ಲಿ ಮಹಾಕ್ರಾಂತಿಯನ್ನು ಮಾಡಿದ,
ಸಮಾಜಸೇವಾ ಧುರಂಧರರಾದ
ಲಿಂ. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳವರು,
ಮೂರುಸಾವಿರಮಠ, ಹುಬ್ಬಳ್ಳಿ.



ಶ್ರೀ ಸನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳವರು ಮೂರುಸಾವಿರಮಠ ಹುಬ್ಬಳ್ಳಿ
ಸಂಸ್ಥಾಪಕರು ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ



ಅಖಿಲ ಭಾರತ ವೀರಶೈವ ಮಹಾಸಭೆ ಹಾಗು ಶಿವಯೋಗ ಮಂದಿರದ
ಸಂಸ್ಥಾಪಕರಾದ ಲಿಂ. ಕುಮಾರ ಸ್ವಾಮಿಗಳವರು ಹಾನಗಲ್ಲ.

## ಮೂರುಸಾವಿರಮಠದ

# 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ'ವು

# ನಡೆದು ಬಂದ ದಾರಿ

ನಿನ್ನಂತೆಮ್ಮಯ ಧರ್ಮದುನ್ನತಿಗೆ ಯತ್ನಂಗೈದರಾರ್ನ್ಯಾಯದಿಂ
ನಿನ್ನಂತೆಮ್ಮ ಭಿಮಾನದಗ್ಗಳಿಕೆಯಿಂದಾತ್ಮಾರ್ಪಣಂ ಗೈದರಾರ್
ನಿನ್ನಂ ಪೋಲ್ವ ಶಿವಾನುಭಾವಿಗಳವಾರ್ನೀನೇ ವಿರಕ್ತೋತ್ತಮಂ
ನಿನ್ನಿಂದಾದುದು ಮಂಗಲೋದಯಮೆಲೈ ಶ್ರೀಮತ್ಕುಮಾರೇಶ್ವರಾ ।

— ಶ್ರೀ ಚನ್ನಕವಿ.

ಇದು ಚನ್ನ ಕವಿಗಳ ನಲ್ನುಡಿ, ಕಾರಣಿಕ ಯುಗಪುರುಷ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳವರನ್ನು ಕುರಿತದ್ದು. ಈ ಶತಮಾನದ ವೀರಶೈವ ಯುಗಪ್ರವರ್ತಕರೂ ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಮದ್ವೀರ ಶೈವ ಶಿವಯೋಗ ಮಂದಿರ ಸಂಸ್ಥೆಗಳ ಸಂಜನಕರೂ ಆದ ಪರಮಪೂಜ್ಯ ಹಾನಗಲ್ಲ ಶ್ರೀ ಕುಮಾರ ಮಹಾ ಶಿವಯೋಗಿಗಳವರ ದಿವ್ಯ ಧ್ಯೇಯಾದರ್ಶಗಳ ಬಳಿವಿಡಿದು ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ದಿನಾಂಕ ೧೨-೧೨-೧೯೬೫ರಲ್ಲಿ ಸ್ಥಾಪನೆಗೊಂಡು ಇಂದಿಗೆ ಹನ್ನೆರಡು ವರ್ಷಗಳ ಇತಿಹಾಸ ನಿರ್ಮಿಸಿದೆಯೆಂದು ತಿಳಿಸಲು ಅತಿ ಆನಂದವಾಗುತ್ತಿದೆ.

ಮರ್ತ್ಯ ಲೋಕದ ಮಹಾ ಮನೆಯ ಕಲ್ಯಾಣಕ್ಕಾಗಿ ಕರ್ತನ ಪ್ರತಿನಿಧಿಗಳಾದ ಮಹಾತ್ಮರು ಅವತರಿಸಿ ಶಿವಪುರವ ಕೈಲಾಸವ ಮಾಡಿ "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂದು ಸಾರಿದರು. ಇಂದು ಪ್ರಗತಿ ಕ್ರಾಂತಿ ಅನ್ನುವುದೆಲ್ಲ ಇಂದಿಗೆ ಎಂಟುನೂರು ವರ್ಷಗಳಾಚೆ ಬಸವಣ್ಣನವರ ನೇತೃತ್ವದಲ್ಲಿ ನಡೆಯಿತು. ಇದರಿಂದ ಕನ್ನಡ ನಾಡನ್ನೇ ಪ್ರಪಂಚವೇ ಬೆರಗಾಗಿ ನೋಡುವಂತಾಯಿತು.

ಇಂಥದೇ ಒಂದು ಪ್ರಸಂಗ ೨೦ ನೇ ಶತಮಾನದ ಸಂಕ್ರಮಣ ಕಾಲದಲ್ಲಿ ನಡೆಯಿತು. ಅಂದು ಅಂದರೆ ೧೨ ನೆ ಶತಮಾನದಲ್ಲಿ ಬಸವೇಶ್ವರ ಹುಬ್ಬಳ್ಳಿ ಮೂರು ಸಾವಿರ ಮಠದ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಅಧ್ವರ್ಯುಗಳಾದರೆ ಇಂದು ಒಬ್ಬ ವೀರ ಸನ್ಯಾಸಿಯ ನೇತೃತ್ವದಲ್ಲಿ ನಾಡು ಹೊಸ ಬೆಳಕನ್ನು ಕಂಡಿತು. ಧರ್ಮ,

ಸಾಹಿತ್ಯ, ಸಂಸ್ಕೃತಿ, ಆಚಾರ ವಿಚಾರಗಳಲ್ಲಿ ಹೊಸಜೀವ ತುಂಬಿತು. ವೀರಶೈವ ಸಮಾಜದಲ್ಲಿ ಗ್ರಂಥ ಪ್ರಚಾರ ಮಾಡಿದ ಮಹನೀಯರು ಕೆಲವರು. ವಿದ್ಯಾಪ್ರಚಾರ ಮಾಡಿದ ಪುಣ್ಯಾತ್ಮರು ಕೆಲವರು. ತತ್ವೋಪದೇಶ ಮಾಡಿದವರು ಹಲವರು. ಸಮಾಜದ ಸಂಘಟನೆಗಾಗಿ ಪ್ರಯತ್ನಿಸಿದವರು ಕೆಲವರು ಇವೆಲ್ಲ ಸಾಧಿಸಿದ ಒಬ್ಬರೇ ಒಬ್ಬ ಮಹಾತ್ಮರೆಂದರೆ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು,

ಶ್ರೀ ಕುಮಾರ ಶಿವಯೋಗಿಗಳು ಸಮಾಜಕ್ಕೊಂದು ಪರಿವರ್ತನೆಯ ಕಾಲ ಕಲ್ಪಿಸಿದರು. ಸಮಾಜದ ನಾಡಿಯ ಮಿಡಿತವನ್ನು ಗುರುತಿಸಿದವರು. ವೀರಶೈವ ಸಂಸ್ಕೃತಿಯೇ ಅವರ ರೂಪದಲ್ಲಿ ಸಾಕಾರಗೊಂಡಿತ್ತು. ಯಾವ ಸಮಾಜದಲ್ಲೂ ಸಾರ್ವಜನಿಕ ಸಮ್ಮೇಲನ ನಡೆಯದಿದ್ದ ಕಾಲದಲ್ಲಿ ಸುವ್ಯವಸ್ಥಿತ ಸಮಾಜದ ಸಂಘಟನೆಗಾಗಿ ಏಕಮೇವ ಸಾಧನವಾದ ಅಖಿಲಭಾರತ ವೀರಶೈವ ಮಹಾಸಭೆಯನ್ನು ೧೯೦೪ ರಲ್ಲಿ ಸ್ಥಾಪಿಸಿದರು. "ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ" ಎಂಬಂತೆ ಮಠಗಳು ಸಮಾಜದ ಬೇರುಗಳು. ಸಮಾಜದ ಸರ್ವಾಂಗೀಣ ಪ್ರಗತಿಯಾಗಬೇಕಾದರೆ ಮಠಗಳು ಜಾಗೃತಗೊಳ್ಳಬೇಕು. ಆದ್ದರಿಂದ ಯೋಗ್ಯ ಆಚಾರನಿಷ್ಠ ಶಿವಪೂಜಾ ಧುರೀಣ ಜ್ಞಾನಿ ಮಠಾಧೀಶರನ್ನು ತರಬೇತಿಗೊಳಿಸುವುದರ ಸಲುವಾಗಿ ೧೯೦೯ ರಲ್ಲಿ ಪರಮತಪಸ್ವಿ ಇಲಕಲ್ಲ ವಿಜಯ ಮಹಾಂತ ಸ್ವಾಮಿಗಳವರು ತೋರಿದ ತಾಣದಲ್ಲಿ ಶಿವಯೋಗ ಮಂದಿರ ಸ್ಥಾಪಿಸಿದರು. ಈ ಎರಡು ಮಹಾಸಂಸ್ಥೆಗಳು ವೀರಶೈವ ಸಮಾಜ ಪುರುಷನ ಎರಡು ಶ್ವಾಸಕೋಶದಂತಿರುವವು. ಈ ಸಂಸ್ಥೆಯ ಇಡಿಯ ಬಾಳೇ ಅವರು ಬೆಳಗಿಸಿದ ಬೆಳಗು. ಆ ಬೆಳಗಿನಲ್ಲಿ ಎಷ್ಟೋ ಮಠಾಧೀಶರು ಧರ್ಮನಿಷ್ಠರಾದರು. ಅದೆಷ್ಟೋ ಜನ ಬಾಳ ಬಟ್ಟೆಯನ್ನು ಕಂಡುಕೊಂಡರು. ನಿಷ್ಠಾವಂತ ಸಮಾಜ ಸೇವಾಕರ್ತರಾದರು. ಕಲಾವಿದರು ಅಂತರ್ದೃಷ್ಟಿ ಪಡೆದರು. ಸಿರಿವಂತರು ತ್ಯಾಗರಾಜರಾದರು.

ಶ್ರೀ ಶಿವಯೋಗ ಮಂದಿರ ಸಂಸ್ಥೆಯಲ್ಲಿಯೇ ಶಿಕ್ಷಣ ಪಡೆದ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕುಮಾರೇಶನ ಕಾರುಣ್ಯ ಮೂರ್ತಿಗಳು ಭವ್ಯ ಪರಂಪರೆಯುಳ್ಳ ಶ್ರೀ ಜಗದ್ಗುರು ಮೂರುಸಾವಿರಮಠ ತನ್ನದೇ ಆದ ಹಿರಿಮೆ ಗರಿಮೆಗಳಿಂದ ಕಂಗೊಳಿಸುತ್ತಿದೆ. ಬಹುಕಾಲದಿಂದಲೂ ಸಮಾಜದ ಅಭಿವೃದ್ಧಿಗೆ, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವಲ್ಲಿಯೂ ವಹಿಸಿರುವ ಪಾತ್ರ ಅಪೂರ್ವವಾದುದು. ಇಂದಿನ ಪೀಠಾಧೀಶರಾದ ಶ್ರೀ ಜಗದ್ಗುರುಗಳವರು ಸಮಾಜದ ಸರ್ವತೋಮುಖ ಪ್ರಗತಿಗಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಸಾಹಿತ್ಯ ರಂಗದಲ್ಲಿ ಅದ್ಭುತ ಕ್ರಾಂತಿ ಮಾಡಿದ್ದಾರೆ. ನಮ್ಮ ಸಮಾಜದ ಅಗ್ರಗಣ್ಯ ನೇತಾರರೆನಿಸಿದ್ದಾರೆ. ಶ್ರೀ ಕುಮಾರೇಶನ ಸಂಕಲ್ಪಗಳನ್ನು ನೆರವೇರಿಸಿದ ಕರ್ತೃತ್ವಶಾಲಿಗಳು. ಹಲವಾರು ಸಂಘ ಸಂಸ್ಥೆಗಳಿಗೆ ಜನ್ಮವಿತ್ತುದಲ್ಲದೇ ಚೇತನಸ್ವರೂಪರಾಗಿದ್ದಾರೆ. ಶ್ರೀ ಕುಮಾರೇಶ್ವರರ ಧ್ಯೇಯಾ

ದರ್ಶಗಳನ್ನು ಮುನ್ನಡೆಸುವ ದೃಢಸಂಕಲ್ಪ ಅವರದಾಗಿದೆ. ಮಠಾಧೀಶರು ಪ್ರಾಚೀನ ಅರ್ವಾಚೀನ ಸಂಸ್ಕೃತಿಯ ಪ್ರತಿನಿಧಿಗಳಾಗಿ ಸಮಾಜ ಪ್ರೇಮಿಗಳಾಗಬೇಕು. ಇಂದಿನ ವಿಕ್ಷಿಪ್ತಯುಗದಲ್ಲಿ ಧರ್ಮವನ್ನು ಸಮರ್ಥರೀತಿಯಲ್ಲಿ ಎತ್ತಿಹಿಡಿಯುವ ಜಾಗೃತ ವ್ಯಕ್ತಿಗಳ ನಿರ್ಮಾಣವಾಗಬೇಕಿದೆ. "ಪ್ರತಿಯೊಂದು ಮಠಗಳೂ ಶಿವಯೋಗ ಮಂದಿರವಾಗಬೇಕು" ಎಂಬ ಶ್ರೀ ಕುಮಾರೇಶ್ವರರ ಆಸೆ. ದೇಶ ವಿದೇಶಗಳಲ್ಲಿ ವೀರಶೈವ ಧರ್ಮ ಪ್ರಚಾರವಾಗಬೇಕು ಎಂಬ ಶ್ರೀ ಜಗದ್ಗುರುಗಳವರ ವಿಚಾರಗಳ ಒಟ್ಟಾಭಿಪ್ರಾಯದ ವ್ಯಕ್ತರೂಪವೇ " ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ " ಎಂಬ ಅಭಿದಾನದಿಂದ ದಿನಾಂಕ ೧೨-೧೨-೧೯೭೫ ರಲ್ಲಿ ಶ್ರೀ ಜಗದ್ಗುರು ಮೂರುಸಾವಿರ ಮಠದಲ್ಲಿ ಪ್ರಾರಂಭವಾಯಿತು. "ಸ್ವಾಮಿತ್ವದ ಸುಸಂಸ್ಕೃತಿಯು ಕಡಿಮೆಯಾಗದಂತೆ ಚತುರ್ಭಾಷೆಗಳಲ್ಲಿ ಪಾಂಡಿತ್ಯಪಡೆದು ಆತ್ಮಶಕ್ತಿ-ವಾಗ್ವೈಖರಿಯಿಂದಲೂ ಜಾಗತಿಕ ಜನ ಜಾಗೃತಿ ಮಾಡಬೇಕೆಂಬ ಶ್ರೀ ಕುಮಾರಶಿವಯೋಗಿಗಳ ಉದ್ದೇಶ ಸಫಲಗೊಳಿಸಲು ಅವರ ಕಮ್ಮಟದಲ್ಲಿ ತಯಾರಾದ ನಾವಿಂದು ಈ ಸಂಘ ಸ್ಥಾಪನೆಗೆ ಅವಕಾಶ ಮೀಯುತ್ತಿದ್ದೇವೆ" ಎಂದು ಶ್ರೀ ಜಗದ್ಗುರುಗಳವರು ಸ್ಥಾಪನೆಮಾಡಿದರು. ಸಂಘದ ಉದ್ಘಾಟನೆ ನೆರವೇರಿಸಿದ ನವಿಲಗುಂದ ಗವಿಮಠದ ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳವರು "ಶಿವಯೋಗದಿಂದ ಅಧ್ಯಾತ್ಮ ಶಕ್ತಿಯನ್ನು ಬೆಳೆಯಿಸಿಕೊಂಡು ಆ ಶಕ್ತಿಯನ್ನು ಸಮಾಜದ ಸರ್ವತೋಮುಖ ಪ್ರಗತಿಗೆ ಉಪಯೋಗಿಸುವುದು" ಎಂಬ ಶ್ರೀ ಕುಮಾರೇಶ್ವರರ ಉದ್ದೇಶವನ್ನು ಶ್ರೀ ಜಗದ್ಗುರುಗಳವರು ತಮ್ಮೀ ಮೂರುಸಾವಿರ ಮಠದಲ್ಲಿ ಈಡೇರಿಸಿದ್ದು ಸ್ವಾಗತಾರ್ಹ" ಎಂದು ಸಂಘವನ್ನು ವಿಧ್ಯುಕ್ತವಾಗಿ ಉದ್ಘಾಟಿಸಿದರು. ಶಿವಯೋಗಿಗಳ ಕಮ್ಮಟದ ಉದಯ ಸಮಾಜದ ಸರ್ವೋದಯದ ನಾಂದಿಯಾಯಿತು.

ಶಿವಯೋಗಮಂದಿರ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಆಚರಣೆಯಲ್ಲಿ ತರುವ ದೃಢಸಂಕಲ್ಪ. ಜೀವನವನ್ನು ದೇವನನ್ನಾಗಿಸುವುದು ಆತ್ಮಶ್ರೇಯ ಬೆಳವಣಿಗೆಗಾಗಿ ಅನುಷ್ಠಾನಾದಿಗಳನ್ನು ಮಾಡುವುದು. ತತ್ವಜಿಜ್ಞಾಸೆಗಾಗಿ ವಿದ್ಯಾಪರಿಣತಿ. ಸಮಾಜ ನೇತಾರರಾಗಿರಬೇಕಾದ ನೈತಿಕ ಸಂಪದಗಳಿಸಿಕೊಳ್ಳುವುದು. ಬಹುಭಾಷಾಜ್ಞಾನ, ಪ್ರವಚನ, ಲೇಖನ ಕಲೆಗಳಲ್ಲಿ ಪ್ರಾವೀಣ್ಯತೆ, ಲೌಕಿಕ ಅಧ್ಯಾತ್ಮಿಕಗಳೆರಡರ ಸಮರಸ ಬಾಳುವೆಯ ಜಾಣತನ. ಹೀಗೆ ಪರಿಪೂರ್ಣ ವ್ಯಕ್ತಿತ್ವದ ಸಾಧಕರ ನಿರ್ಮಾಣವೇ ಸಂಘದ ಮೂಲಭೂತ ಉದ್ದೇಶ. ಸಮಾಜದ ಕೇಂದ್ರಗಳೆಂತಿರುವ ಮಠಗಳ ಒಬ್ಬ ಆದರ್ಶ ಸ್ವಾಮಿಗಳಾಗಲು ಬಯಸುವ ಸಾಧಕರಿಗೆಲ್ಲಾ ಸಂಘದ ಹಾರ್ದಿಕ ಸ್ವಾಗತ. ಸಂಘದ ನಿಯಮಗಳ ಪಾಲನೆಯಲ್ಲಿ ನಿಷ್ಠೆ. ಸಾಧನೆಯ ಬಗೆಗಿನ ಒಲವು, ಸಾಧಕರ ಪ್ರವೇಶಾರ್ಹತೆಗಳು.

ಪ್ರಾತಃಕಾಲ ೪-೩೦ಕ್ಕೆ ಹೂಬಳ್ಳಿ ಪುರಪುಣ್ಯ ಕರ್ತೃ ಜಗದ್ಗುರು ಗುರು ಸಿದ್ಧೇಶ್ವರ ಸುಪ್ರಭಾತ ಪ್ರಾರ್ಥನೆಯೊಂದಿಗೆ ಆರಂಭವಾದ ಸಾಧಕರ ದಿನಚರಿ,

ಯೋಗಾಸನಗಳು, ಅಭ್ಯಾಸ, ಅನುಷ್ಠಾನ, ಅರ್ಚನೆ, ಅರ್ಪಣ, ಅನುಭವ ಸಾಮೂಹಿಕವಾಗಿ ಸಾಗುವವು. ವಿವಿಧತೆಯಲ್ಲಿಯೂ ಏಕತೆಯ ಸಹಬಾಳ್ವೆ, ನಿಯಮಿತತನ ಇಲ್ಲಿಯ ವೈಶಿಷ್ಟ್ಯಗಳು. ಮಾತೃಭಾಷೆಯೊಂದಿಗೆ ಸಂಸ್ಕೃತ ಭಾಷೆಯ ಕಡ್ಡಾಯ ಶಿಕ್ಷಣ, ಪೂರಕವಾಗಿ ಇಂಗ್ಲೀಷ, ಹಿಂದಿ ಭಾಷೆಗಳಲ್ಲಿ ಪರಿಣತಿ ಪಡೆಯುವರು. ಸಂಜೆ ೫ ರಿಂದ ೬ರ ವರೆಗೆ ಶಿವಾನುಭವ ಪ್ರವಚನ ನಡೆಯುವುದು. ರಾತ್ರಿ ಹತ್ತು ಗಂಟೆಯ ವರೆಗೆ ದೈನಂದಿನ ಚಟುವಟಿಕೆಗಳು ನಡೆದು ವೈಯಕ್ತಿಕ ಪ್ರಾರ್ಥನೆಯ ನಂತರ ಮುಕ್ತಾಯವಾಗುವದು.

ಶ್ರೀ ಜಗದ್ಗುರು ಮೂರುಸಾವಿರಮಠ ಇದು ಶಿವಯೋಗಿಗಳ ಕಮ್ಮಟ. ಸಾಧಕರಿಗೆ ಏನೆಲ್ಲ ಅನುಭವಗಳು ಬೇಕೋ ಅವು ಇಲ್ಲಿ ಸಹಜ ಸಿದ್ಧ. ಲೇಖನ ಕಲೆಯ ಅಭಿವೃದ್ಧಿಗಾಗಿ "ಧರ್ಮತರಂಗಿಣಿ" ಎಂಬ ಕೈಬರಹದ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸಲಾಗುತ್ತಿದೆ. ಪ್ರೌಢ ಬರಹಗಳಿಗೆ ಪರಂಜ್ಯೋತಿ ಮಾಸಿಕ ಪತ್ರಿಕೆ ಸಹಕರಿಸುತ್ತಿದೆ. ಶ್ರೀಮಠದ ವಿವಿಧ ಸಂಸ್ಥೆಗಳ ನಿಕಟ ಸಂಪರ್ಕ ಆಡಳಿತ ಜ್ಞಾನಕ್ಕೆ ಪೋಷಕ. ಎಲ್ಲ ವಿಷಯಗಳ ಕ್ರಿಯಾತ್ಮಕ ಜ್ಞಾನ ಸಾಧಕರಿಗೆ ದೊರೆಯುತ್ತಿರುವುದು ಇಲ್ಲಿನ ವಿಶೇಷ. ಪಾಕ್ಷಿಕ ಕಾರ್ಯಕ್ರಮಗಳನ್ನೇರ್ಪಡಿಸಿ ವಿವಿಧ ವಿಷಯಗಳ ಕುರಿತು ಉಪನ್ಯಾಸಗಳನ್ನೇರ್ಪಡಿಸಲಾಗುತ್ತಿದೆ. ನಿತ್ಯವೂ ಶಿವಾನುಭವ ಮಂಟಪದಲ್ಲಿ ಧರ್ಮಗ್ರಂಥಗಳ ಕುರಿತ ಪ್ರವಚನ ನಡೆಯುವುದು. ಇದೊಂದು ಎಳೆಯ ಬೆಳೆವ ಸಾಧಕರ ಅನುಭವದ ಜೇಂಗೊಡ. ಮುಕ್ತ ಮನದ ಚರ್ಚೆ ಸಹಕಾರಿ. ಸಾಧಕರ ವಕ್ತೃತ್ವ ಕಲೆಗೆ, ತತ್ವಚಿಂತನೆಗೆ ಪ್ರೇರಕ. ನಾಡಿನ ಅನೇಕ ಭಾಗಗಳಲ್ಲಿ ವಿವಿಧ ಕಾರ್ಯಕ್ರಮಗಳಲ್ಲಿ ಭಾಷಣ, ಪ್ರವಚನ, ಪುರಾಣಗಳಿಂದ ಧರ್ಮಪ್ರಚಾರ ಮಾಡಿ ಜನತೆಯ ಗಮನ ಸೆಳೆದಿದ್ದಾರೆ. ಆಗಾಗ್ಗೆ ದೇಶ ವಿದೇಶಗಳಲ್ಲಿಯೂ ಶೈಕ್ಷಣಿಕ ಹಾಗೂ ಧರ್ಮಪ್ರಸಾರಾರ್ಥ ಪ್ರವಾಸ ಕೈಗೊಂಡು ದೇಶ ಕೋಶ ಬಲ್ಲಿದರೆನಿಸಿದ್ದಾರೆ.

ಬುದ್ಧದೇವನು ಸಾರಾನಾಥದಲ್ಲಿ ೫ ಜನ ಶಿಷ್ಯರಿಗೆ ಪ್ರಥಮೋಪದೇಶ ಮಾಡಿದಂತೆ; ನಮ್ಮ ಸಂಘವು ೫ ಜನ ಸಾಧಕರಿಂದ ಆರಂಭವಾಗಿದ್ದು ಅಲ್ಪಾವಧಿಯಲ್ಲೇ ೨೩ ಜನ ಸಾಧಕರನ್ನು ತರಬೇತಿಗೊಳಿಸಿ ಸಮಾಜಕ್ಕೆ ಕೊಡಮಾಡಿರುವುದು ಹೆಮ್ಮೆಯ ಸಂಗತಿ. ಇವರಲ್ಲಿ ಆರುಜನ M. A. ಪದವೀಧರರೂ, B. A. ಮೂವರು, ಮೂವರು ವಿದ್ವತ್, ಇಬ್ಬರು ಕಾವ್ಯತೀರ್ಥ, ಮೂವರು ರಾ. ಭಾ. ಹಿಂದಿರತ್ನ, ಮುಂಬೈ ಹಿಂದಿ ವಿದ್ಯಾಪೀಠದಿಂದ ೫ ಜನ ಭಾಷಾರತ್ನ ಪದವಿ ಭೂಷಿತರಾಗಿದ್ದಾರೆ. ಉಳಿದವರು ಅನುಷ್ಠಾನ, ಧರ್ಮಶಾಸ್ತ್ರ ಪಾರಂಗತರೂ ಆಗಿರುತ್ತಾರೆ. ಭಾಷಣ ಪ್ರವಚನ ಕಲೆಗಳಲ್ಲಿ ನಾಡಿನಲ್ಲಿ ಒಳ್ಳೆ ಹೆಸರು ಗಳಿಸಿದ್ದಾರೆ. ಕರ್ನಾಟಕದ ಎಲ್ಲ ಕ್ಷೇತ್ರಗಳನ್ನು ಸಂಚರಿಸಿರುವರಲ್ಲದೆ ಪಾಂಡಿಚೇರಿ ಅರವಿಂದಾಶ್ರಮ, ರಾಮಕೃಷ್ಣಾಶ್ರಮ, ಮೊದಲಾದ ವಿವಿಧ ಸಂಸ್ಥೆಗಳನ್ನು ಸಂದರ್ಶಿಸಿ ವಿವಿಧ ಭಾಷಾ, ಸಂಸ್ಕೃತಿಗಳ

ಅಧ್ಯಯನ ನಡೆಸಿ ಹಿಂದು ಧರ್ಮದ ಸಮನ್ವಯದ ಪ್ರತೀಕರೆನಿಸಿದ್ದಾರೆ. ಒಬ್ಬ ಸಾಧಕರು ಬೆಲ್ಜಿಯಂದಲ್ಲಿ ನಡೆದ ಸರ್ವಧರ್ಮಶಾಂತಿ ಸಮ್ಮೇಳನದಲ್ಲಿ ಭಾಗವಹಿಸಿದ್ದರೆ ಮತ್ತೊಬ್ಬರು ಸಿಂಗಪುರದ ಸಮ್ಮೇಳನದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ವೀರಶೈವ ಧರ್ಮ ತತ್ವಗಳನ್ನು ಬಿತ್ತರಿಸಿ ಬಂದಿರುವುದು ಸಂಘದ ಮಹತ್ವದ ದಾಖಲೆಗಳಾಗಿವೆ. ಈ ಎಲ್ಲ ಸಾಧಕರು ಸದ್ಯಃ ನಾಡಿನ ವಿವಿಧ ಮಠಗಳ ಅಧಿಪತಿಗಳಾಗಿದ್ದು, ಆಯಾ ಭಾಗದಲ್ಲಿ, ಧರ್ಮಜಾಗೃತಿಯ ಮಹಾ ಮಣಿಹದಲ್ಲಿ ತೊಡಗಿದ್ದಾರೆ. ಶ್ರೀ ಕುಮಾರೇಶ್ವರರ ತತ್ವಗಳು ಹಾಗೂ ಶ್ರೀ ಜಗದ್ಗುರುಗಳವರ ಸತ್ಯ ಸಂಕಲ್ಪಗಳನ್ನು ಈಡೇರಿಸುತ್ತಿರುವುದು ಸಂತಸದ ಸಂಗತಿ. ಜನತೆಯ ಬೇಕು ಬೇಡಗಳನ್ನು ಅರಿತು ಕಾರ್ಯಪ್ರವೃತ್ತರಾಗಿರುವುದು ಸಂಘದ ಸಾಧನೆಯ ಫಲ. ಸಧ್ಯಃ ಸಂಘದಲ್ಲಿ ಹನ್ನೆರಡು ಜನ ಸಾಧಕರು ಅಭ್ಯಾಸಮಾಡುತ್ತಿದ್ದು ಭವಿಷ್ಯದ ಆಶಾಕಿರಣಗಳಾಗಿದ್ದಾರೆ.

ವಿದ್ಯೆಯ ತೌರು ಧಾರವಾಡ. ಸ್ನಾತಕೋತ್ತರ ಪದವಿ ಪರೀಕ್ಷೆಗಳನ್ನು ಪಡೆಯುವ ಸಾಧಕರಿಗೆ ಅನುಕೂಲವಾಗುವಂತೆ ಇಲ್ಲಿಯ ಶಾಖಾ ಮೂರುಸಾವಿರ ಮಠದಲ್ಲಿಯೂ ಸರ್ವ ವ್ಯವಸ್ಥೆಗಳನ್ನು ಮಾಡಿದ್ದು, ಸಂಘದ ಶಾಖೆಯಾಗಿ ಈ ಸಂಘವು ಕಾರ್ಯ ಮಾಡುತ್ತಿದೆ.

ಸಂಘದ ಕಾರ್ಯಕಲಾಪಗಳೆಲ್ಲ ಮಹಾಪೋಷಕರಾದ ಶ್ರೀ ಜಗದ್ಗುರು ಮಹಾಸನ್ನಿಧಿಯವರ ಕೃಪೆಯಿಂದಲೇ ಸಾಗಿವೆ. ಕಳೆದ ವರ್ಷ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ಟ್ರಸ್ಟ್-E-476 ಎಂಬ ಪ್ರತ್ಯೇಕ ಆಡಳಿತ ಮಂಡಳಿಯು ರಚಿತವಾಗಿದೆ. ಬಹುಬೆಲೆಯುಳ್ಳ ಶ್ರೀ ಮಠದ ಕೆಲ ಆಸ್ತಿಯನ್ನು ಸಂಘವು ಹೊಂದಿದ್ದು ಆರ್ಥಿಕವಾಗಿ ಸಂಘದ ಭವಿಷ್ಯ ಭದ್ರವಾಗಿದೆ. ಸದ್ಯದಲ್ಲಿಯೇ ಸ್ವತಂತ್ರವಾದ ಭವ್ಯ ಮಂದಿರವನ್ನು ನಿರ್ಮಿಸುವ ಯೋಜನೆ ತಯಾರಾಗಿದೆ. ಶ್ರೀ ಜಗದ್ಗುರುಗಳವರ ಮಾರ್ಗದರ್ಶನದಲ್ಲಿ ಸಾಕಧರಲ್ಲೊಬ್ಬರು ಕಾರ್ಯದರ್ಶಿಗಳಾಗಿದ್ದು ಕಾರ್ಯಚಟುವಟಿಕೆಗಳನ್ನು ನಡೆಸುತ್ತಿರುವರು.

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳವರ ಪೂರ್ಣ ಕೃಪೆ, ನಿರಂತರ ಮಾರ್ಗದರ್ಶನ, ವಾತ್ಸಲ್ಯದ ಬಹುಪಾಲು ಸಂಘಕ್ಕೆ ಮೀಸಲು. ಈ ಸಂಘ ಹನ್ನೆರಡರ ಎಳೆಯ ಹರೆಯದಲ್ಲಿದ್ದರೂ ನಾಡಿನಲ್ಲಿ ಒಳ್ಳೆಯ ಹೆಸರು ಮಾಡಿದೆ. ಸಮಾಜದ ಆಶಾಕಿರಣವಾಗಿದೆ. ಜನತೆಯ ಅಪಾರ ಗೌರವಾದರಗಳಿಗೆ ಪಾತ್ರವಾಗಿರುವುದು ಗಮನಾರ್ಹಸಂಗತಿ. ಒಂದು ಸಂಘದ ಜೀವನದಲ್ಲಿ ಹನ್ನೆರಡು ವರ್ಷಗಳಕಾಲ ಹಿರಿದಾದುದೇನೂ ಅಲ್ಲವಾದರೂ ದ್ವಾದಶ ವರ್ಷದ ಒಂದು ಪಟ್ಟ ಭವಿಷ್ಯದ ಮಹತ್ವದ ಘಟ್ಟ. ಸಾಧನಾಪಥದಲ್ಲಿ ಒಂದು ಮೈಲಿಗಲ್ಲು. ಸಾಧಿಸಿದ ಪ್ರಗತಿ ಅಪೂರ್ವ. ಯಾವುದೇ ಬಾಲಗ್ರಹ ಪೀಡಿತವಾಗದೆ ಯಶಸ್ವಿ

ಯಾಗಿ ಮುನ್ನಡೆದಿರುವುದು ಶ್ರೀಕುಮಾರೇಶ್ವರ ಕೃಪೆ. ಶ್ರೀಜಗದ್ಗುರು ಮಹಾಸನ್ನಿಧಿಯವರ ಸತ್ಸಂಕಲ್ಪ. ಸಾಧಕರ ಸಾಧನೆಯ ಫಲ. ಸಮಾಜದ ಪ್ರಾತಿನಿಧಿಕ ಸ್ವರೂಪದಲ್ಲಿ ದ್ವಾದಶ ವಾರ್ಷಿಕೋತ್ಸವವು ವಿಧಾಯಕವಾಗಿ ನೆರವೇರುತ್ತಿರುವುದು ಸಂತಸದ ಸಂಗತಿ: ಸಮಾಜದ ಕಲ್ಯಾಣಕ್ಕೆ ಪಣ ಕಟ್ಟಿ ನಿಂತಿರುವ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ನಿರಂತರವಾಗಿ ಬೆಳೆದು ಆದರ್ಶ ಸಂಸ್ಥೆಯಾಗಿ ಜನಮನದ ಕತ್ತಲೆಯನ್ನು ಕಳೆದು ಮರ್ತ್ಯ ಲೋಕವನ್ನು ಕರ್ತಾರನ ಕಮ್ಮಟವನ್ನಾಗಿಸಿ ಇಲ್ಲಿ ಸಲ್ಲಿ, ಎಲ್ಲೆಲ್ಲಿಯೂ ಸಲ್ಲುವ ಬಲ್ಲಿದರನ್ನಾಗಿಸುವಂತಾಗಲೆಂದು ಬಯಸುತ್ತಿದ್ದೇವೆ.

ಕಾರ್ಯದರ್ಶಿ

— ಶ್ರೀ ವಿಶ್ವನಾಥದೇವರು ರುದ್ರಾಕ್ಷಿಮಠ

# ' ವರದಾನಿ ಗುಡ್ಡವ್ವೆ '

## ( ಚಾರಿತ್ರಿಕ ವಿವರಗಳು )

ಲೇಖಕರು : ಪ್ರೊ. ಬಿ. ಸಿ. ಜವಳಿ, ಎಂ. ಎ.
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ. ವಿ. ಧಾರವಾಡ

[ ೧ ]

ಗುಡ್ಡವ್ವೆ ಎಂಬ ಹೆಸರು ಕನ್ನಡಿಗರ ಹೆಸರು; ಕನ್ನಡ ಭಾಷೆಯ ಪದವಾಗಿದೆ. ಗುಡ್ಡ ಮತ್ತು ಅವ್ವೆ ಎಂಬ ಎರಡು ಪದಗಳಿಂದ ಕೂಡಿದ ಸಮಸ್ತ ಪದವಾಗಿದೆ. ಗುಡ್ಡ ಎಂಬುದು 'ಶಿಷ್ಯ' ಎಂಬ ಅರ್ಥವನ್ನು ಕೊಡುತ್ತಿದೆ. ಮಣ್ಣು ಕಲ್ಲ ಗುಡ್ಡ ಎಂದೂ ಅರ್ಥಗಳಿವೆ. ಆದರೆ ಆ ಅರ್ಥವು 'ಗುಡ್ಡವ್ವೆ' ಎಂಬ ಪದದಲ್ಲಿಲ್ಲ. ಗುಡ್ಡಪ್ಪ, ಗುಡ್ಡಮ್ಮ ಎಂಬ ಹೆಸರುಗಳನ್ನು ಕನ್ನಡಿಗರು ಧರಿಸುತ್ತಾರೆ. ಗುಡ್ಡ ಎಂಬುದು ಪರ್ವತ ಅಥವಾ ಗುಡ್ಡದ ಸಂಕೇತವಾಗಿದೆ. ಮೈಲಾರಲಿಂಗನ ಭಕ್ತರು ರಾಣೇಬೆನ್ನೂರ ಬಳಿ ಇರುವ ದೇವರಗುಡ್ಡ ಎಂಬ ಕ್ಷೇತ್ರಕ್ಕೆ ನಡೆದು ಕೊಳ್ಳುತ್ತಾರೆ. ದೇವರಗುಡ್ಡದಲ್ಲಿರುವ ಮೈಲಾರಲಿಂಗನ ಸ್ಮಾರಕವಾಗಿ ಗುಡ್ಡದಯ್ಯ, ಗುಡ್ಡಯ್ಯ, ಗುಡ್ಡಪ್ಪ ಎಂದು ಇಂದಿಗೂ ಜನ ಹೆಸರಿಡುತ್ತಾರೆ.ಅದರಂತೆಯೇ ಹಿಂದಿನ ಕಾಲದಲ್ಲಿ 'ಶ್ರೀಶೈಲ' ಪರ್ವತಕ್ಕೆ ಸಂಕೇತವಾಗಿ 'ಪರ್ವತ' 'ಗುಡ್ಡ' ಎಂದು ಕರೆದು 'ಪರ್ವತಪ್ಪ', 'ಗಿರಿಯಪ್ಪ', 'ಗುಡ್ಡಪ್ಪ' 'ಗುಡ್ಡವ್ವ' ಎಂದು ಹೆಸರಿಡುತ್ತಿದ್ದರು. ಅಂತಹ ಹೆಸರುಗಳಲ್ಲಿಯೇ ಗುಡ್ಡವ್ವೆಯ ಹೆಸರೂ ಒಂದೆಂದು ತಿಳಿಯಬಹುದಾಗಿದೆ. ಶ್ರೀಗಿರಿಯ ಮಹಿಮೆಯೂ ಆ ಕಾಲದಲ್ಲಿ ಎಷ್ಟಿತ್ತೆಂಬುದಕ್ಕೆ ಇದನ್ನೂ ಒಂದು ನಿದರ್ಶನವೆಂದು ತೆಗೆದುಕೊಳ್ಳಬಹುದು. ಈಕೆಯು ಮಹಾದಾಸಿಯಾಗಿದ್ದುದರಿಂದ 'ವರದಾನಿ', 'ದಾನಮ್ಮ' ಎಂಬ ಹೆಸರುಗಳಿಂದಲೂ ಪ್ರಸಿದ್ಧಳಾಗಿದ್ದಾಳೆ. ತನ್ನ ದಾನದ ಗುಣದಿಂದ ಈಕೆ ಜೈನರಲ್ಲಿ ಪ್ರಸಿದ್ಧಳಾದ 'ದಾನಚಿಂತಾಮಣಿ' ಯೆಂದು ಹೆಸರು ಪಡೆದ ಅತ್ತಿಮಬ್ಬೆಯನ್ನು ಸ್ಮರಣೆಗೆ ತರುತ್ತಾಳೆ. ಹೆಣ್ಣುಮಕ್ಕಳ ಕೈ ಯಾವಾಗಲೂ ವರದ ಹಸ್ತವೂ, ದಾನದ ಹಸ್ತವೂ ಆಗಿರುವುದು ನಮಗೆಲ್ಲ ಪರಿಚಿತ. ಈಕೆಯು ಪ್ರಸಿದ್ಧ ಶರಣೆಯೆಂದು ಬಹುಕಾಲದ ಹಿಂದೆಯೇ ಮನ್ನಣೆ ಪಡೆದಿದ್ದಾಳೆ. ಈಕೆಯು ಬಾಳಿದ ಸ್ಥಳವು ಇಂದಿಗೂ ಭಕ್ತಾದಿಗಳಿಗೆ ಜಾಗ್ರತ ಸ್ಥಳವೂ, ಪ್ರಸಿದ್ಧ ಕ್ಷೇತ್ರವೂ ಆಗಿದೆ. ವೀರಶೈವ ಶರಣೆಯರಾದ ಮಹದೇವಿಯಕ್ಕ, ಅಕ್ಕನಾಗಮ್ಮ, ಗಂಗಾಂಬೆ, ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ ಮೊದಲಾದವರಂತೆ ಗುಡ್ಡಾಪುರದ ದಾನಮ್ಮನೂ ಆ ಪದವಿಗೆ ಸೇರಿದ ಸ್ತ್ರೀಯಾಗಿದ್ದಾಳೆ. ಕಲ್ಯಾಣದ ಶ್ರೀ ಬಸವೇಶ್ವರರ

ತತ್ವ ಮತ್ತು ಉಪದೇಶಗಳನ್ನು ಜನತೆಯಲ್ಲಿ ಪ್ರಸಾರ ಮಾಡುವುದರಲ್ಲಿ ಈ ಶರಣೆಯು ನಿರತಳಾಗಿದ್ದಳೆಂದು ಕಂಡುಬರುತ್ತದೆ. ಈಕೆಯು ಬಸವಣ್ಣನವರ ತರುವಾಯ ಬಾಳಿದಳೆಂದು ತಿಳಿದುಬರುತ್ತದೆ. ತನ್ನ ಧರ್ಮಪ್ರಸಾರ ಕಾರ್ಯ ಮಾಡುವಲ್ಲಿ ಈಕೆಯು ಒಳ್ಳೆಯ ಪೌರುಷವನ್ನು ತೋರಿ, ಪರಧರ್ಮೀಯರನ್ನು ಗೆದ್ದು ಅವರಲ್ಲಿ ವೀರಶೈವ ಧರ್ಮವನ್ನು ಪ್ರಸಾರ ಮಾಡಿದ್ದಾಳೆ. ಈಕೆ ಆಂಧ್ರ, ಕರ್ನಾಟಕ, ಮಹಾರಾಷ್ಟ್ರ, ಮೊದಲಾದ ರಾಜ್ಯಗಳ ಹಲವು ಭಾಗಗಳಲ್ಲಿ ಸಂಚರಿಸಿ ಧರ್ಮಪ್ರಸಾರ ಮಾಡಿದಳೆಂದು ಪ್ರತೀತಿ ಇದೆ. ತನ್ನ ಕಾಲದಲ್ಲಿ ದಾನಮ್ಮ ಅಂದಿನ ಜನತೆಯ ಮೇಲೆ ಸಾಕಷ್ಟು ಪ್ರಭಾವ ಬೀರಿದಳೆಂದು ಕಂಡುಬರುತ್ತಿದೆ. ಅವಳು ಒಳ್ಳೆಯ ಸಮಾಜ ಸೇವಕಿಯೂ ಆಗಿದ್ದಳು. ವೀರಭಕ್ತರಾದ ಏಕಾಂತದ ರಾಮಯ್ಯ, ಪುಲಿಗೆರೆಯ ಆದಯ್ಯರ ಹಾಗೆ ವೀರಭಕ್ತಿಯಿಂದ ವೀರಶೈವಧರ್ಮವನ್ನು ಬೆಳಗಿದ ಶರಣೆ ಈಕೆ. ಗುಡ್ಡವ್ವೆಯ ಬಗೆಗೆ ಹರಿಹರ ಕವಿಯ ರಗಳೆ, ಭೀಮಕವಿಯ ಬಸವ ಪುರಾಣ, ಪದ್ಮರಾಜ ಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ, ಚೆನ್ನಬಸವಪುರಾಣ ಮೊದಲಾದ ಕೃತಿಗಳಲ್ಲಿ ಅವಳ ಚರಿತ್ರೆ, ಸಾಧನೆಗಳ ವಿಷಯದಲ್ಲಿ ಸಾಮಗ್ರಿ ದೊರೆಯುತ್ತಿದೆಯಲ್ಲದೆ ಶಾಸನಗಳಲ್ಲಿಯೂ (ಇಲ್ಲಿಯವರೆಗೆ ನಾಲ್ಕು ಶಾಸನಗಳಲ್ಲಿ) ಅವಳ ಚರಿತ್ರೆಯು ಉಪಲಬ್ಧವಿರುವದರಿಂದ ಅವಳು ಪೌರಾಣಿಕವೂ ಕಾಲ್ಪನಿಕವೂ ಆದ ವ್ಯಕ್ತಿಯಲ್ಲ, ಐತಿಹಾಸಿಕ ವ್ಯಕ್ತಿಯೆಂಬುದು ಸುಸ್ಪಷ್ಟವಿದೆ. 'ಸೌಥ ಇಂಡಿಯನ್ ಇನ್‌ಸ್ಕ್ರಿಪ್ಶನ್ಸಿನ', ಸಂಪುಟ ೧೫ರಲ್ಲಿ ೫೬ನೆಯ ನಂಬರಿನ ತಾಳೀಕೋಟೆಯ ಶಾಸನ ಶರಣಸಾಹಿತ್ಯ (ಸಂಪುಟ ೨೧, ಸಂಚಿಕೆ ೧)ದಲ್ಲಿ ಪ್ರಕಟವಾದ ಇಂಗಳಗಿಯ ಶಾಸನ, 'ಇನ್‌ಸ್ಕ್ರಿಪ್ಶನ್ಸ ಇನ್ ನಾರ್ದರ್ನ ಕರ್ನಾಟಕ ಆ್ಯಂಡ ಕೊಲ್ಹಾಪುರ್ ಸ್ಟೇಟ' ಎಂಬ ದಿವಂಗತ ಕುಂದಣಗಾರರ ಪುಸ್ತಕದಲ್ಲಿಯ ಬಿಜಾಪುರ ಶಾಸನ ಇವೇ ಈ ಮಹಾಶರಣೆಯ ಬಗೆಗೆ ವಿವರಗಳನ್ನು ನೀಡುತ್ತಿವೆ ಯೆಂದು ಇಲ್ಲಿಯವರೆಗೆ ತಿಳಿದು ಬಂದಿದೆ. ತಾಳೀಕೋಟೆಯ ಶಾಸನ ಕಾಲ ಕ್ರಿ. ಶ. ೧೧೮೪, ಇಂಗಳಗಿಯ ಶಾಸನದ ಕಾಲವು ಕ್ರಿ. ಶ. ೧೨೧೯, ಮತ್ತು ವಿಜಾಪುರದ ಶಾಸನದ ಕಾಲವು ಕ್ರಿ. ಶ. ೧೨೦೮ ಎಂದು ವಿದ್ವಾಂಸರು ನಿರ್ಣಯಿಸಿರುವುದರಿಂದ ಈ ಶರಣೆಯು ಕ್ರಿ. ಶ. ೧೧೮೪ಕ್ಕಿಂತ ಪೂರ್ವದಲ್ಲಿ ಬಾಳಿ ಬೆಳಗಿರಬೇಕೆಂದು ಹೇಳ ಬಹುದಾಗಿದೆ. ತಾಳೀಕೋಟೆಯ ಶಾಸನದಲ್ಲಿ ನೇರವಾಗಿ ಅವಳ ಹೆಸರು ಹೇಳಿರು ವುದಿಲ್ಲವೆಂಬುದು ಗಮನಾರ್ಹ.

[ ೨ ]

ಲಿಂಗೈಕ್ಯ ಡಾ. ಫ. ಗು. ಹಳಕಟ್ಟಿಯವರು 'ಶಿವಾನುಭವ' ಪತ್ರಿಕೆಯ ಸಂಪುಟ ೧, ಸಂಚಿಕೆ ೩, ಪುಟ ೧೬ರಿಂದ ೩೨ರಲ್ಲಿ (ಕ್ರಿ. ಶ. ೧೯೨೬) ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ ಬಂದಿರುವ ಗುಡ್ಡವ್ವೆಯ ಕಾವ್ಯಭಾಗವನ್ನು ಕೆಲವು ಪ್ರಕಟಿಸಿದರು. ಅದರಲ್ಲಿ ಡಾ. ಹಳಕಟ್ಟಿಯವರು ಈ ಮಾತುಗಳನ್ನು ಹೇಳಿದ್ದಾರೆ :

ವಿಜಾಪುರದ ವಾಯವ್ಯ ದಿಕ್ಕಿಗೆ ಮೂವತ್ತು ಮೈಲುಗಳ ಮೇಲೆ ದಕ್ಷಿಣೋತ್ತರ ಒಂದು ಗುಡ್ಡದ ಸಾಲು ; ಈ ಸಾಲಿನ ದಕ್ಷಿಣ ಕೊನೆಯಲ್ಲಿ ಗುಡ್ಡಾಪುರವೆಂಬ ಗ್ರಾಮವಿದ್ದು ಕ್ಷೇತ್ರ ಸ್ಥಾನವಾಗಿದೆ; ಈ ಸ್ಥಾನಕ್ಕೆ ಮಹಾರಾಷ್ಟ್ರ ಮತ್ತು ಕರ್ನಾಟಕ ಪ್ರಾಂತಗಳಿಂದ ಎಲ್ಲ ಜಾತಿಯ ಅಸಂಖ್ಯ ಯಾತ್ರಿಕರು ಇಡಿ ವರುಷ ಬರುತ್ತಾರೆ. ಇದು ಗುಡ್ಡಮ್ಮೆಯ ಸ್ಥಾನ, ವಾಡಿಕೆಯಾಗಿ ಈಕೆಯನ್ನು ಗುಡ್ಡಾಪುರದ ದಾನಮ್ಮ ಎಂತಲೂ ಕರೆಯುತ್ತಾರೆ. ಈಕೆಯು ಒಬ್ಬ ಶೂರ ಸ್ತ್ರೀ. ವೀರಶೈವ ಶಿವಶರಣೆ; ಈ ಗುಡ್ಡಮ್ಮೆಯು ಶ್ರೀ ಬಸವೇಶ್ವರನ ಕಾಲದಲ್ಲಿ ಇದ್ದ ಹಾಗೆ ತೋರುತ್ತದೆ; ಈ ಕಾಲ ಕರ್ನಾಟಕದಲ್ಲಿ ಧಾರ್ಮಿಕ ಜಾಗೃತಿಯನ್ನು ಮಾಡಿದ ಕಾಲ; ಈ ಜಾಗೃತಿಯ ಮೂಲಕ ಅಬಲೆಯರು ಸಹ ಮುಂದಾಗಿ ಧರ್ಮ ಪ್ರಸಾರದ ಕಾರ್ಯದಲ್ಲಿ ಅಗ್ರ ಸ್ಥಾನ ವಹಿಸಿದರು. ವೀರ ಭಕ್ತಿಯನ್ನು ತಾಳಿ ಪ್ರಸಿದ್ಧಿ ಹೊಂದಿದವರಲ್ಲಿ ಈಕೆ ಒಬ್ಬಳು. ಶಿವ ಸರ್ವೋತ್ತಮತ್ವ, ಏಕದೇವೋಪಾಸನೆಗೆ ಖಡ್ಗ ಹಿಡಿದು ಹೋರಾಡಿದ ವೀರ ಮಹಿಳೆ, ಶೈವ-ವೈಷ್ಣವರಲ್ಲಿ ಅನೇಕ ಉಪಭೇದಗಳಿದ್ದವು; ಇದನ್ನು ಹೊಡೆದೋಡಿಸಿ ಪರವಸ್ತುವು ಒಂದೇ ಎಂದು ಶರಣರು ಬೋಧಿಸಿದ ವಾದವನ್ನು ಮುಂದೆ ಮಾಡಿದ ಮಹಿಳೆ ಈಕೆ. ಶಿವತತ್ವ ಚಿಂತಾಮಣಿಯಲ್ಲಿದ್ದ ಅಲಂಪುರ ಮಲಪ್ರಭಾ ತೀರದಲ್ಲಿದೆ; ಅಲ್ಲಿಯ ಬ್ರಹ್ಮೇಶ ಲಿಂಗವನ್ನು ವೈಷ್ಣವರು ಕಿತ್ತು ನದಿಯಲ್ಲಿ ಹಾಕಿದುದನ್ನು ವೀರನಾಚಯ್ಯಗಳ ಸಹಾಯದಿಂದ ಪ್ರತಿಷ್ಠಾಪಿಸಿದ ಕತೆ ಶಿವತತ್ವ ಚಿಂತಾಮಣಿಯಲ್ಲಿದೆ. ಗುಡ್ಡವ್ವೆಯು ಮೊದಲಿಗೆ ಸೊಲ್ಲಾಪುರದವಳಿದ್ದು ಅಲ್ಲಿ ಆಕೆಗೂ ಸಿದ್ಧರಾಮೇಶ್ವರನಿಗೂ ಮಾತಿನ ಸಲುವಾಗಿ ಭೇದವುಂಟಾಗಿ ಆಕೆ ಗುಡ್ಡಾಪುರಕ್ಕೆ ಬಂದು ನಿಂತಳೆಂದು ಬಂದು ಸ್ಥಳಿಕ ಐತಿಹ್ಯವಿದೆ. ಶಿವತತ್ವಚಿಂತಾಮಣಿಯಲ್ಲಿ ಈಕೆಯ ಚರಿತ್ರಾಂಶಗಳು ಹೆಚ್ಚಿಗೆ ದೊರೆಯುವುದಿಲ್ಲ.

[ ೨ ]

ಡಾ. ಫ.ಗು. ಹಳಕಟ್ಟಿಯವರು ಅದೇ 'ಶಿವಾನುಭವ' ಪತ್ರಿಕೆಯ ಹನ್ನೆರಡನೆಯ ಸಂಪುಟ ೭ನೇ ಸಂಚಿಕೆಯ ಪುಟ ೩೨೪-೩೩೭ರಲ್ಲಿ (೧೯೩೮) ಈಕೆಯ ವಿಷಯವಾಗಿ ಮತ್ತೊಂದು ಲೇಖನ ಬರೆದಿದ್ದಾರೆ. ಅವರ ಸಾರಾಂಶವಿಂತಿದೆ : ಅವರಿಗೆ ದೊರೆತ ಒಂದು ಗ್ರಂಥದಿಂದ ಅವರು ಅನೇಕ ವಿಷಯಗಳನ್ನು ಸಂಗ್ರಹಿಸಿದುದಾಗಿ ತಿಳಿಸಿದ್ದಾರೆ. ಆ ಕೃತಿಯನ್ನು ಬರೆದವನು ಇಂತು ಹೇಳಿಕೊಂಡಿದ್ದಾನೆ.

ಶ್ರೀ ಗಿರಿಯ ಸಿದ್ಧಾಪುರ
ಹೊರುತಿವಾಸ ಸಿದ್ಧೇಶನು
ಶಿವಚನ್ನಬಸವನ ಹೃದಯ ಕಮಲದೊಳ್
ನೀನಿರ್ದು ನುಡಿಸಿದರೆ
ನುಡಿದೆನಲ್ಲದೆ ಲಿಂಗಾಂಗ
ಸಮರಸದ ಪದಗಳನು....

ಇದೊಂದು ಉತ್ತಮ ತರಗತಿಯ ಗ್ರಂಥವಲ್ಲದಿದ್ದರೂ ನಮಗೆ ಗೊತ್ತಿಲ್ಲದ ಹಲವು ಸಂಗತಿಗಳು ಹೊರಹೊಮ್ಮಿವೆ. ಶಿವತತ್ವ ಚಿಂತಾಮಣಿಗೆ ಸಿಲುಕದ ವಿಷಯಗಳಿವು. ಈ ವಿಷಯಗಳಿಗೆ ಪ್ರಮಾಣವೆಂದರೆ ದಂತ ಕಥೆ ಮತ್ತು ಪುರಾತನ ಕುರುಹುಗಳೇ ಸಾಕ್ಷಿ–ಕವಿಯ ಊರು ವಿಜಾಪುರದ ಉತ್ತರಕ್ಕೆ ಇಪ್ಪತ್ತು ಮೈಲು ದೂರವಿರುವ 'ಹೊರ್ತಿ' ಗ್ರಾಮ.

ಈಕೆಯ ಜನ್ಮಸ್ಥಳ "ಉಮರಾಣಿ" ತಂದೆ ಅನಂತರಾಯ ತಾಯಿ ಶಿರಸಮ್ಮ, ಪತ್ತಾರ ಕಾಯಕದವರು; ಇಂಡೀ ತಾಲೂಕಿನ ಭೀಮಾ ನದಿಯ ತೀರದಲ್ಲಿ ಈ ಗ್ರಾಮವಿದೆ. ವೀರ ಮಲ್ಲಯ್ಯನ ಅನುಗ್ರಹದಿಂದ ಈಕೆಯ ಜನನವಾಗುತ್ತದೆ. ಅವಳ ಜನನವು ಅದ್ಭುತ; ನಾಮಕರಣ "ಲಿಂಗಮ್ಮ" ಎಂದು. ಬಸವಣ್ಣನ ಅನುಭವ ಮಂಟಪದ ಪ್ರಖ್ಯಾತಿಯನ್ನು ಕೇಳಿ ಅಲ್ಲಿಗೆ ಬಂದು ಅನುಭವ ಮಂಟಪದಲ್ಲಿ ಭಾಗವಹಿಸಿದಳೆಂದು ಅಲ್ಲಿ ವರ್ಣಿತವಾಗಿದೆ. ಕಲ್ಯಾಣಕ್ಕೆ ಬರುವ ದಾರಿಯಲ್ಲಿ ಅವಳ ಸಂಪರ್ಕದಲ್ಲಿ ಬಂದವರು ಸಿರಿವಂತರಾದರಂತೆ ! ಕಲ್ಯಾಣದ ಅನುಭವಮಂಟಪಕ್ಕೆ ಬಂದಾಗ ಬಸವಣ್ಣನಿಂದ ಲಿಂಗದೀಕ್ಷೆ ಪಡೆದಳು; ಕಲ್ಯಾಣದಲ್ಲಿ ಅನೇಕ ದುಃಖಿಗಳ ದುಃಖವನ್ನು ಉಪಶಮನ ಮಾಡಿದಳು. ಬಿಜ್ಜಳನಿಂದ ಶರಣಧರ್ಮಕ್ಕೆ ಆಘಾತ ಸಂಭವಿಸಿದಾಗ ಈಕೆ 'ಸಂಕ' ಎಂಬ ತೀರ್ಥಕ್ಕೆ ಬಂದಳು. ಅಲ್ಲಿ ಸಂಗಮನಾಥ ಎಂಬವನೊಡನೆ ಲಗ್ನವಾಗಿ ಗೃಹಸ್ಥಾಶ್ರಮ ಸ್ವೀಕರಿಸಿ ಅಲ್ಲಿಂದ ದಂಪತಿಗಳು ಗುಡ್ಡಾಪುರಕ್ಕೆ ಬಂದು ವಾಸಿಸತೊಡಗಿದರು. ಅಲ್ಲಿ ಕೆಲವು ದಿನಸವಿದ್ದು, ದೇಶ ಸಂಚಾರ ಕೈಕೊಂಡು ದಾರಿಯಲ್ಲಿ ಭಕ್ತರನ್ನು ಉದ್ಧಾರ ಮಾಡಿದ್ದಾರೆ. ಕಲ್ಯಾಣದ ಕ್ರಾಂತಿಯ ಕಾಲದಲ್ಲಿ ಇವರು ಮಹತ್ಕಾರ್ಯಗೈದಿದ್ದಾರೆ. ಸಂಚಾರದಲ್ಲಿ ಅವರು ಆದವಾನಿಯನ್ನು ಸಂದರ್ಶಿಸಿದರು. ಅಲ್ಲಿಯ ದೇವಾಂಗದವರು ಈ ದಂಪತಿಗಳನ್ನು ಬಹು ಆದರದಿಂದ ಬರಮಾಡಿಕೊಂಡರಂತೆ. ಬ್ರಹ್ಮೇಶಲಿಂಗ ಸ್ಥಾಪನೆಯು ಅವರು ಆದವಾನಿಯಲ್ಲಿದ್ದಾಗಲೇ ನಡೆದಿರಬೇಕು. ಯಾಕೆಂದರೆ ಅಲಂಪುರವು ಕರ್ನೂಲ ಜಿಲ್ಲೆಯಲ್ಲಿದೆ. (ಮಲಪ್ರಭಾ ತೀರದಲ್ಲಿದೆ ಎಂದು ಕಾವ್ಯದಲ್ಲಿದೆ) ಮುಂದೆ ಕಪಿಲಾ ಕಾವೇರಿ ಸಂಗಮ ಸ್ಥಳದಲ್ಲಿ ಒಂದುವರೆ ವರ್ಷ ವಾಸಮಾಡಿದ್ದಾರೆ. ಮಲೆಯಾಳ–ಕೋಚಿನ ಸೀಮೆಯಲ್ಲಿ ಸುತ್ತಾಡಿದ್ದಾರೆ. ಅಲ್ಲಿ ಅನೇಕರಿಗೆ ದೀಕ್ಷೆ ಇತ್ತು ರಾಮೇಶ್ವರ ಕಾಂಚಿಗಳಿಗೆ ಆಗಮಿಸುತ್ತಾರೆ. ಕಂಚಿಯ ಅರಸನಿಂದಲೂ ಹಾಗೂ ವೈಷ್ಣವರಿಂದಲೂ ಮನ್ನಣೆ ಪಡೆಯುತ್ತಾರೆ. ಅಲ್ಲಿಂದ ಕಾಶಿ, ಗಯಾ ಸೊನ್ನಲಿಗೆ ನೋಡಿಕೊಂಡು ಕೂಡಲ ಸಂಗಮಕ್ಕೆ ಬರುತ್ತಾರೆ. ಅಲ್ಲಿಂದ ಮಣ್ಣಗೂಳಿ ಎಂಬ ಗ್ರಾಮಕ್ಕೆ ಆಗಮಿಸಿ ಅಲ್ಲಿ ಗೌರಮ್ಮ ಗೌಡತಿಯ ಸತ್ತ ಒಬ್ಬನೇ ಮಗನನ್ನು ಗುಡ್ಡವ್ವೆಯರು ಬದುಕಿಸುತ್ತಾರೆ. ತರುವಾಯ ಬಾಗೆವಾಡಿಗೆ ದಯಮಾಡಿಸಿ ಶಿವಬ್ರಾಹ್ಮಣರಿಗೆ ಲಿಂಗ ದೀಕ್ಷೆಗೈದು, ಪುನಃ ಗುಡ್ಡಾಪುರಕ್ಕೆ ಆಗಮಿಸುತ್ತಾರೆ. ನಂತರ ಅಲ್ಲಿಯೇ ದಾನಮ್ಮನು ಪತಿಗಿಂತ ಮೊದಲು ಲಿಂಗೈಕ್ಯಳಾಗುತ್ತಾಳೆ. ಅವಳ ಸಂಚಾರದ ಕಾಲದಲ್ಲಿ ಅವಳ ಉಪದೇಶದಿಂದ ಹಲವರು ವೀರಶೈವರಾದರೆಂದು ಈ ಕೃತಿ ತಿಳಿಸುತ್ತದೆ.

[ ೪ ]

ಡಾ. ಹಳಕಟ್ಟಿಯವರು ಪ್ರೊ|| ಕೆ. ಜಿ. ಕುಂದಣಗಾರ ಅವರು "Inscriptions in Northern Karnatak and Kolhapur State" ಎಂಬ ಗ್ರಂಥವನ್ನು ಪ್ರಕಟಿಸಿದ ಮೇಲೆ ಲೇಖನ ಬರೆದರು. ಕುಂದಣಗಾರರು ಪ್ರಕಟಿಸಿದ ಶಾಸನಗಳಲ್ಲಿ ಇಪ್ಪತ್ತೊಂದನೆಯ ಶಾಸನವು ಗುಡ್ಡವ್ವೆಯ ವಿಷಯದ ಶಾಸನವಿದ್ದು ಆ ಲೇಖನವು ಅದರ ವಿಮರ್ಶೆಗೆ ಮೀಸಲಾಗಿದೆ. ದೇವಗಿರಿಯ ಯಾದವ ವಂಶದ ಮಹಾದೇವರಸನ ಮಾಂಡಲಿಕ ಸಾಯಿದೇವನು ವಿಜಾಪುರ ಜಿಲ್ಹೆಯ ಉತ್ತರ ಭಾಗವನ್ನು ಆಳುತ್ತಿದ್ದು 'ದ್ವಾತಾಖ್ಯಪುರ' ಎಂಬಲ್ಲಿ ಅವನು 'ವರದಾಸಿಯ' ಹೆಸರಿನಿಂದ ಒಂದು ದೇವಾಲಯ ವನ್ನು ಕಟ್ಟಿಸಿ ಅದಕ್ಕೆ ಉಂಬಳಿಯನ್ನು ಹಾಕಿಕೊಟ್ಟದ್ದು ಈ ಶಾಸನದ ವಿಷಯ ವಾಗಿದೆ. ದಾಸಮ್ಮ ಕಾಲ್ಪನಿಕ ವ್ಯಕ್ತಿಯಲ್ಲ, ಐತಿಹಾಸಿಕ ವ್ಯಕ್ತಿ. ರಾಜರೂ ಮಾಂಡಲಿಕರೂ ಮೊದಲಾದವರಿಂದ ಮನ್ನಣೆ ಪಡೆದಿದ್ದಾಳೆ. ಅವಳು ತೀರಿಕೊಂಡ ಮೇಲೆ ಅವಳ ಸ್ಮರಣೆಗೆ 'ಸಾವಿದೇವ'ನಿಂದ ದೇವಾಲಯದ ಸ್ಥಾಪನೆ ನಡೆದಿದೆ. ಅಲ್ಲದೆ ಭೀಮಾನದಿಯ ತೀರದಲ್ಲಿ ಒಂದು ಗ್ರಾಮವನ್ನೇ ರಚಿಸಲಾಗಿದೆ. ಈತನು ಇಲ್ಲಿಯ ಕೆಲವು ಭೂಮಿಗಳನ್ನು ಉಂಬಳಿಯಾಗಿ ಕೊಟ್ಟಿದ್ದಾನೆ. ಅವಳು ಬಸವೇಶ್ವರ ನಿದ್ದ ಕಾಲಕ್ಕೆಯೇ ಅಥವಾ ಅದರ ಸಮೀಪದಲ್ಲಿಯೇ ಇದ್ದಳೆಂದು ಈ ಶಾಸನದಿಂದ ಅನುಮಾನಮಾಡಬಹುದಾಗಿದೆ.

ಮಹದೇವರಸನ ಮಿತ್ರನೂ ಸಾಮಂತನೂ ಆದ ಸಾಯಿದೇವನು ವಾದದಲ್ಲಿ, ನಾದದಲ್ಲಿ, ವಿವಾದದಲ್ಲಿ, ಶಸ್ತ್ರವಿದ್ಯೆಯಲ್ಲಿ, ಶಾಸ್ತ್ರದಲ್ಲಿ, ಶಿವಾಗಮ ನಿಗಮಗಳಲ್ಲಿ ಚತುರನಾಗಿ ರಾರಾಜಿಸುತ್ತಿದ್ದನು. ಇವನು ದ್ವಿವಾತಾಖ್ಯಪುರದಲ್ಲಿದ್ದು ಶಿವಸದ್ಭಕ್ತಿ ಯುಳ್ಳವನಾಗಿ 'ವರದಾಸಿ'ಯ ಹೆಸರಿನಿಂದ ಲಿಂಗ ಪ್ರತಿಷ್ಠೆ ಮಾಡಿದನು. ಮಹದೇವ ಭೂಪನು ಇದನ್ನು ಮೆಚ್ಚಿ ಒಂದುಗ್ರಾಮವನ್ನು ದಾನಮಾಡಿದುದಲ್ಲದೆ ಸಾಯಿ ದೇವನು ಪೂಜ್ಯಪುರದಲ್ಲಿರುವ ನಗರಶ್ರೇಷ್ಠಿ-ವಣಿಜರನ್ನು ಕರೆದು ಅವರ ಸಮ್ಮುಖ ದಲ್ಲಿ ಕೆಲವು ಗ್ರಾಮಗಳನ್ನು ದಾನಮಾಡಿದನು. ತೇಜೇಶ್ವರ, ವರದಾಸಿ, ಪುರು ಷೇಶ್ವರ ದೇವರ ಪ್ರತಿಷ್ಠೆ ಮಾಡಿಸಿ ಕೆಲವು ಗ್ರಾಮದಾನ ಮಾಡಿದ್ದಾನೆ. ದಾನ ಮಾಡಿದ ವಸ್ತುಗಳ ವಿವರಗಳು ಇಂತಿವೆ :

ಅ) ಕೊಂಡಿ ನಗರದಲ್ಲಿ ಒಂದು ಭೂಮಿ:

ಆ) ನಾಲ್ವತ್ತು ಬಾಡದಲ್ಲಿ ಆಲೂರ ದಾರಿಯಲ್ಲಿ ಉತ್ತರಕ್ಕಿರುವ ಜೋಯಿಸರ ಹೊಲದ ಪೂರ್ವಕ್ಕೆ ಒಂದು ಭೂಮಿ:

ಇ) ಬೊಂಬಳ್ಳದಿಂದ ದಕ್ಷಿಣಕ್ಕಿರುವ ಕರುಸಗೆಯ ಒಂದು ಭೂಮಿ:

ಈ) ರಟ್ಟಗೆರೆಯ ಪಶ್ಚಿಮಕ್ಕೆ ಇರುವ ಒಂದು ಹೊಲ:

ಉ) ಗೌಡಗೆರೆಯಲ್ಲಿ ಒಂದು ಹೊಲ:

ಊ) ದೆಹೂರಲ್ಲಿ ಒಂದು ಹೊಲ:

ಇಲ್ಲಿಯ ವರ್ಣನೆಗಳು 'ವರದಾಸಿ'ಗೇ ಸಂಬಂಧಿಸಿದುವು. ಮಾನ್ಯದೇವಿಯ ಬತ್ತ ಮಾರಿದರೆ ಅಥವಾ ಅದಕ್ಕೆ ಸಂಬಂಧಿಸಿಮುದನ್ನು ಏನೇ ಮಾರಿದರೂ ಅದಕ್ಕೆ ಸುಂಕ ವಿಲ್ಲ. ಪುರದೊಳಗೆ ಅನ್ಯಾಯವಾಗಬಾರದು: ಅನಾಹುತ ಸಂಭವಿಸಬಾರದು: ಹಾಗಾದರೆ ಅರಸರು, ಮನ್ನೆಯರು, ಹಿರಿಯರು ಸರಿಪಡಿಸಬೇಕು. 'ಸಾಯಿದೇವನು ವೀರಶೈವಳಾದ ವರದಾಸಿಗೆ ದಾನವನ್ನು ಕೊಟ್ಟಿದ್ದಾನೆ' ಈ ಪ್ರದೇಶವು ರೇವಣಸಿದ್ಧ, ಬಸವಣ್ಣನವರ ಕಾರ್ಯಕ್ಷೇತ್ರವಾಗಿತ್ತು ಉಮರಾಣಿ, ಗುಡ್ಡಾಪುರ ಇಂದೂ ಇವೆ: ಇತರ ಕೆಲವು ಕಣ್ಮರೆಯಾಗಿವೆ. ಇದಿಷ್ಟು ಡಾ. ಹಳಕಟ್ಟಿಯವರ ಆ ಲೇಖನದ ಸಾರ.

ದಿವಂಗತ ಪ್ರೊ. ಕೆ. ಜೆ. ಕುಂದಣಗಾರ ಅವರು ಈ ಮಹಿಳೆಯನ್ನು ಕುರಿತು **'Inscription in Northern Karnatak and Kolahpur State'** ಎಂಬ ಗ್ರಂಥದ ಮುನ್ನುಡಿ ಪುಟ ೨೫ರಲ್ಲಿ ಹೀಗೆ ಬರೆದಿದ್ದಾರೆ. ಗ್ರಂಥವು ಇಂಗ್ಲಿಷಿನಲ್ಲಿದ್ದುದ ರಿಂದಅದರ ಅನುವಾದವನ್ನು ಇಲ್ಲಿ ಕೊಡಲಾಗಿದೆ. "ಕ್ರಿ.ಶ.೧೨೭೮ರಹೊತ್ತಿಗೆ ವೀರ ಶೈವವು ಕೆಲಮಟ್ಟಿಗೆ ಕರ್ನಾಟಕದಲ್ಲೆಲ್ಲ ಪ್ರಸಾರವಾಗಿತ್ತು. ಆದರೆ ಜನರ ಮನಸ್ಸು ಹಿಂದಿನ ಧ್ಯೇಯಗಳನ್ನು (ಶೈವದ)ತೊರೆಯಲು ಸಿದ್ಧವಿರಲಿಲ್ಲ. ಉದಾಹರಣೆ ಶರಣೆ ವರದಾನಿ ಗುಡ್ಡಾದೇವಿಯನ್ನು ಶೈವಬ್ರಾಹ್ಮಣ ಬಸವಿ ದೇವನು ಸ್ಥಾಪಿಸಿ ವೀರಶೈವ ಶರಣೆಯನ್ನು ಆರಾಧಿಸಿದನು" ಇಲ್ಲಿ ಶೈವಬ್ರಾಹ್ಮಣನೂ ಪುರೋಹಿತನೂ ಆದ ಬಸವಿ ದೇವನು ಗುಡ್ಡಾದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ಆರಾಧನೆ ಮಾಡಿದುದು ಅನ್ಯಜಾತಿಯವರಲ್ಲಿ ಗುಡ್ಡಾದೇವಿಯ ಬಗೆಗಿದ್ದ ಪೂಜ್ಯ ಭಾವನೆ ವ್ಯಕ್ತವಾಗುತ್ತದೆ.

[ ೫ ]

'ಶರಣ ಸಾಹಿತ್ಯ' ಸಂಪುಟ ೨೧, ಸಂಚಿಕೆ ೧, ಪುಟ ೨೪ರಿಂದ ೩೫ರಲ್ಲಿ ದಿವಂ ಗತ ಪಾಂಡುರಂಗರಾವ ಬಿ. ದೇಸಾಯಿ ಅವರು ಇಂಗಳಗಿಯ ಶಾಸನವನ್ನು ಪ್ರಕಟಿಸಿ ದ್ದಾರೆ. ಆ ಶಾಸನದ ಕಾಲ ಕ್ರಿ. ಶ. ೧೨೬೯ ಸಪ್ಟಂಬರ ೧೪ನೆಯ ಸೋಮವಾರ ಎಂದು ತಿಳಿಸಿದ್ದಾರೆ. ಆ ಶಾಸನದಲ್ಲಿ 'ಗುಡ್ಡವ್ವೆ'ಯ ವಿಷಯವು ಉಲ್ಲೇಖವಾಗಿದ್ದು ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ:

ಗುಡ್ಡವ್ವೆಯ ಅಧ್ಯಕ್ಷತೆಯಲ್ಲಿ ಬಲವ್ವೆಯ ಕಾಲನ್ನು ತೊಳೆದು ಗಣಮಠಕ್ಕೆ ಬಿಜ್ಜರಸ, ಇಂಗುಳಿಗೆಯ ಪ್ರಭು ನಾಗರಸ, ಹೆಗ್ಗಡೆ ಬಸವಯ್ಯ, ಪಂಚಮಠ ಇವರೆಲ್ಲರೂ ಸೇರಿ ಮೂಲಸ್ಥಾನದೇವರ ಉಪಾಸಿಕೆಯೂ ಕ್ಷೇತ್ರ ಸನ್ಯಾಸಿನಿಯೂ ಆದ ಬಲವ್ವೆಯ ಕಾಲನ್ನು ತೊಳೆದು, ಶ್ರೀ. ಸಿದ್ಧರಾಮನಾಥ, ದಸಗಣ ಸಿಂಗಿದೇವ,

ಬಿಜ್ಜೇಶ್ವರ, ರೇವಣೇಶ್ವರ, ಕನ್ನೇಶ್ವರ, ಕೇದಾರದೇವ, ನಾಗೇಶ್ವರ ಈ ಎಲ್ಲ ಲಿಂಗದೇವರ ವಿನಿಯೋಗಕ್ಕಾಗಿ, ಗುಡ್ಡವ್ವೆಯ ಅಧ್ಯಕ್ಷತೆಯಲ್ಲಿ ಗಣಮಠಕ್ಕೆ ಮನೆ, ಭೂಮಿ, ಹೂದೋಟ, ಗಾಣ ಇತ್ಯಾದಿ ವೃತ್ತಿಯನ್ನು ಧಾರಾಪೂರ್ವಕವಾಗಿ ಕೊಟ್ಟರು. ದತ್ತಿಯನ್ನು ಪಡೆದುದು ಗಣಮಠ: ದತ್ತಿಯ ಕಾಲದಲ್ಲಿ ಪೂಜೆಗೊಂಡ ವಳು ಬಲವ್ವೆ:ಗಣಮಠದ ದತ್ತಿಯನ್ನು ಸ್ವೀಕರಿದವಳು ಗುಡ್ಡವ್ವೆ. (ಈ ಶಾಶನದಲ್ಲಿ ಇಬ್ಬರು ಮಹಿಳೆಯರು ಉಕ್ತರಾಗಿದ್ದಾರೆ. ದತ್ತಿಯ ಕಾಲದಲ್ಲಿ ಪೂಜೆಗೊಂಡವಳು ಬಲಗವ್ವೆ: ದತ್ತಿಯನ್ನು ಸ್ವೀಕರಿಸಿದವಳು ಗುಡ್ಡವ್ವೆಗಳು.) ಗುಡ್ಡವ್ವೆಯು ಅಂದಿನ ಕಾಲದಲ್ಲಿ ಎಷ್ಟೊಂದು ಪ್ರಮುಖ ವ್ಯಕ್ತಿಯಾಗಿದ್ದಳೆಂದು ತಿಳಿದುಬರುತ್ತದೆ. ಬಲಗವ್ವೆಯೂ ಮೂಲಕ್ಷೇತ್ರವಾಸಿನಿಯೂ ಸನ್ಯಾಸಿಯೂ ಆಗಿದ್ದಳೆಂದು ವ್ಯಕ್ತ ವಾಗುತ್ತದೆ. ಅವಳು ವಿರಾಗಿಣಿಯಾಗಿ ಪ್ರಖ್ಯಾತಿ ಹೊಂದಿದ್ದರೆ ಗುಡ್ಡವ್ವೆ ಗ್ರಹಸ್ಥ ಳಾಗಿಯೂ ಬಲಗವ್ವೆಗಳಿಗಿಂತಲೂ ಪ್ರಖ್ಯಾತಿ ಹೊಂದಿದ್ದಳು.

[ ೬ ]

ಡಾ. ಎಂ. ಎಂ. ಕಲಬುರ್ಗಿಯವರು "ಶಾಸನಗಳಲ್ಲಿ ಶಿವಶರಣರು" ಎಂಬ ಪುಸ್ತಕದ ಪುಟ ೩೦–೩೭ರಲ್ಲಿ ಈಕೆಯ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಅವರು ಅವರು ಈ ಶರಣೆಯನ್ನು ಕುರಿತು ಹೀಗೆ ಬರೆದಿದ್ದಾರೆ.

ಷೋಡಶ ಗಣದಲ್ಲಿ ಗುಡ್ಡವ್ವೆಯದು ಸುಪ್ರಸಿದ್ಧ ಹೆಸರು. ವೈಷ್ಣವರು ಕಿತ್ತೊಗೆದ ಅಣಂಪೂರ ಬಾಲಬ್ರಹ್ಮೇಶ್ವರ ಲಿಂಗವನ್ನು ತನ್ನ ಷೋಡಶಗಣದ ಬೆಂಬಲದಿಂದ ಪುನಃ ಸ್ಥಾಪಿಸಿದ ಈ ವೀರಮಹಿಳೆಯ ವಿಷಯ, ಹಲವು ಶಾಸನಗಳಲ್ಲಿ ಎಡೆಪಡೆದಿದೆ. ಈ ಶಾಸನಗಳಲ್ಲಿ ಅವಳ ಕಲಿತನ ಸ್ಪಷ್ಟವಾಗಿ ವ್ಯಕ್ತವಾಗಿದೆ. ಅಲ್ಲಿ ಅವಳನ್ನು 'ವರದಾನಿ' 'ದಾನಚಿಂತಾಮಣಿ'ಯೆಂದು ಸಂಬೋಧಿಸಲಾಗಿದೆ. (೧೯೩೦ರ ಪ್ರಕಟನೆ). ಈ ಶರಣೆಯನ್ನು ಡಾ. ಕಲಬುರ್ಗಿಯವರು ಬಸವಪೂರ್ವ ಯುಗದವಳೆಂದು ವರ್ಗೀಕರಿಸಿದ್ದಾರೆ. ತ. ಸು. ಶ್ಯಾಮರಾಯರು ರಚಿಸಿದ 'ಶಿವಶರಣರ ಕಥಾ ರತ್ನಕೋಶ'ದ ಪು. ೧೧೬–೧೧೭ರಲ್ಲಿ ಅವಳ ಚರಿತ್ರೆ ಬರೆದಿದ್ದಾರೆ. ಅಲ್ಲಿ ಯಾವ ಹೊಸ ವಿಷಯುಗಳೂ ಇಲ್ಲದುದರಿಂದ ಅದರ ಸಾರವನ್ನಿಲ್ಲಿ ಕೊಟ್ಟಿಲ್ಲ. ಡಾ. ಎಲ್. ಬಸವರಾಜು ಅವರು "ಶಿವದಾಸಗೀತಾಂಜಲಿ" ಪೀಠಿಕೆಯ ಪುಟ ೮ರಲ್ಲಿ (೧೯೬೩ರ ಪ್ರಕಟನೆ) ಗುಡ್ಡಾಂಬೆಯನ್ನು ಕುರಿತು ಬರೆದ ಮಾತುಗಳಿವು :

ಷೋಡಶರಲ್ಲಿ ಬಹಳ ಪ್ರಖ್ಯಾತ ವ್ಯಕ್ತಿ ಶಿಷ್ಯವರದೆಯಾದ ಗುಡ್ಡಮ್ಮ ಅಥವಾ ವರದಾನಿ ಗುಡ್ಡಮ್ಮೆಯೆಂಬವಳು. ಈಕೆಯ ಕಥೆಯನ್ನು ಆ ಮೂಲಕ ಷೋಡಶರೆಲ್ಲರ ವೃತ್ತಾಂತವನ್ನೂ ಲಕ್ಕಣ್ಣ ದಂಡೇಶನು ಇಡಿಯಾಗಿ ಶಿವತತ್ವ ಚಿಂತಾಮಣಿಯ ೩೭ನೆಯ ಸಂಧಿಯಲ್ಲಿ ಹೇಳಿದ್ದಾನೆ. ಇವರೆಲ್ಲ ಪರಮ ವೀರ ವ್ರತಾಚಾರನಿಷ್ಠಾಭಕ್ತಿ ಪರಿಪೂರ್ಣರು. ಗುಡ್ಡಾದೇವಿಯು ಮೃಡಮೂರ್ತಿಯನ್ನು ಪ್ರತಿಷ್ಠಾಪಿಸಿ ಪರಸಮಯವನ್ನು ಜಡಿದು ಭಂಗಿಸಿದಳೆಂದು ಷೋಡಶರ ಕಥೆಗಳಲ್ಲಿ ಒಂದಾಗಿ ಈಕೆಯ ಉಲ್ಲೇಖವನ್ನು ಚೆನ್ನಬಸವಪುರಾಣದ ೫೭ನೆಯ ಸಂಧಿ, ೪೪–೪೯

ಪದ್ಯಗಳಲ್ಲಿ ಮಾಡಲಾಗಿದೆ. ಅಲ್ಲಿ ಈಕೆಯನ್ನು ಕೇವಲ 'ಗುಡ್ಡಾಪುರದವ್ವ' ಎಂದು ಕರೆಯಲಾಗಿದೆ. ಅವಳ ದೀರ್ಘಕಥೆ ಇಲ್ಲಿಲ್ಲ.

[ ೭ ]

"ಗುಡ್ಡಾಪೂರದ ದಾನಮ್ಮನ ಚರಿತ್ರೆ" ಎಂಬ ಕಿರುಹೊತ್ತಗೆಯನ್ನು ಗದುಗಿನ ವೀರಶೈವ ಪ್ರಗತಿಶೀಲ ಯುವಕ ಸಂಘದವರು ಕ್ರಿ. ಶ. ೧೯೭೩ರಲ್ಲಿ ಪ್ರಕಟಿಸಿದ್ದಾರೆ. ಈ ಚಿಕ್ಕ ಪುಸ್ತಕದಲ್ಲಿ ಲೇಖಕನ ಹೆಸರು ಉಕ್ತವಾಗಿಲ್ಲ. ಈ ಚಿಕ್ಕ ಪುಸ್ತಕವು ೩೦ ಪುಟಗಳನ್ನೊಳಗೊಂಡಿದ್ದು ಮುಖಪುಟದ ಮೇಲೆ ದಾನಮ್ಮನ ಅಲಂಕೃತ ಚಿತ್ರವಿದೆ. ಆ ಚಿತ್ರದಲ್ಲಿ ದಾನಮ್ಮನ ಶೌರ್ಯಭಾವವು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಕೃತಿಯಲ್ಲಿ ದಾನಮ್ಮನ ಜನ್ಮ ಬಾಲ್ಯ, ಕಲ್ಯಾಣಕ್ಕೆ ಗಮನ, ಅನುಭವ ಮಂಟಪದ ಸಂದರ್ಶನ, ಬಸವೇಶ್ವರನಿಂದ ದಾನಮ್ಮನೆಂಬ ನಾಮಕರಣ, ದಾನಮ್ಮನ ವಿವಾಹ, ಧರ್ಮಪ್ರಸಾರ, ಸಂಚಾರ, ದಾನಮ್ಮನು ಗೈದ ಲೋಕಹಿತಕಾರ್ಯಗಳ ಬಗೆಗೆ ವಿವರಗಳಿವೆ. ಕೃತಿಕಾರರು ಸಾಮಗ್ರಿಯನ್ನು ಎಲ್ಲಿಂದ ಕಲೆಹಾಕಿದರೆಂಬುದು ತಿಳಿದು ಬರುವುದಿಲ್ಲ. ವಿಷಯಗಳು ನಿರೂಪಣೆಯಲ್ಲಿ ಪೌರಾಣಿಕವೆಂದೆನಿಸುತ್ತವೆ. ಭಾವುಕರಿಗೆ, ಭಕ್ತರಿಗೆ ರಂಜನೆಯುಂಟಾಗುತ್ತದೆ. ಇನ್ನೊಂದು ಕೃತಿ "ಶ್ರೀಕ್ಷೇತ್ರ ಗುಡ್ಡಾಪುರ" ಎಂಬ ಶೀರ್ಷಿಕೆಯದು. ಈ ಕೃತಿಯು ಮರಾಠಿಯಲ್ಲಿದೆ. ಮೂಲ ಕೃತಿಯು ಪ್ರಾಯಶಃ ಕನ್ನಡದಲ್ಲಿರಬೇಕು. ಅದರ ಅನುವಾದವನ್ನು ಶ್ರೀ ಕೆ. ಆರ್. ಸಾವಸೆ ರಿಟಾಯರ್ಡ್ ಹೆಡ್‌ಮಾಸ್ತರ್ ಹುಬ್ಬಳ್ಳಿ ಅವರು ಮಾಡಿರುತ್ತಾರೆ. ಮೂಲ ಕೃತಿಯ ಲೇಖಕರು ಶ್ರೀ ದಾನಯ್ಯನವರ ಪ್ರೀತಿಯ ಮಗಳು ಎಂದಿದೆ. ಪ್ರಕಾಶಕರು ಶ್ರೀ ದಾನಯ್ಯ ಜಂಬಗಿಮಠ, ಕಡೇಪೇಟೆ ಕಡಕೋಳಮಠ ಹಳೇಹುಬ್ಬಳ್ಳಿ ಎಂದು ಇದೆ. ಪುಸ್ತಕವು ಮುದ್ರಣವಾಗಿ ಪ್ರಕಟವಾದ ವರ್ಷದ ಉಲ್ಲೇಖವಿಲ್ಲ. ಈ ಕೃತಿ ೩೨ ಪುಟಗಳನ್ನೊಳಗೊಂಡಿದ್ದು ಕೊನೆಯಲ್ಲಿ ಮರಾಠೀ ಲಿಪಿಯಲ್ಲಿ ಮುದ್ರಿತವಾದ ಆರು ಕನ್ನಡದ ಹಾಡುಗಳಿವೆ. ದಾನಮ್ಮನ ಜನನ, ದಾನಮ್ಮನ ಪೂಜೆ, ದಾನಮ್ಮನು ಅನುಭವ ಮಂಟಪಕ್ಕೆ ಆಗಮಿಸಿದುದು, ದಾನಮ್ಮನ ವಿವಾಹ, ಆದವಾನಿಗೆ ಆಗಮನ ಬೇರೆಬೇರೆ ಊರುಗಳಿಗೆ ಆಕೆಯು ಸಂದರ್ಶಿಸಿದ ಚಿತ್ರಗಳಿದ್ದು, ಆ ಚಿತ್ರಗಳಲ್ಲಿ ಕನ್ನಡ ಲಿಪಿ ಬರೆಯಲಾಗಿದೆ. ಈ ಕೃತಿಯ ಮುಖಪುಟದ ಚಿತ್ರವೂ ಈ ಮೊದಲು ಉಲ್ಲೇಖಿಸಿದ ಪುಸ್ತಕದ ಮುಖಪುಟದ ಚಿತ್ರವೂ ಒಂದೇಯಾಗಿವೆ. ಅವಳ ಕೈಯಲ್ಲಿ ಖಡ್ಗವಿದ್ದುದು ಅವಳ ಶೂರತನಕ್ಕೆ ಸಾಕ್ಷಿಯಾಗಿದೆ. ಗುಡ್ಡಾಪುರದಲ್ಲಲ್ಲದೆ ಗದುಗಿನ ವೀರಭದ್ರದೇವರ ಗುಡಿಯಲ್ಲಿಯೂ ಗುಡ್ಡಮ್ಮನ ವಿಗ್ರಹವಿದೆಯೆಂದು ಆ ಮರಾಠೀ ಪುಸ್ತಕದಲ್ಲಿ ಉಲ್ಲೇಖವಿದೆ. ಕೆಲವೊಂದು ವಿಷಯಗಳು ಸಂಬಲರ್ಹವಾಗಿವೆ: ಕೆಲವೊಂದು ಪವಾಡಗಳ ರೂಪದಲ್ಲಿದ್ದು ಆ ವ್ಯಕ್ತಿಯ ಬಗೆಗೆ ಭಕ್ತಿಯನ್ನುಂಟು ಮಾಡಲು ಕಾರಣಗಳಾಗಿವೆ. ಈ ಹೆಣ್ಣುಮಗಳು ಅಂದಿನ ಕಾಲದಲ್ಲಿ ಅಷ್ಟೊಂದು ಪ್ರಖ್ಯಾತಳಾಗಿದ್ದಳಲ್ಲದೆ ಅನೇಕರಿಗೆ

ಗುರುವಾಗಿ ದೀಕ್ಷೆ ಮಾಡಿದಳೆಂಬುದೂ ಗಮನಾರ್ಹ. ಸ್ತ್ರೀಯರೂ ದೀಕ್ಷೆಗೆ ಅರ್ಹರಿದ್ದುದಕ್ಕೊ ಇದೊಂದು ಉತ್ತಮ ಉದಾಹರಣೆ.

[ ೮ ]

ನಮ್ಮ ಪುರಾತನ ಮಾತೆಯರ ಮೇಲೆ ಕೃತಿಗಳನ್ನು ರಚಿಸಿದ ಕನ್ನಡದ ಮಹಾಕವಿ ಹರಿಹರದೇವನು ಈ ಶರಣೆಯನ್ನು ಕುರಿತು ಪ್ರತ್ಯೇಕ ಒಂದು ಕೃತಿಯನ್ನು ಬರೆದುದು ತಿಳಿದುಬಂದಿಲ್ಲ. ರಾಘವಾಂಕನೂ ಬರೆದಿಲ್ಲ. ಆದರೆ ಈಕೆಯ ವಿಷಯವು ಕವಿ ಹರಿಹರನಿಗೆ ತಿಳಿದಿತ್ತೆಂಬುದು ಸುಸ್ಪಷ್ಟ. ಮಹದೇವಿಯಕ್ಕನ ರಗಳೆಯಲ್ಲಿ ಅವನು ಅನೇಕ ಶರಣೆಯರ ಮಧ್ಯದಲ್ಲಿ "ವರದಾನಿ"ಯನ್ನೂ ಹೆಸರಿಸಿ ಗೌರವಿಸಿದ್ದಾನೆ. ಆ ಸಾಲುಗಳು ಇಂತಿವೆ :

"ಕಾರಿಕಾಲಮ್ಮೆಯುಂ ವಿನಯದಿಂ ನೋಡುತಂ
ಬಾರ ಮಾಂಗಾಯಕ್ಕರಸಿ ಸಾಚಿ ಯೆನ್ನುತುಂ
ಕರೆದು ಯಸ್ಯಜ್ಞಾನದೇವಿಯುಂ ಪೊಗಳುತಂ
ಕರಣದಿಂ ಕೋಳೂರ ಕೊಡಗೂಸ ನೋಡುತಂ
ಜಂಗಳವ್ವೆಯ ನೊಲಿದುನೋಡಿ ಮನವೀಯುತಂ
ಮಂಗಳಾನನೆ ದುಗ್ಗಳವ್ವೆಗೊಲವೀವುತಂ
ನಿಂಬಿಯಕ್ಕನಮೇಲೆ ಕರತಳಮನೀವುತಂ
ಇಂಬರಿವ ನೈಜಕ್ಕವ್ವೆಯನೊಸೆದು ನೋಡುತಂ
"ವರದಾನಿ ಗುಡ್ಡವ್ವೆ"ಯುಂ ನೋಡಿ ನಲಿವುತಂ

ಈ ಎಲ್ಲ ಮಹಾಮಾತೆಯರು ಮಹದೇವಿಯಕ್ಕನು ಭೂಲೋಕದಲ್ಲಿ ಜನಿಸುವ ಪೂರ್ವದಲ್ಲಿಯೇ ಶಿವನ ಸಭೆಯಲ್ಲಿದ್ದರೆಂದು ಶಿವನ ಪ್ರೀತಿಗೆ ಪಾತ್ರರಾಗಿದ್ದರೆಂದೂ ಹರಿಹರ ಕವಿಯ ಹೇಳಿಕೆ. ಈ ಮಾತುಗಳಿಂದ ವರದಾನಿ ಗುಡ್ಡವ್ವೆಯು, ಮಹದೇವಿಯಕ್ಕನಿಗೂ ಪೂರ್ವದವಳೆಂಬ ಕಲ್ಪನೆ ಬರುತ್ತದೆ. ಅವಳು ಹರಿಹರ ಕವಿಗಿಂತ ಪೂರ್ವದವಳೇ ವಿನಾ ಮಹದೇವಿಯಕ್ಕನಿಗೆ ಪೂರ್ವದವಳಾಗಿರಲಿಕ್ಕಿಲ್ಲ. ಯಾಕೆಂದರೆ ಅವಳು ಅನುಭವ ಮಂಟಪದಲ್ಲಿ ಭಾಗವಹಿಸಿದ ಉಲ್ಲೇಖಗಳು ಹಿಂದಿನ ಕೃತಿಗಳಲ್ಲಿಲ್ಲ ಆದರೆ ಇತ್ತೀಚಿನ ಪುರಾಣಕಾರರು ಅವಳು ಕಲ್ಯಾಣದಲ್ಲಿ ಅನುಭವ ಮಂಟಪದಲ್ಲಿದ್ದಳೆಂದು ತಿಳಿಸುತ್ತಾರೆ.

ಭೀಮಕವಿಯ ಬಸವ ಪುರಾಣದಲ್ಲಿ ಈಕೆಯ ಕಥೆ ಬರುತ್ತದೆ. ಗುಡ್ಡವ್ವೆಯು 'ನಿರುತಮತಿ' 'ಹಿರಿಯಭಕ್ತೆ'ಯೆಂದು ಕರೆಯಲ್ಪಟ್ಟಿದ್ದಾಳೆ. ಆದಯ್ಯನಂತೆ ಸೌರಾಷ್ಟ್ರಕ್ಕೆ ಹೋಗಿ ಸೋಮೇಶನನ್ನು ಒಲಿಸಿಕೊಂಡು, ಶಿವನ ಅನುಗ್ರಹ ಸಂಪಾದಿಸುತ್ತಾಳೆ. ಇವಳ ವಿಷಯವನ್ನು ಬಿಜ್ಜಳನಿಗೆ ತಿಳಿಸುತ್ತಾರೆ. ಅವಳು ನಾಡಿನ ಹಲವೆಡೆಗಳಲ್ಲಿ ಸಂಚರಿಸುತ್ತಾಳೆ. (ಬಸವಪುರಾಣ ಸಂಧಿ ೫೬, ಪದ್ಯ ೫೬ ರಿಂದ

೬೭ ಲಿಂಗಾಯತ ವಿದ್ಯಾಭಿವೃದ್ಧಿಯ ಪ್ರಕಟನೆ, 1971) ಅಲ್ಲಿಯ ಚಿತ್ರವು ಅಷ್ಟೊಂದು ಆಕರ್ಷಕವಿಲ್ಲ.

'ಶಿವತತ್ವ ಚಿಂತಾಮಣಿ'ಯಲ್ಲಿ ೩೬ನೆಯ ಸಂಧಿಯಲ್ಲಿ ಈಕೆಯ ವೃತ್ತಾಂತವು ಷೋಡಶರ ಕಥೆಗಳೊಳು ಒಂದಾಗಿ ಬರುತ್ತಿದೆ. ಲಕ್ಕಣ್ಣ ದಂಡೇಶನು ಈ ಶರಣೆ ಯನ್ನು "ಪರಶಿವನ ಚಿತ್‌ಶಕ್ತಿಯ ಪರಾವತಾರೆ" ಎಂದು ಕರೆದಿದ್ದಾನೆ. ಈಕೆ ಗುಡ್ಡಾಪುರದ ಸೋಮೇಶ ಲಿಂಗಭಕ್ತರ ಗರ್ಭದಲ್ಲಿ ಜನಿಸುತ್ತಾಳೆ: ಚಿಕ್ಕಂದಿನಲ್ಲಿ ಯಾವಾಗಲೂ ಮೌನಿಯಾಗಿ ಲಿಂಗಧ್ಯಾನಪರಳೂ ಆಗಿರುತ್ತಾಳೆ. ಗುಡ್ಡಾಪುರದ ಮೂಡಣಕ್ಕೆ ಮೂವತ್ತು ಗಾವುದದೊಳಿರ್ದ 'ಅಲಂಪುರ'ದೊಳಿದ್ದ ಬ್ರಹ್ಮೇಶಲಿಂಗ ವನ್ನು ಕಿತ್ತು ಅದನ್ನು ನದಿಯಲ್ಲಿಟ್ಟು ಆ ಪೀಠದಲ್ಲಿ ವೀರನಾರಾಯಣನನ್ನು ಧೂರ್ತರು ಸ್ಥಾಪಿಸುತ್ತಾರೆ. ಅಲ್ಲಿಯ ವೀರಗಣ ವೀರನಾಚಯ್ಯನಿಗೆ ಇದನ್ನು ತಿಳಿದು ವ್ಯಸನವಾಗುತ್ತದೆ. ಊಟ ನಿದ್ರೆತೊರೆದು ಅವನು ಚಿಂತೆಯಲ್ಲಿರುವಾಗ ಬ್ರಹ್ಮೇಶನು ವೀರನಾಚಯ್ಯನ ಕನಸಿನಲ್ಲಿ ಬಂದು, 'ಆ ನೀಚರನ್ನು ಸಂಹರಿಸಲು, ಗುಡ್ಡಾಪುರಕ್ಕೆ ಹೋಗಿ ಎಮ್ಮರಸಿ 'ವರದಾಸಿ'ಗೊಂದು ಮಾತು ಸೂಚಿಸು' ಎಂದೆನ್ನಲು ವೀರನಾಚಯ್ಯನು 'ಪಕ್ಷಿವೇಗ'ದೊಳು ಆಗಮಿಸಿ, ಗುಡ್ಡಮ್ಮಗಳಿಗೆ ವಿಷಯ ನಿರೂಪಿಸಲು ಅವನಿಗೆ ಗುಡ್ಡಮ್ಮೆಯು, ಏನಿ, ಬಿಜಯಂಗೈದರಯ್ಯ ? ಏನು ಸೇವೆಯನೆನಗೆ ಕರುಣಿಸಲ್ ಬಂದಿರಿ" ಎಂದು ಅಂತಃಕರುಣಪೂರ್ವಕ ಕೇಳುತ್ತಾಳೆ. ಅದಕ್ಕೆ ವೀರನಾಚಯ್ಯನು 'ಮಾನನಿಧಿ', 'ಜಗನ್ಮಾತೆ', 'ಸುಜ್ಞಾನ ಮಾನಸೆ,' "ಜಗವೆಲ್ಲವಂ ಪುಟ್ಟಿಸಲು ಜನನಿಯಾಗಿ, ಜಗದ ಜೀವರ ಯಂತ್ರಸೂತ್ರವು ನೀನಾಗಿ, ಜಗದ ತಾಂಡವ ಮೂರ್ತಿಯಾಗಿಪ್ಪ ನಿನ್ನ ನಿಜವರಿವರೊಳರೇ ? ಜಗದಿಂದಲತ್ತತ್ತ ಲಾರುವರಿಯದ ಶಿವನಮೊಗದ ಕನ್ನಡಿಯೆ, ನಿನ್ನನಾತನೆ ಬಲ್ಲನು" ಎಂದು ಹೊಗಳು ತ್ತಾನೆ. "ಆಡಿಸುವ ಸೂತ್ರಧಾರಿಯನರಿದು ಎನ್ನ ಕೊಂಡಾಡುವರೆ? ಜಗವು ಆರ ಜಠರದೊಳಿರ್ಪುದು ? ಆಡುವರಾರು ? ಆಡಿಸುವರಾರು ? ಉಭಯಮಂ ನೋಡಿ ಮೆಚ್ಚಿಪರದಾರು ? ಎಂಟಂಗಗಳು ಎಂಟುದೆಸೆಯೊಳು ಬೀಡು ಬಿಟ್ಟವೆ: ಇವ ಪಡಿಯಾದವರಾರು ? ಶರಣರೇ ಬಲ್ಲರು: ನಿಮ್ಮೊಡನೆ ಆಡಲೇಂ" ಎಂದು ದಾನವ್ವೆಯು ನುಡಿಯುತ್ತಾಳೆ. ಅದಕ್ಕೆ ವೀರನಾಚಯ್ಯಗಳು, "ಹರಕರುಣವೇ ಮೂರ್ತಿಯಾಗಿ ಬಂದಿರೋ, ಎನ್ನ ನರಜನ್ಮಮಂ ನೀಗಿಸಲ್ ಬಂದಿರೋ, ಎನ್ನ ಜನ್ಮಪುರುಷಾರ್ಥ ಸಿದ್ಧಿಗೆ ಬಂದಿರೋ, ಕರುಣಿಸುವುದು" ಎಂದು ಗುಡ್ಡವ್ವೆಗಳ ಪಾದಗಳಲ್ಲಿ ಬಿದ್ದು ಕೇಳಿಕೊಳ್ಳುತ್ತಾಳೆ. ಅದಕ್ಕೆ ಗುಡ್ಡಮ್ಮನು ಅವನಿಗೆ, "ಹೇಳದುದನು ಅರಿವ ಅರಿವಿನ ನಿಲವು ನೀವು, ಬಾಳಲೋಚನನ ಚಿಚ್ಛಕ್ತಿ ನೀವು" ಎಂದು ನುಡಿಯುತ್ತಾಳೆ. ವೀರನಾಚಯ್ಯನು "ಆಳ್ದಳೇ ಬಿನ್ನಪವ ಚಿತ್ತೈಸು" ಎಂದು ಅಲಂಪುರದಲ್ಲಿ ನಡೆದುದೆಲ್ಲವನ್ನೂ ವಿಶದವಾಗಿ ತಿಳಿಸುತ್ತಾರೆ. ಆ ಮಾತು ಗಳನ್ನು ಕೇಳಿ ಗುಡ್ಡವ್ವೆಯು ಮುಳಿದು, ಭುಗಿಲಿಡುತೆದ್ದು, ಹೊನ್ನಯ್ಯ, ಪಾಂಡ್ಯ ನಾಯಕ, ಕಿನ್ನರಬ್ರಹ್ಮಯ್ಯ, ಬೀರಿದೇವ, ಬಿಜ್ಜಯ್ಯ, ಪಡಿಹಾರಿ ಸೋಮಯ್ಯ,

ಮನ್ನಣೆಯ ಕಾಳಮ್ಮ, ಕೇತಮ್ಮ, ಮೊದಲಾದ ಗಣಂಗಳೆಲ್ಲರನ್ನು ಕರೆದು ಅವರನ್ನೊಂದುಗೂಡಿಸಿ ಉಳಿದ ನಂದಿಮುಖ, ಹಂಪಯ್ಯ, ಕಂದರ್ಪವಿಜಯ ಕಲ್ಯಾಣ, ಬಾಚಮ್ಮ, ದೇವಯ್ಯ, ಸೇನನಾಥ, ಚಿಕ್ಕರಿಗೆ ನಾಗಯ್ಯ, ಸೂವಲ ಬಾಚಿತಂದೆ, ನಿವೆಲ್ಲ ಬನ್ನಿರಿ ಎಂದು ಇತರರನ್ನು ಕಳೆಹಾಕಿದುದಲ್ಲದೆ ಅಲಂಪುರದಲ್ಲಿ ನಡೆದ ಅನಿಷ್ಟಘಟನೆಗಳನ್ನು ಮತ್ತು ವೀರ ನಾಚಯ್ಯಗಳು ಬಂದ ವೃತ್ತಾಂತವನ್ನೂ ಸುತ್ತಣ ನಾಲ್ಕು ಗ್ರಾಮದವರಿಗೂ ತಿಳಿಸುತ್ತಾಳೆ. ಎಲ್ಲರೂ ಅಲಂಪುರದ ಹೊರ ವಲಯದೊಳು ಕೂಡಲು ದಾನಮ್ಮನು ತಿಳಿಸುತ್ತಾಳೆ. ವೀರನಾಚಯ್ಯಗಳನ್ನು ಊರೊಳಗೆ ಕಳಿಸುತ್ತಾಳೆ. ಕೂಡಿದ ಗಣಮೇಳದೊಂದಿಗೆ ನಲಿವುತ್ತ ಕೆಲೆವುತ್ತ, ಮುದ್ದಿಸುತ ಮೋಹಿಸುತ, ಮಳಕಿಸುತ, ಹದಿನಾರುರಥವ ತರಿಸಿ; ಬಿರುದಿನ ಪತಾಕೆ ಗಳ ಎತ್ತಿಸುತ, ಶರಣರ ಕೀರ್ತಿಗಳ ಬಿರುದನುಗ್ಗಡಿಸುತ, ರಥವನೇರಿ ಗುಡ್ಡವ್ವೆಯು ಅಲಂಪುರಕ್ಕೆ ಧಾಳಿಯಿಡಲು ಹೊರಡುತ್ತಾಳೆ. ಮೃಡನನಡುಗಣ್ಣ ಕೋಪದ ಕಿಡಿಯ ಬಳಗದಂತೆ, ಕಡೆಗಾಲದಂದು ಸಂಹರಿಪ ರುದ್ರನ ಸರ್ವ ಪಡೆಯಂತೆ, ದಕ್ಷಾಧ್ವರ ಧ್ವಂಸಿ ವೀರೇಶ್ವರನ ವೀರಗಣಪರಿವಾರದಂತೆ, ಖಡ್ಗ, ತೋಮರ, ಪರಶು, ಚಕ್ರ, ಧನು, ಶರ, ಮುಸಲ, ಜಡಿವಪತ್ರದ ವೀರಭಟಕೋಟಿಯು ಧಾಳಿಯಿಡಲು, ನಡೆ ದಾಗ ಗುಡ್ಡಮ್ಮನೇ ಮುಂದಿರುತ್ತಾಳೆ. ಶಿವನಲ್ಲದೆ ಬೆರೇ ದೈವವು ಶ್ರೇಷ್ಠವಲ್ಲ ಎನ್ನುವ ತತ್ವವನ್ನು ನಂಬಿ, ಶಿವವಿರೋಧಿಗಳ ಮದವನ್ನಡಗಿಸಲು ವೀರನಾಚಯ್ಯ ಮೊದಲಾದ ವೀರಗಣದೊಂದಿಗೆ ರಣಕಹಳೆಗಳೊಡನೆ ಗುಡ್ಡವ್ವೆಯು ಹೊರಡಲು ಶಿವಭಕ್ತರು ಆಕೆ ಯನ್ನು ಸ್ವಾಗತಿಸುತ್ತಾರೆ. ಅವರಿಗೆಲ್ಲ ಗುಡ್ಡವ್ವೆಯ ಆಗಮನವು ಪ್ರಾಣಬಂದಂತಾಗು ತ್ತದೆ. ಶರಭಕ್ಕೆ ಸಿಂಹ, ಗರುಡಕ್ಕೆ ಉರಗ ಅಂಜುವಂತೆ ವೈರಿಗಳು ಎದೆಗುಂದುತ್ತಾರೆ. ಬ್ರಹ್ಮೇಶಲಿಂಗವನ್ನು ಪುನಃ ಪ್ರತಿಷ್ಠಾಪಿಸುತ್ತಾರೆ. ಸಮಸ್ತ ಶಿವಗಣವು ಹರುಷ ವನ್ನು ತಾಳುತ್ತದೆ. ಅಲ್ಲಿ ಗುಡ್ಡವ್ವೆಯು ನೆರೆದ ಭಕ್ತವೃಂದಕ್ಕೆ ಶಿವನ ಸಾಮರ್ಥ್ಯ ವನ್ನು ಕೊಂಡಾಡುತ್ತಾಳೆ. ಶರಣಾಗತರಾದವರನ್ನು ರಕ್ಷಿಸಿ, ಮುನಿದವರ ಶಿರವ ನೀಡಾಡುತ್ತಾಳೆ. ಅಲ್ಲಿ ನೆರೆದಿರ್ದ ಮುತ್ತೈದೆಯರು ಗುಡ್ಡಮ್ಮನಿಗೆ "ವೀರ ಸಾಮ್ರಾಜ್ಯ ಸಂಪದ ಸಿದ್ಧಿರಸ್ತು; ಶಿವಮಸ್ತು; ಶೈವವ್ರತಾಚಾರ ನಿಷ್ಕಂಟಕ ವ್ಯಾಪ್ತಿರಸ್ತು; ಶಿವಾತ್ಮಯೋಗೋಸ್ತು" ಎಂದು ಹರಸುತ್ತಾರೆ. ವೀರಮಾಹೇಶ್ವರ ರೆನಿಪ ಷೋಡಶರು ಗುಡ್ಡಮ್ಮಗಳ ಕೈಗೆ ವೀರಗಂಕಣ ಕಟ್ಟಲು ಮುಂದಾಗುತ್ತಾರೆ. ಪಾರ್ವತಿಯ ಹದಿನಾರು ಕಳೆಗಳೇ ಷೋಡಶ ವಿಭೇದನಾಮದಿಂ ಜನಿಸಿದುದರಿಂದ ಅವರೆಲ್ಲ ಷೋಡಶರಾದರು. ನಾಚಯ್ಯನು ಗುಡ್ಡಮ್ಮನನ್ನು ವಿಶ್ವತಶ್ಚಕ್ಷುರುತ ಬ್ರಹ್ಮೇಶನೇ ನಿನಗೆ ವರನು, ನೀನು ಸಾಕ್ಷಾತ್ ಪಾರ್ವತಿ' ಎಂದು ಕೊಂಡಾಡು ತ್ತಾನೆ. ಅಲ್ಲಿ ಅನೇಕರಿಗೆ ಶಿವಧರ್ಮದೀಕ್ಷೆ ಕೊಡುತ್ತಾಳೆ. ಮರಹಿನಿಂದ ಬಂದ ದುಷ್ಕರ್ಮವನ್ನು ಕಳೆದುಕೊಳ್ಳಲು ಬ್ರಹ್ಮೇಶಲಿಂಗಾಲಯದಲ್ಲಿ ಜಪಹೋಮಾದಿ ಗಳನ್ನು ಮಾಡಲು ತಿಳಿಸುತ್ತಾಳೆ. ಈ ಷೋಡಶರು ಪರಮವೀರವ್ರತಾಚಾರ ನಿಷ್ಠಾಭಕ್ತಿಪರಿಪೂರ್ಣರೆಂದು ಲಕ್ಕಣ್ಣದಂಡೇಶನು ಈಕೆಯ ಚರಿತ್ರೆಯನ್ನು ಹೇಳಿ

ಅದನ್ನು ಆಲಿಸಿದವರಿಗೆ ನಿರುಪಮ ಐಶ್ವರ್ಯ, ಆಯುಷ್ಯ, ಆರೋಗ್ಯ, ಉರುತರ ಶಿವಜ್ಞಾನಯುತ ಸದ್ಭಕ್ತಿ ದೊರೆಯುತ್ತವೆಯೆಂದು ತಿಳಿಸಿದ್ದಾನೆ.

ಈ ವಿಷಯಗಳನ್ನು ಪರೀಕ್ಷಿಸಿದರೆ ಗುಡ್ಡವ್ವೆಯು ಅಲಂಪುರದಲ್ಲಿ ಬ್ರಹ್ಮೇಶ ಲಿಂಗವನ್ನು ಪ್ರತಿಷ್ಠಾಪಿಸಿದುದು ಸ್ಥಾವರ ಲಿಂಗಸ್ಥಾಪನೆ ಮುಂದುವರಿಸಿದುದೂ ಕಂಡುಬರುತ್ತದೆ. ಲಕ್ಷ್ಮೇಶ್ವರದಲ್ಲಿ ಆದಯ್ಯನು, ಅಬ್ಬಲೂರಲ್ಲಿ ಏಕಾಂತದ ರಾಮಯ್ಯನು ನೆರವೇರಿಸಿದ ಕೃತ್ಯಗಳೂ ಇಂತಹವೇ; ಆದುದರಿಂದ ಈ ಮಹಾ ತಾಯಿಯನ್ನು ಆ ಶರಣ ಗಣಕ್ಕೆ ಸೇರಿಸಬಹುದು. ಡಾ. ಪಿ. ಬಿ. ದೇಸಾಯಿಯವರು 1964ರಲ್ಲಿ ಪ್ರಸಿದ್ಧಿಸಿದ ಬೊಂಬೆ ಕರ್ನಾಟಕದ ಶಾಸನಗಳಲ್ಲಿ ( S I Vol XV ಗ್ರಂಥದ ಪುಟ 73–74ರಲ್ಲಿ) ಪ್ರಕಟಿಸಿದ ತಾಳಿಕೋಟೆಯ ಶಾಶನ 56ರಲ್ಲಿ ಮಹಾ ಮಂಡಲೇಶ್ವರ ವಿರುಪರಸರು ವೀರದಾಸಯ್ಯನಿಗೆ ವೀರಬಯ್ಸೇಶ್ವರ ದೇವಾಲಯ ಮತ್ತು ಗಣಮಠದ ರಕ್ಷಣೆಗೆ ದಾನ–ದತ್ತಿ ನೀಡಿದ್ದುದರ ಉಲ್ಲೇಖವಿದೆ; ಈ ಗಣ ಮಠದ ಗಣಗಳು ಇತರ ಸಮಯದವರಮೇಲೆ ಜಯ ಸಂಪಾದಿಸಿದ್ದರು. ಅವರು ಜಯ ಸಂಪಾದಿಸಿದ ಊರುಗಳೆಂದರೆ : ಪರಿಯಳಿಗೆ, ಅಣಿಲೆವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು, ಮಾರುಡಿಗೆ, ಅಣಂಪೂರ, ಕರಹಾಡ, ಕೆಂಭಾವಿ, ಬಮ್ಮಕೂರು ಮತ್ತಿತರ ಊರುಗಳು. ಇದರಲ್ಲಿ ಅಣಂಪೂರದಲ್ಲಿಯ ಘಟನೆ ಅಲಂಪೂರದಲ್ಲಿಯ ನಡೆದ ಗುಡ್ಡವ್ವೆಯು ಕೈಕೊಂಡ ಲಿಂಗ ಸ್ಥಾಪನೆಯಾಗಿರಬಹುದಾಗಿದೆ. ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿಯೇ ಮೊತ್ತಮೊದಲು ಈ ಶರಣೆಯ ಚರಿತ್ರೆಯನ್ನು ವಿಶದವಾಗಿ ನಿರೂಪಿಸುವ ಕಾವ್ಯ. ಅವಳ ಉಗ್ರಶೈವಾಭಿಮಾನ, ಕಲಿತನ–ಇವು ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಅಲಂಪೂರದಲ್ಲಿ ಅವಳು ಶೈವಲಿಂಗವನ್ನು ಪ್ರತಿಷ್ಠಾಪಿಸಿದ ಘಟನೆ ನಿರುಪಿತವಾದುದು ಈ ಕಾವ್ಯದಲ್ಲಿಯೇ. ಡಾ. ಹಳಕಟ್ಟಿಯವರು ಕ್ರಿ. ಶ. ೧೯೫೫ರಲ್ಲಿ "ಶಿವಶರಣೆಯರ ಚರಿತ್ರೆಗಳು" ಎನ್ನುವ ಪುಸ್ತಕದಲ್ಲಿ ಪುಟ ೫೫–೫೭ರಲ್ಲಿ 'ನಾವದಿಗೆಯ ಗುಡ್ಡಮ್ಮ' ಎನ್ನುವಲ್ಲಿ ಆವಳ ಕಥೆ ನಿರೂಪಿಸಿದ್ದಾರೆ: ಅದಕ್ಕೆ ಬಸವಪುರಾಣವೇ ಆಧಾರವಾಗಿರು ವಂತೆ ಕಂಡುಬರುತ್ತವೆ. ಅಲ್ಲದೆ ಅದೇ ಪುಸ್ತಕದ ೬೩–೭೪ ಪುಟಗಳಲ್ಲಿ ಮತ್ತೊಮ್ಮೆ ಈಕೆಯ ಕಥೆಯನ್ನು " ವರದಾನಿ ಗುಡ್ಡಮ್ಮ " ಎಂಬ ಶಿರ್ಷಿಕೆಯಲ್ಲಿ ಬರೆದಿದ್ದಾರೆ. ಈ ಲೇಖನದಲ್ಲಿ ಅವಳ ಕಥೆಯನ್ನು ವಿವರಿಸಿದ್ದಾರೆ. ವಿಶೇಷವಾಗಿ ಅವಳ ದೇಶ ಸಂಚಾರ, ಶಿವಭಕ್ತರಿಗೆ ಮಾಡಿದ ಹಿತ ಶಿವಶರಣರಸಂದರ್ಶನ, ಅವಳಕಲಿತನದ ಕೃತಿ ಮೊದಲಾದವುಗಳನ್ನು ವಿವರಿಸಿದ್ದಾರೆ. ಲಕ್ಕಣ್ಣದಂಡೇಶನ ಹೇಳಿಕೆಯ ಪ್ರಕಾರ ಅಲಂಪುರವು ಮಲಪ್ರಭಾ ನದೀ ತೀರದಲ್ಲಿರಬೇಕು. ಆದರೆ ಈ ಹೆಸರಿನ ಗ್ರಾಮವು ಮತ್ತು ಬ್ರಹ್ಮೇಶನ ಲಿಂಗಾಲಯವು ಅಲ್ಲಿಲ್ಲವೆಂದೂ ಇದು ತಪ್ಪೆಂದೂ ಅಲಂಪುರವು ರಾಯಚೂರು ಜಿಲ್ಹೆಯಲ್ಲಿ ಒಂದು ಅತ್ಯಂತ ಪವಿತ್ರವಾದ ಸ್ಥಳವೆಂದು ಪ್ರಸಿದ್ಧಿ ಹೊಂದಿದೆ ಅಲ್ಲಿ ಬ್ರಹ್ಮೇಶಲಿಂಗಾಲಯವಿದ್ದು ಅದು ತುಂಗಾಭದ್ರಾತೀರದಲ್ಲಿದೆಯೆಂದಿ ದ್ದಾರೆ (ಪುಟ ೭೭) ಅಲ್ಲಿ ಒಂದು ತ್ರಿಪದಿಯನ್ನು ಉದಾಹರಿಸಿದ್ದಾರೆ. ಆ ಪದ್ಯದಲ್ಲಿ ಲಿಂಗವನ್ನು ಸ್ಥಾಪಿಸಿದ ಮಾತು ಬಂದಿದೆ

"ವಾರಿಜಾಕ್ಷನ ಕಿತ್ತು ಮಾರವೈರಿಯ ನಿಲಿಸಿ
ಧಾರಿಣಿಯ ಮೇಲೆ ಜಪವೆತ್ತೀಶನ ಬೆರೆದ
ಧೀರೆ ಗುಡ್ಡವ್ವೆ—ಶರಣಾಗು"—

'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ' ಸಂಪುಟ ೧, ಪುಟ ೩೮೬ರಲ್ಲಿ ಗುಡ್ಡವ್ವೆಯ ಕಥೆ ಅತಿ ಸಂಕ್ಷಿಪ್ತವಾಗಿ ಬಂದಿದೆ. ಬಸವಪುರಾಣದ ಕಥೆಯೇ ಇಲ್ಲಿ ಬಂದಿದೆ.ಅಲ್ಲಿ ವಿಚಾರಾರ್ಹ ಘಟನೆಗಳಾವುವೂ ಇಲ್ಲ.(ಭೈರವೇಶ್ವರ ಕಾವ್ಯದ ಕಥಾಮಸೂತ್ರ ರತ್ನಾಕರ, ಸಂಪುಟ ೧; ಸಂಪಾದಕರು: ಡಾ. ಆರ್. ಸಿ. ಹಿರೇಮಠ, ಕ. ವಿ.ವಿ. ಪ್ರಕಟನೆ ೧೯೬೪.)

[ ೬ ]

ಗುಡ್ಡಮ್ಮನನ್ನು ಕುರಿತು ಭಕ್ತರು ಕೆಲವು ಹಾಡುಗಳನ್ನು ಬರೆದಿದ್ದು ಕೆಲವು ಪದ್ಯಗಳು ಪುಸ್ತಕಗಳಲ್ಲಿ ಪ್ರಕಟವಾಗಿವೆ. ಆ ಕವಿತೆಗಳಲ್ಲಿ ಆ ವ್ಯಕ್ತಿಯ ಬಗೆಗೆ ಬರುವ ಕೆಲವು ಮಾತುಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ದಾನಮ್ಮ 'ಮೂಜಗದ ತಾಯಿ', 'ಪಾರ್ವತಿದೇವಿ', 'ಸೋಮಲಿಂಗನ ಪತ್ನಿ, ಆದಿಶಕ್ತಿ, ಸಂಗಮೇಶ್ವರನನ್ನು ನಂಬಿ ದೇವಿ ಭೂಲೋಕದಲ್ಲಿ ಶರಣೆಯ ರೂಪವ ಧರಿಸಿ, ಗುಡ್ಡಾಪುರದಲ್ಲಿ ನೆಲೆಸಿದಳು. ಅನಂತರಾಯ ಶಿರಸಮ್ಮ ಎಂಬ ದಂಪತಿಗಳಲ್ಲಿ ಜನಿಸಿದಳು. ಅವಳ ಮೊದಲಿನ ಹೆಸರು ಲಿಂಗಮ್ಮ. ಊರು ಬಿಟ್ಟು ಕಪ್ಪಡಿಸಂಗಮ ಅಲ್ಲಿಂದ ಬಾಗೇವಾಡಿಗೆ ಹೋಗಿ ಕಲ್ಲಮೂರ್ತಿ ನಂದಿಗೆ ಕಬ್ಬನ್ನು ಮೆಲ್ಲಿಸಿದಳು; ಅಲ್ಲಿಂದ ಕಲ್ಯಾಣಕ್ಕೆ ಹೋಗಿ ಜಂಗಮ ದಾಸೋಹವ ಮಾಡಿದಳು. ಅಲ್ಲಿ ದಾನ ಧರ್ಮಾದಿಗಳನ್ನು ಮಾಡಿ 'ದಾನಮ್ಮ' ಎಂಬ ಹೆಸರು ಪಡೆದಳು. ಕುರುಡರು, ಕುಂಟರು, ಬಂಜೆಯರು ಇವರಿಗೆಲ್ಲ ಫಲವ ಕೊಟ್ಟಳು. ಈಕೆಯ ಪೂಜೆಯು ನಿತ್ಯವೂ ಮೂರು ಹೊತ್ತು ನಡೆಯುತ್ತಿದೆಯೆಂದು ಆ ಪದ್ಯಗಳಲ್ಲಿ ವ್ಯಕ್ತವಾಗಿದೆ. ಶಿವಾನುಭಾವಿಯಾಗಿ ನಾಡಿನಲ್ಲಿ ಸಂಚರಿಸಿ ಶಿವಭಕ್ತಿಯನ್ನು ಹಬ್ಬಿಸಿದ ಕೀರ್ತಿ ಈ ತಾಯಿಗೆ ಸಲ್ಲುತ್ತದೆ.

ಈ ಶರಣೆಯು ಪಂಚಾಳ ಕುಲದಲ್ಲಿ ಜನಿಸಿ ವೀರಶೈವ ದೀಕ್ಷೆಯನ್ನು ಹೊಂದಿದ್ದಾಳೆ. ಅವಳಿಗೆ ದೀಕ್ಷೆ ಕೊಟ್ಟ ಗುರು ಸಂಗಮೇಶ ಯಾರು ? ತಿಳಿಯದು. ಅವಳ ದೇವಾಲಯದಲ್ಲಿ ಆಕೆಯ ಗುರುವಿನ ಪಾದುಕೆಗಳೂ ಇವೆ. ದೇವಾಲಯದಲ್ಲಿ ಸೋಮೇಶನ ಲಿಂಗಮೂರ್ತಿಯಿದ್ದು ಅವಳು ಸೋಮೇಶ್ವರನ ಭಕ್ತಳಾಗಿದ್ದಳೆಂಬುದನ್ನು ಸೂಚಿಸುತ್ತದೆ. ಮಲ್ಲಿಕಾರ್ಜುನ ಗುಡಿಯಿರುವುದು ಅವಳು 'ಗುಡ್ಡವ್ವೆ' ಎಂಬ ಹೆಸರಿಡಲು ಕಾರಣವಾದ ಶ್ರೀಶೈಲ ಮಲ್ಲಿಕಾರ್ಜುನ ಕುರುಹಾಗಿದೆ. ಆ ಆವಾರದಲ್ಲಿಯೇ ವೀರಭದ್ರನ ಗುಡಿಯಿರುವುದು. ಮತ್ತು ಗದುಗಿನಲ್ಲಿ ವೀರಭದ್ರ ದೇವಾಲಯದಲ್ಲಿ ಗುಡ್ಡಮ್ಮನ ಮೂರ್ತಿಯಿರುವುದು ಆಕೆ ರುದ್ರನಂತಿದ್ದುದರಿಂದ ಅವಳ ನೆನಪು ಮಾಡಿಕೊಂಡಾಗೆಲ್ಲ ರುದ್ರದೇವರ ನೆನಪು ಬರುವುದನ್ನು ಸೂಚಿಸುತ್ತದೆ. ಆಕೆ ಪಾಂಚಾಳ ಕುಲದಿಂದ ಮತಾಂತರ ಹೊಂದಿ ವೀರಶೈವಕ್ಕೆ ಮಾಡಿದ ಸೇವೆ

ಅನುಪಮ. ಜಾತಿ ಮತ ಭೇದಗಳಿಲ್ಲದೆ ಕರ್ನಾಟಕ-ಮಹಾರಾಷ್ಟ್ರದಲ್ಲಿ ಇಂದಿಗೂ ಹಲವಾರು ಭಕ್ತರು ಆಕೆಗೆ ನಡೆದುಕೊಳ್ಳುತ್ತಿರುವುದು ಅವಳ ಹಿರಿಮೆಗೆ ಸಾಕ್ಷಿ. ಸ್ತ್ರೀ-ಪುರುಷರೆಂಬ ಭೇದವಿಲ್ಲದೆ ಕನ್ನಡ ಜನತೆ ಆಕೆಗೆ ತೋರಿದ ಗೌರವ-ತೋರು ತ್ತಿರುವ ಭಕ್ತಿ ಇಂದಿಗೂ ಅನುಕರಣೀಯವಾಗಿವೆ. ಅವಳ ಕಾಲದಲ್ಲಿಯೇ ಸ್ಮಾರಕ ಗಳು ರಚಿತವಾದುದನ್ನು ನೋಡಿದರೆ ಮತ್ತು ಅನೇಕ ಹಿರಿಕಿರಿಯ ರಾಜರ ಮೇಲೆ ಬೀರಿದ ಪ್ರಭಾವವನ್ನು ಅರಿತರೆ ಅವಳು ಅಂದು ಮಹದೇವಿಯಕ್ಕನಿಗಿಂತ ಯಾವ ವಿಧದಲ್ಲೂ ಕಡಿಮೆಯಲ್ಲ ಎನ್ನಬೇಕು. ಅವಳ ಶೌರ್ಯವನ್ನು ನೆನೆದಾಗ ನಮಗೆ ಕಿತ್ತೂರ ರಾಣಿ ಚೆನ್ನಮ್ಮನ ನೆನಪಾಗುತ್ತದೆ.

# ಅನುಬಂಧ

## ಗುಡ್ಡಾಪುರ ದಾನಮ್ಮನಿಗೆ ಸಂಬಂಧಿಸಿದ ಶಾಸನಗಳು

[SI. Vol. xvi 1964, ಪುಟ 73-74]

### [೧] ತಾಳೀಕೋಟೆಯ ಶಾಸನ : 1184 A.D. April, 25th

ಈ ಶಾಸನದಲ್ಲಿ ನೇರವಾಗಿ ದಾನಮ್ಮನ ಉಲ್ಲೇಖವಿರದಿದ್ದರೂ 'ಅಣಂಪುರ'ದ ಹೆಸರಿದ್ದು 'ಅಣಂಪುರ'ವೇ ಅಲಂಪುರವಿರಬೇಕೆಂದೂ ಘೋಡಶರ ವರ್ಣನೆ ಇರುವುದ ರಿಂದಲೂ ದಾನಮ್ಮನಿಗೆ ಸಂಬಂಧಿಸಿರಬೇಕೆಂದು ತಿಳಿಯಲಾಗಿದೆ.

### ಶಾಸನದ ವೃತ್ತಾಂತ

1 ದಿಂ ಮುಟಿವರುಂ ಪರಸಮಯಗಿರಿವಜ್ರದಂಡರುಂ ಜಗದಲುದ್ದಂ-
2 ಡರುಂ ಜಿನಸಮಯವನದಹನದಾವಾನಳರುಂ ಮುನಿದರ್ಗೆ
3 ಹಾಳಾಹಾಳರುಂ ಚಾರ್ಧ್ವಸಮಯವಿಧ್ವಂಸನಪ್ರವೀಣರುಂ ಬಗೆ
4 ಯಲು ಜಾಣರುಂ ಅನ್ಯಸಮಯಿಗಳ ಬೆನ್ನಬಾರನೆತ್ತುವರುಂ ಸೆ
5 ಣಸುವರ ನೆತ್ತರ ಮರುಳ್ಗಳಿಂ ಕುಡಿಸುವರುಂ ಪರಸಮಯ
6 ಘರಟ್ಟರುಂ ವೀರಕು[ಪ್ಪ]ರವಟ್ಟರುಂ ಕಾಲನ ನಾಲಗೆಯುಂ ಕೀಳ್ವರುಂ
7 [ಬಾ]ರಿಯಂ ಕೂರದರ್ಗೀವರುಂ ನಂಜನಂಜದುಂಬರುಂ
8 .... .... .... ಟಸಿ ಮಾರ್ಕ್ಕೊರ್ಳ್ವರುಂ ಬಹುವಿಧ ನಿಷ್ಟಾವಶೀಕೃತಜ
9 .... .... [ರುಂ] ಅಸಂಖ್ಯಾತ ಸಂಖ್ಯಾಭಿಧೇಯ ಮಹಾ
10 .... .... ಪುರಸಮಯ ಸರಸಿಜಾತ ಸಮೂಹ ಮದಕರಿಗಳಂ
11 .... .... .... ಹು ವಿಧ ನಿಷ್ಠೆಯಿಂ ಹರನಂ ಪರಿಕ್ಸಿ ಭವಮನಂ ತರ್ಸಿ ಪರಸಮ
12 .... .... .... ಮಂ ಸಂಹರ್ಸಿ ಜರಮಂ ಮಾಂಕರಿಸುವುದ್ದಂಡರುಂ
13 .... .... .... ಲೆ ಗಂಡರುಂ ಪರಿಯಳಿಗೆ ಅಣಿಲೆವಾಡ ಉಣುಕಲ್ಲು ಸಂ
14 ಪಗಾವಿ ಅಬ್ಬಲೂರು ಮಾರುಡಿಗೆ ಅಣಂಪೂರು ಕರಹಾಡ ಕೆಂ
15 ಭಾವಿ ಬಮ್ಮಕೂರು ಮೊದಲಾಗಿ ಅನನ್ತ ದೇಶಾಂತರದಲಿದಿ

16 ರಾದ ಪರಸಮಯಿಗಳಂ ಪಡಲ್ವಡಿಸ್ಸಿ ಲೋಕಮನಾಕಂಪಂ ಗೊ
17 ಳ್ಸಿ ಬಸದಿಗಳಂ ಹೊಸೆದುಮುಕ್ಕಿ ಶಿವಲಿಂಗಸಿಂಹಾಸನಮಂ....
18 ಣ್ಗೊಳ್ಸಿ ಚಲಮಂ ಮೆಱೆದು ಧೀರರೊಳು ನೆರೆದು ಸ್ವರ್ಗಮರ್ತ್ಯ
19 ಪಾತಾಳದೊಳನಂಗಾರಿಯ ಹೆಮ್ಮಯ್ಯಂ ತಮ್ಮ ಭ್ರಿ
20 ತ್ಯಾಚಾರದ ತೊಮ್ಮೆಯ್ಯಂ ತಳದಲಿಕ್ಕಿ ತೋರ್ಪನ್ತೆ ತೋಱಿದ ಪುರಾತ
21 ನ ನೂತನರೆನಿಸಿದ ಅಸಂಖ್ಯಾತ ಗಣಂಗಳ ನಾಮಾದಿ ಸ
22 ಮಸ್ತ ಪ್ರಶಸ್ತಿ ಸಹಿತಂ ॥ ಸ್ವಸ್ತಿ ಶ್ರೀಮಚಾಳುಕ್ಯ ಚಕ್ರವರ್ತ್ತಿ ತ್ರಿಭು
23 ವನಮಲ್ಲ ವೀರಸೋಮೇಶ್ವರ ವರ್ಷದ ೩ನೆಯ ಕ್ರೋಧಿ ಸಂವತ್ಸ-
24 ರದ ವೈಶಾಖ ಶುದ್ಧ 13 ಸೋಮವಾರದಂದು ಶ್ರೀ ವೀರಬಯ್ಸೇಶ್ವ-
25 ರದೇವರ್ಗ್ಗೆ ಅಂಗಭೋಗ ಚೈತ್ರಪೈತ್ರ ಸಕಲಗಣಂಗಳ ದೇವತಾರ್ಚನೆ-
26 ಗಳಂ ಮಾಳ್ಪಂತಾ [ಗಿ] ಶ್ರೀಮನುಮಹಾಮಂಡಳೇಸ್ವರಂ ವಿರುಪ-
27 ರಸದೇವರು ವೀರದಾಸಂಗೆ ಗಣಮಠವಾಗಿ ಕೊಟ್ಟಕೆಯಿ ತಾಳಿ-
28 ಯಕೋಟೆಯಿಂ ಬಡಗಲು ಬಂಮನಹಳ್ಳಿಯಿಂ ಮೂಡಲು ಕಾರೆಗಮಾರಿ
29 ಗೆ ಹೋದ ದಾರಿಯಿಂ ಉಪ್ಪುವಳ್ಳ ತೆಂಕಣಸೀಮೆಯಾಗಿ ಬಡಗಲು
30 ಗೊಟ್ಟ ಕಂಡಿಕೆಯಿಂದಿಳಿದು ಬಂದ ಹಳ್ಳ ಮೇರೆಯಾಗಿ ಮಾಣಿಕೇಶ್ವ-
31 ರದ ಕೋಲಲು ಚದುರಸ ಮತ್ತರು ೧೦೦ ದೇವರ ಪೌಳಿಯಿಂ ಸಂದ್ಸಿ.
32 ಹೊಱಗೆ ತೆಂಕಲರಮನೆಯ ಬೀದಿ ಮೇರೆಯಾಗಿ ನೀಳಹಸ್ತ ೨೭ ಅಗಲಹ.
33 ಸ್ತ ೨೦ರ ನಿವೇಶಣ ೧ ಅಂಗಡಿ ೧ ಊರಿಂ ಮೂಡಲು ತೋಟ ೧ ಡೋಣಿಯಿಂ
34 ಪಡವಲು ತೋಟ ೧ ಅನ್ತು ತೋಟು ದೇವಮಾನ ಹೊಂಗೆಹೋಳ ಮಾ ೨ ನುಣ್ಬ.
35 [ನ] ಹೊಂಗೆಮಾನ ೧ ದೇವರ ನಂದಾದೀವಿಗೆಗೆ ಗಾಣ ೧ ಮೇಲಾದ ಗಾಣಂಗ.
36 ಳಲು ಎಣ್ಣೆ ಸೊಟಗೆ ೧ ಹೊಂಗೆಮಾಱದಲ್ಲಿ ಅಡಕೆ-೫ ಎಲೆ ಹೇಱಂಗೆ ೫೦ ದೇ
37 ವರ ಕಾಣಿಕೆ-ಹಗರಿಬಗೆ ಮೂನೂಱಱೊಳಗೆ ಊರೂರಲು ಗದ್ಯಾಣ.
38 ೧ ಇನ್ತಿನಿತಕ್ಕಂ ವೀರದಾಸನವಂಶ ವೈಜವ್ವೆ ಬಾಗೆಯನಾಯಕದೇವರ್ಗಂ.
39 [ಭ] ಕ್ತರ್ಗ್ಗಂ ಅಂಜಿ ಬೆಸಕೆಯ್ವರು ಆ ಮಠದ ಹೆಗ್ಗಡೆ ಸಂಕಯ್ಯಂಗೆ ದೇವ.
40 ಕೆಯ್ಯೊಳಗೆ ಮತ್ತರುಂ ೧೦ ಪೌಳಿಯೊಳಗೆ ನೀಳಹಸ್ತ ೧೨ ಅ.
41 ಗಲಹಸ್ತ ೫ಟ ನಿವೇಶಣ ೧ ಕಾಣಿಕೆಯೊಳಗೆ ಊರು ೨ ಎ
42 ನ್ತೆನ್ತು ದೇವರಿಗೆ ವ್ರಿತ್ತಿ ಘನವಾಗಲನ್ತ [ನ್ತೆ] ದಶವಂದ ಸಂಕಯ್ಯಂಗೆ.
43 ಚಾವಿಸೆಟ್ಟಿಗೆ ಮತ್ತರು ೫.

[ ೩ ]

ಇಂಗಳಗಿಯ ಶಾಸನ ಕ್ರಿ. ಶ. ೧೨೪೦, ಸಪ್ಟಂಬರ ೧೪ ಸೋಮವಾರ. (ಶರಣ ಸಾಹಿತ್ಯದಲ್ಲಿ ಪ್ರಕಟವಾಗಿದೆ. ಸಂಪುಟ ೨೧, ಸಂ. ೧: ಪುಟ ೨೯-೩೫)

## ಮೂಲಶಾಸನ ಪಾಠ

1 ಶ್ರೀ ಓಂ ನಮಃ ಶಿವಾಯ ‖ ನಮಸ್ತುಂಗ ಶಿರಶ್ಚುಂಬಿ
2 ಚಂದ್ರಚಾಮರ ಚಾರವೇ ತ್ರೈಲೋಕ್ಯನಗರಾರಂಭ ಮೂ
3 ಲಸ್ತಂಭಾಯ ಶಂಭವೇ ‖ ಸ್ವಸ್ತಿ ಸಮಸ್ತ ಭುವನಾಶ್ರಯಂ
4 ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರಂ ಪ್ರ
5 ತಾಪ ಚಕ್ರವರ್ತಿ ತ್ರಿಭುವನಮಲ್ಲ ಸಿಂಗಣದೇವರ ವಿಜ
6 ಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವೃದ್ಧಮಾನಮಾ
7 ಚಂದ್ರಾರ್ಕ ತಾರಂಬರಂ ಸಲುತ್ತಮಿರೆ ದೇವಗಿರಿಯ
8 ನೆಲವೀಡಿನೊಳ್ ಸುಖಸಂಕಥಾವಿನೋದದಿಂ ರಾಜ್ಯಂ
9 ಗೆಯ್ಯುತಮಿರೆ ಶ್ರೀಮನ್ಮಹಾಪ್ರಧಾನಂ ಯಾದ
10 ವರಾಜ್ಯಸಮುದ್ಧರಣಂ ಸೇವುಣರಾಯ ಶ್ರೀ
11 ಸಿಂಗಣದೇವರ ದಕ್ಷದಕ್ಷಿಣ ಭುಜಾದಂಡ ನಾ
12 ಯಕ ನಾರಾಯಣಂ ಲಕ್ಷ್ಮೀದೇವ ದಂಡನಾಯಕರು
13 ಅನೇಕ ದೇಶಾದೇಶಂಗಟಿಂ ಆಳುತ್ತ ಸಕಳ ಧರ್ಮಾಧರ್ಮಂ
14 ಗಳಂ ಪ್ರತಿಪಾಳಿಸುತ್ತಮಿರೆ ‖ ಸ್ವಸ್ತಿ ಸಮಧಿಗ
15 ತ ಪಂಚಮಹಾಸಬ್ದ ಮಹಾಮಂಡಳೇಶ್ವರಂ ಮಾಹಿಶ್ಮತೀ
16 ಪುರವರಾಧೀಶ್ವರಂ ಅಹಿಹೇಯ ವಂಶೋದ್ಭವಂ
17 ವಿವೇಕವನಜೋದ್ಭವಂ ದಾಯಿಗ ಗಿರಿವಜ್ರದಂಡ ನರ
18 ಸಂಕಸೂನೆಗಾಟಿ ದಳದಂಕಕಾಟಿ ವೈರಿಮಂಡಮಿಕಗಂಡ ಗೊ
19 ಪಾಟಿ ಶ್ರೀಲೋಕನಾಥದೇವರ ದಿಬ್ಯ ಶ್ರೀಪಾದಾರಾಧಕ
20 ನುಂ ಮಹಾಮಂಡಳೇಶ್ವರಂ ಆನೆಗ ದೇವಪ್ರಿಯ ಪುತ್ರನುಂ
21 ಗಂಡಭೂರಿಸ್ರವನುಮಪ್ಪ ಬಿಜ್ಜರಸರು ಮಾಡಿದ ಧರ್ಮ್ಮ
22 ವಂ ಸಮಸ್ತಲೋಕಾಲೋಕ ಚಕ್ರವರ್ತಿಯುಂ ಸಾಸ್ವತ
23 ಯೈಶ್ವರ್ಯಮೂರ್ತಿಯುಮಪ್ಪ ಮಹಾಲಿಂಗ
24 ದೇವರ ವುರಿಗಂಣ್ಣ ಜ್ವಾಳೆಯಿಂದುದಯಿ
25 ಸಿದ ಮಹಾವೀರ ಗಣಂಗಟಿ ಸಂಖ್ಯಾತರ ಮಹಿಮೆ
26 ಯೆಂತೆಂದೊಡೆ ‖ ಕಂದ ‖ ಕರಕರನುಂ ಸೆಂಡಾಡುವರು
27 ರಗಪನಂ ಕೀಟಲಿಟ್ಟು ಬಿಟ್ಟಕ್ಕುವರಾ | ಗಿರಿಕುಟಿಮಂ ಕಿತ್ತಿತ್ತುವ

28 ರುರಿಯೊಟಿ ಪರಿಮಜಿನಾಡುಲಿರ್ಪರು ಸರಣ
29 ರು || ಸ್ವಸ್ತಿ ಶ್ರೀ ಸಕವರುಶದ ೧೧೩೧ನೆ
30 ಯ ಸುಕ್ಲ ಸಂವತ್ಸರದ ಆಶ್ವಯಿಜ ಸುದ್ದತ್ರ
31 ಯೋಧಸಿ ಸೋಮವಾರದನ್ದು ಶ್ರೀಮನ್ಮಹಾ
32 ಮಂಡಳೀಶ್ವರಂ ಬಿಜ್ಜರಸರು ಆಜಿಲು ಮುಂನ್ನೂಱರ ಬ
33 ಳಿಯ ಬಾಡ ಯಿಂಗುಳಿಗೆಯ ಪ್ರಭು ನಾಗರಸ ಹೆಗ್ಗಡೆ
34 ಬಸವಯ್ಯನಲ್ಲಿಯ ಪಂಚಮಠಯಿಂತಿವರೇಕಸ್ತರಾಗಿ ಶ್ರ (ಶ್ರೀ)
35 ಮೂಲಸ್ತಾನದೇವರ ಪಾದಾರಾಧಕಿಯುಮಪ್ಪ ಕ್ಷೇತ್ರ ಸಂನ್ಯಾ
36 ಸಿ ಮಹಾನುಭಾವೆಯುಮಪ್ಪ ಬಲಗವ್ವೆಗಳ ಕಾಲಂ ತೊ
37 ಳದು ಧಾರಾಪೂರ್ಬಕಂ ಮಾಡಿ ಶ್ರೀ ಸಿದ್ಧರಾಮನಾಥ
38 ದೇವರ್ಗಂ ದಸಗಣ ಸಿಂಗಿದೇವ ಬಿಜ್ಜೇಶ್ವರ ದೇವರು
39 ರೇವಣೇಶ್ವರ ಕಂನೇಶ್ವರ ಕೇದಾರ ದೇವರು ನಾಗೇಶ್ವರ ಯಿಂ
40 ತೀ ಸಕಳಲಿಂಗದೇವರಿಗೆ ಶ್ರೀ ಗುಡ್ಡವ್ವೆಗಟಿ ಮುಖ್ಯ
41 ವಾಗಿ ಗಣಮಠಕ್ಕೆ ಕೊಟ್ಟ ವ್ರಿತ್ತಿ ಮನೆಯ ನಿವೇಶಣ
42 ನಾಲ್ಕು ಮೂಡಣಪೊಲದಲು ಹಿರಿಯಕಾಲಮತ್ತರು ೨
43 ಬಡಗಣ ಹೊಲದಲು ಹಜಿಕಾಱರಿಗೆ ಕಾಲಡಿಯ ಮತ್ತರು ೪
44 ಬಡಗಲು ಕೋಟೆಯ ಕೆಟಗೆ ಹೂದೋಟಮತ್ತರು ೧ ದೀವಿಗೆಗೆ
45 ಸರ್ಬ್ಬನಮಸ್ಯಗಾಣ ೧ ವೂರೊಳಗಣ ಗಾಣದಲು ಗಾಣ
46 ಯಿಲೆ ಸೋಳಸ ೧ ದೇವಗೊವಿಗರಾಸಿಯಲು ಕೊಳಗ ೧
47 ಯೆಲೆಯ ಹೇಱಿನ ಸುಂಕ ಹಡಪಗಟ್ಟೊಳಗಾಗಿ ದೇವರಿಗೆ ಸ
48 ಲಿಸುವರು || ತೊನಸೆಹಳ್ಳಿಯಲು ವೂರಮುಂದೆ ಗುಂ
49 ಡ ಬೋವನು ಗಣಮಠಕ್ಕೆ ಕೊಟ್ಟ ಭೂಮಿ ತರಲಹಳ್ಳಿಯ
50 ಕಾಚವ್ವೆ ದೋರಗೌಡ ಮುಖ್ಯವಾಗಿ ಧಾರಾಪೂರ್ಬ್ಬಕಂ
51 ಮಾಡಿಬಿಟ್ಟ ಕಾಲಡಿಯ ಮತ್ತರು ನಾಲ್ಕು ಹಂನಿಕ್ಕ
52 ಯ್ಯ ನಿವೇಶಣ ೧ ಯಿಂತೀಧರ್ಮ್ಮಕ್ಕೆ ರೇಚಿಲವೆಗಟಿ ಮಂಮ ದೇವಯ್ಯ
53 ಗೆಯಸಂಖ್ಯಾತರು ಕೂರ್ತು ತೊತ್ತುಗೆಲಸವಂ ಬೆಸ
54 ಸಿಕೊಟ್ಟು ಸೀರೆ ಸಟ್ಟಾವಂ ಕಟ್ಟಿ ಆಚಂದಾರ್ಕ ತಾರಂಬರಂ
55 ಕಾರುಣ್ಯಂಗೆಯ್ದು ಸ್ಥಿರಂಜೀವಿಯೆಂದು ಮಾಡಿದ ಮಂ
56 ಗವಿಮಹಾಶ್ರೀ || ಯೀ ಧರ್ಮ್ಮಮಂ ಪ್ರತಿಪಾಮಿಸಿದವ
57 ರು ಗಣಂಗಮಿ ಕೂರ್ಪರು ಯೀಧರ್ಮಕ್ಕೆ ಪ್ರತಿ
58 ಕೂಲರಾದವರು ಶಿವದ್ರೋಹರು ಗಣಂಗಮಿ ಮುನಿವರು
59 ಕುವಿಕುರಡಿಯ ಪ್ರಿಯನಾಗರಸ ಬರೆದ ಶಾಸನ

[ ೩ ]

ವಿಜಾಪುರದ ಶಾಸನ : ನಂ. 21a

Archaeolgical Museum Bijapur A-18

(ಪ್ರೊ. ಕೆ. ಜಿ. ಕುಂದಣಗಾರ ಅವರ ಪುಸ್ತಕದಿಂದ ಎತ್ತಿಕೊಳ್ಳಲಾಗಿದೆ. ಪು. ೯೭-೯೮)

ಶಾಸನದ ಕಾಲ ಕ್ರಿ. ಶ. 1278; ಸೋಮವಾರ, ಮೇ ೮ನೆಯ ತಾರೀಖು

## ಮೂಲಶಾಸನ ಪಾಠ

[ಸಂಬಂಧಿಸಿದ ಭಾಗವು ೨೬ನೆಯ ಚರಣದಿಂದ ಪ್ರಾರಂಭವಾಗಿದೆ.]

25 .... .... .... .... .... .... .... .... .... .... ಸ್ಥ

26 ಳವಂ ಕ್ರಯಗೊಂಡು ಯಾ ಸ್ಥಳ........|| ಸ್ವಸ್ತಿ ಶ್ರೀಸಕ ೧೨೦೦

27 ನೆಯ ಬಹುಧಾಂನ್ಯ ಸಂವತ್ಸರದ ವೈಸಾಖ ಸು. ೧೫ ಯಾದಿವಾರದ

28 ಲು ಶ್ರೀ ತೇಜೇಶ್ವರ ಶ್ರೀವರದಾನಿ ಶ್ರೀಪುರುಸೇಶ್ವರ ದೇವರ

29 ಪ್ರತಿಷ್ಠೆಯಂ ಮಾಡಿ ಪುರವಂ ರಚಿಯಿಸಿಯಾದೇವರುಗಳ ಲಿಂಗಭೋಗರಂಗ

30 ಭೋಗಕ್ಕೆ ಶ್ರೀಮಂಡಳಿಕ ಮಹಾದೇವರಾಣೆಯರು ಕೊಂಡಿಱಿನಗ.... .... ದಲ್ಲಿ ಕೊಟ್ಟ ಭೂಮಿಯ ವಿವರ ನಾಲ್ವತ್ತುಂ ಬಾಡಲ್ಲಿಯಾಲೂರ

31 ಬಟ್ಟೆಯಿಂ ಬಡಗಲು ಜೋವಿಸಗೆಯ್ಯಿಂ ಮೂಡಲು ಮತ್ತರುಮೂಱು ಕೆಱಿ ಯೊಳಗಣ ಪಡುವಣ ಕೆಱಿಯೊಳಗೆ ಹೂದೋಟ ಮ

32 ತ್ತ ೪ ಬೊಂಬಳ್ಳದಿಂ ತೆಂಕಲು ಕರುಸಗೆಯಿವೆಂ .... .... ಹರ.... .... ಮತ್ತ.... ....ಹೇಱುವ ಸಾಸನದೆತ್ತು ೨೫ ಹೇರಿಗೆ ಭತ್ತ ಸೊ ೧ ಹೇಱಿಂಗೆಲೆ ೫೦

33 ಹೊ.... .... ಗೊ ಹಿಡಿವಾದುರಗಾಣಂ ಪ್ರತಿಪಳಿಗೆ ಯೆಂಣ್ಣೆ ಸಂಥೆಯಲು ವುಪ್ಪಿನಕರ ಹೆಡಗೆಗೊ ಸೆರೆವುಪ್ಪು ಪುರದೊಳಗ್ಯು ಮಾಱಿತಕ್ಕೆ

34 ಅಡ್ಡಾಯ ಪುರದೊಳಗೆ ಮಾಂನ್ಯದ ಗಾಣ ೨ ಪುರದೊಳಗಣ.... .... ರುಕ ಮಗ್ಗಱಿದೆ ಸರ್ವ್ವಮಾಂನ್ಯದೇವಿಯ ಕಂಮತದ ಭತ್ಥ

35 ದೇವಥನಮಾಱಿದಡಂ ಯಾಯಮಾನ್ಯ ದೇವಿಯ ಹಬ್ಬದೊಳಗೆ ಯೇನು ಮಾಱಿದ ವಸ್ತುವಿಗೆ ಯಾಯ ಸುಂಕವಿಲ್ಲ ಪುರದೊಳಗೆ ಅ

36 ನ್ಯಾಯ ನಿಪುತ್ರಿಕವಿಲ್ಲ ನಾಡಿಂಗೆವು ಪಟ್ಟಣಕ್ಕೆವು ಆಸತು ಅಕಾಂತುಕಯೇನು ಹುಟ್ಟಿದೊಡೆಪು ಅರಸು (ಮಂನೆಯ) ಅಗ್ರಾಹಿ

37 ತರು ಪಟ್ಟಣದ ಹಲರೂ ಸರ್ವಬಾಧೆ ಪರಿಹಾರವಾಗಿ ಪುರವ
ಪಾಳಿಸುವರು ॥ ಋಟ್ಟಗೆರೆಯಲು ವೂರಿಂ ಪಡುವಲು ಮತ್ತರು ಲಂ ಕಾರಕು
ವದಲು ಮತ್ತ ೭ ಯಾಲೂರಲು ಮತ್ತ ೪ ಹಳ್ಳದ ಬಳಿಯಲು ಹೂದೋಂಟ
ಮತ್ತ ೧ ಗೌಡಗೆರೆಯಲು ಮ

38 ತ್ತ ೧೨ ತಂಬಿದಡಿಯಲು ಮತ್ತ ೧೬ ಕೂಟಜಿಯಲು ಮತ್ತ....
ದೇಹೂರಲಿ ಮತ್ತ ೪

[ ೪ ]

ವಿಜಾಪುರ ಶಾಸನ : 21 b.

Archeological Museum Bijapur A-18.

ಪ್ರೊ. ಕೆ. ಜಿ. ಕುಂದಣಗಾರ ಅವರ ಪುಸ್ತಕದಿಂದ ಎತ್ತಿಕೊಳ್ಳಲಾಗಿದೆ.
ಶಾಸನದ ಕಾಲ ಕ್ರಿ. ಶ. 1218ನೆಯ ಸೋಮವಾರ, ಮೇ ೮ನೆಯ ತಾರೀಖು.

## ಮೂಲಶಾಸನ ಪಾಠ (ಶಾಸನದ ಒಂದು ಬದಿಯಲ್ಲಿ)

1 ದೇಬ್ಯಾ ಪೂಜಾಮಹಾನಹ ಕ್ಷೇತ್ರ
2 ವಾಸಿಯ ಚಿಹ್ನಗಳೆಂತೆಂದಡೆ ॥ ಅ
3 ...........ಸತ್ಯವಾದಿಂ ಚ ಬ್ರಹ್ಮಚಾರೀ ದ್ರಿಢವ್ರಿ [ ವ ]
4 ತಃ ಸಿವಭಕ್ತಃ ಕ್ಷಮಾಯುಕ್ತಃ ಕ್ಷೇತ್ರವಾಸೀ
5 ಸಮುರ್ಚ್ಯತೇ ॥ ಪ್ರಾತಃ ಸ್ನಾಯೀ ನಕ್ತಭೋಜಿ ಸಪೂ
6 ಜಾ ಮಹಾಸ್ತಪೋಂನ್ವಿತಃ ಯೇ ತದ್ಗುಣಯ [ ಕ್ತೈಃ ]
7 ಹೀನಸ್ತು ಪೂಜಕೋಪಿ ನಚಾರ್ಹತಿ ॥ ಯಿಂ
8 ತಹ ಕ್ಷೇತ್ರವಾಸಿ ದೇವಿಯ ತ್ರಿಕಾಲಪೂಜೆ
9 ಯ ಮಾಡಿಕೊಂಡಿಹನು ಆತಂಗೆ ಅಸ
10 ನಾಚ್ಛಾಧ್ಯದನವ ನಡಸಿ ವರುಸಂಪ್ರತಿ–ದೇವಿ
11 ಯ ಭಂಡಾರದಲ್ಲಿ । ಹೊಂನನು ಕೊಂ
12 ಡಿಹನು ಮೂವತ್ತುಗೇಣು ಬಾಚಿ ವಿಡಿಯ
13 ............ದಾನಚಿಂತಾಮಣಿ ಘಳೆಯೆನಿಸುವ
14 ಆ ಘಳೆಯಲು ಗುಡ್ಡಾದೇವಿಯ ಭೂಮಿಯೊ
15 ಳಗೆ ರಟ್ಟಗೆರೆಯಲು ಯಿಬ್ಬರು ಪೂಜಾರಿಯ
16 ರಿಗೆ ಮತ್ತ ೧೦ ವೃತ್ತನುದ ಮುದ್ದಳಿಗಂಗೆ ಮತ್ತ ೭ ಮಧ್ಯ
17 ............ದ ಮದ್ದಳಿಗಂಗೆ ಮತ್ತ ೪ ಪುರದ ತಳಾಚಿತ
18 ............ಡೆಯೆರೆಡುಳಿನಲು ನಡವದಕ್ಕೆ ಕೊಟ್ಟ ಮತ್ತ ೫

19 ಆತಂಗೆ ಪುರದ ವೈದಿಗೊಳರ ಕೊ........ವೆನೆದೆರು
20 ಪ್ರಜೆಯ ಕಯ್ಯಲು........ವಂಗೆ ಮ.೨ ಲ್ಯಕ್ಕದಲು ಯೆ
21 ತ್ತಿಕೊಂಬನು. ಕಯಿನಾರೆಯ ಮದುವೆಗೆ ಮ. ೧೦
22 ಹಾಲುಕುಳಿಂಗೆ ಮ.೪೦ ದೇವಿಯ ಪ್ರಸಾದ
23 ಪ್ರಾತಃ ಕಾಲಿನದು ಗಣಮಠಕ್ಕೆ ಮಧ್ಯಾಹ್ನ ಕಾಲಿ
24 ನದು ಪೂಜಾರಿಗಳಿಗೆ ಸಾಯಂಕಾಲಿನದು
25 ಕ್ಷೇತ್ರವಾಸಿಗೆ ಲಿಂಗಪ್ರಸಾದುಂನತಂ ತಾ
26 ........ಲಂಗೆ ಆತಂಗೆ ದೇವಿಯ ಭಂಡಾರದಲ್ಲಿ
27 ಯ ಸಂಪ್ರತಿ ೧ಚ್ಛತ್ರಕ್ಕೆ ಕಾಲಕುರು
28 ವದಲ್ಲಿ ಕೊಂಡಿರುವನ ಮತ್ತ ೬ ತಂಬದಡಿ
29 ಯಲು ಮತ್ತು ೧೬ ಅಂತು ಬ್ರಾಹ್ಮಣ ಭೋಜನಕ್ಕೆ
30 ಮತ್ತ ೨೨ ಜೋವಿಸ ಗೋವಿಂದ ದೇವಂಗೆ ಆಲೂ
31 ರಲ್ಲಿ ಕೊಂಡಿರುವನ ಮತ್ತ ೪

## ಅನುಬಂಧ ೨

### ಗುಡ್ಡಮ್ಮನನ್ನು ಕುರಿತು ಬರೆದ ಹಾಡುಗಳು

[ ೧ ]

ಪೂಜೆಯ ಮಾಡುವೆನು ದಾನಮ್ಮ ದೇವಿಗೆ ಪೂಜೆಯ ಮಾಡುವೆನು
ಪೂಜೆಯ ಮಾಡುವೆ ಮೂಜಗದೊಡತಿಗೆ ಪೂಜೆಯ ಮಾಡುವೆನು ||ಪಲ್ಲ||

ಮೊದಲು ಮಜ್ಜನವ ಮಾಡಿ ಈ ತಾಯಿಗೆ ಅಭಿಷೇಕವನ್ನು ಮಾಡಿ
ಭಸಿತಗಂಧವನು ತೀಡಿ ಮಿಸುಪ ಪತ್ರಿಯ ಧರಿಸಿ || ೧ ||

ಮಡಿಪೀತಾಂಬರ ಉಡಿಸಿ ಈ ತಾಯಿಗಿ ವಡವೆವಸ್ತುಗಳಿಡಿಸಿ
ಹಣೆಗೆ ಕುಂಕುಮ ಧರಿಸಿ ಮೆರಗು ಅಕ್ಷತೆ ಧರಿಸಿ || ೨ ||

ಪರಿಪರಿ ಪುಷ್ಪವ ತಂದು ಈ ತಾಯಿಗೆ ದಂಡಿ ಕಟ್ಟುವೆ ಚಂದ
ಐದುಮುತ್ತೈದೇರು ಬಂದು ಶಾಸದಕ್ಕಿ ಹೊಯ್ದು || ೩ ||

ಕರ್ಪುರ ಗುಗ್ಗುಳ ತಂದು ಈ ತಾಯಿಗೆ ಮಂಗಳಾರುತಿ ಅಂದು
ಭಕ್ತರೆಲ್ಲರು ಬಂದು ಗುಡ್ಡಾಪುರವಾಸ ಶ್ರೀ ಮಲ್ಲಿಕಾರ್ಜುನ ಕೋಶ
ಭಕ್ತನೀ ಅಡಿಗಲ್ಲೀಶ ತಾಯಿಮುಂದ ಬಸವೇಶ || ೪ ||

—ಪೂಜೆಯ ಮಾಡುವೆನು

[ ೨ ]

ಬೆಳಗುವೆನಾರತಿ ಗುರುಸೋಮಲಿಂಗನ ಸತಿ
ಪಾರ್ವತಿದೇವಿಗೆ ಬೆಳಗುವೆನಾರತಿ ||ಪಲ್ಲ||
ಮೂರುಬೆಳಗು ಪೂಜೆಯಾಗುವುದು ಸ್ನಾನ ಮಾಡಿಸೊ
ವಿಭೂತಿಧರಿಸಿ ಪತಲುಡಿಸುವರು ಕೊರಳೊಳು ರುದ್ರಾಕ್ಷಿ
ಧರಿಸುವರು ಗಂಧ ಕುಂಕುಮವ ಬೊಟ್ಟಿಟ್ಟು ದಂಡೆ ಕಟ್ಟುವರೆ || ೧ ||

ನಿತ್ಯಭಕ್ತರು ಬರುವರೆ ನಿನ್ನೆಡೆಗೆ ದೇವಿ ಚರಣಕಮಲಕೆರಗಿ
ಶರಣುಮಾಡುವರೆ ಸೆರಗೊಡ್ಡಿ ಬೇಡಿಕೊಂಬುವರೆ
ಬಂದ ಕಂಟಕ ಪರಿಹಾರ ಮಾಡು ಎಂಬುವರೆ || ೨ ||

ಕರ್ಪುರ ಗುಗ್ಗುಳ ತರುವರೆ ಮಂಗಳಾರುತಿ ಮಾಡುವರೆ
ಜೋಡು ತೆಂಗು ಬಡಿಯಣ ತಂದು ಮುಂದೆ ಒಡ್ಡುವರೆ ಬಂದ ಭಕ್ತರು
ನೈವೇದ್ಯ ದೇವಿಗೆ ಸಲಿಸುವರೆ || ೩ ||

ಸಂಗತೀರ್ಥೆಂಬುದು ಮಹಾತೀರ್ಥ ಗುರುಮಲ್ಲಿಕಾರ್ಜುನಯ್ಯ
ಈಶ್ವರನಾಕಾರಾ ಪಲ್ಲಕ್ಕಿ ಉತ್ಸವ ಸೋಮವಾರ
ಭಕ್ತ ಅಡಿಗಲ್ಲಪ್ಪ ಕುಂತಾನ ತಾಯಿ ಎದುರಾ || ೪ ||

[ ೩ ]

ಆರುತಿ ಬೆಳಗೋಣ ಬಾ ಆದಿಶಕ್ತಿಗೆ
ಆರುತಿ ಬೆಳಗೋಣ ಬಾ ಮಂಗಳ ಪಾಡೋಣ ಬಾ
ಗುರುಸೋಮನಾಥನ ಸತಿ ಶರಣೆಗೆ
ದಾನಮ್ಮ ತಾಯೀಗೆ ಆರೂತಿ ಬೆಳಗೋಣ ಬಾ ||ಪಲ್ಲ||

ಸುರಲೋಕವನು ಬಿಟ್ಟು ಶರಣೆರೂಪವ ತೊಟ್ಟು
ಗುರುಸಂಗಮೇಶನ ಶ್ರೀಚರಣ ನಂಬಿಕೊಂಡು
ಶ್ರೀಕ್ಷೇತ್ರ ಗುಡ್ಡಾಪುರದಿ ನೆಲೆಸಿದ
ತಾಯಿಗೆ ಆರುತಿ ಬೆಳಗೋಣ ಬಾ || ೧ ||

ಧರಣಿಗೆ ತಾ ಬಂದು ವೀರಶೈವಮತವಾದಿಗಳ
ಹೊಂದಿ ಹರಸುರ ಮುನಿಗಳ ಹೊಂದಿ ಹರಣವ ಉಳುಹಿದ
ಕಾಮಧ್ವಂಸನ ಪಟ್ಟದರಾಣಿ ದಾನಮ್ಮ ತಾಯಿಗೆ
ಆರುತಿ ಬೆಳಗೋಣ ಬಾ || ೨ ||

ಆರುಗುಣಗಳನಳಿದು ಮಿಗಿಲಾದ ಮೂರು
ಮೂರು ಗುಣಗಳಕಳದು ಆರುಮೂರೊಂಬತ್ತು
ತಾ ಅಳಿದು ಪರಮ ಪಂಚಾಕ್ಷರಿ ಮಂತ್ರ
ಮಹತಿಯ ತಿಳುಹಿದ ದೇವಿಗೆ | ಆರತಿ ಬೆಳಗೋಣ ಬಾ ॥ ೩ ॥

ಧರಣಿಯೊಳು ತೆಲಸಂಗ ಶರಣೆಯ ಭಕ್ತರು ಬಹುಸಂಗ
ಭಕ್ತರಮೇಲೆ ಕೃಪೆಯನು ವರಮುಕ್ತಿ ವರವನು ಬೇಡುವೆ
ಪ್ರೇಮದಿಂದ ಆರುತಿ ಬೆಳಗೋಣ ಬಾ ॥ ೪ ॥

[ ೪ ]

ಬೆಳಗುವೆನಾರುತಿಯ ದಾನಮ್ಮದೇವಿಗೆ
ದಾನಮ್ಮ ದೇವಿಗೆ ಸೋಮೇಶನ ಸತಿಯಳಿಗೆ
ಪ್ರೇಮದಿಂದಲಿ ನಾವು ನಿಮ್ಮೆಲ್ಲರೊಡಗೂಡಿ
—ಬೆಳಗುವೆನಾರುತಿಯ ॥ ೧ ॥

ಉಮರಾಣಿಯಲ್ಲಿ ಜನಿಸಿ ಬಾಲಲೀಲೆಯ ಮಾಡಿ
ದಂಪತಿಗಳಿಂದು ಅನಂತರಾಯ ಶಿರಸಮ್ಮ ಹೆಸರಿಟುಕೊಂಡ
ಲಿಂಗಮ್ಮಗೆ ಬೆಳಗುವೆನಾರುತಿಯ ॥ ೨ ॥

ಉಮರಾಣಿಯನು ಬಿಟ್ಟು ಕಪ್ಪಡಿಸಂಗಮಕ್ಹೋಗಿ
ಸಂಗಮನ ಕೂಡಿಕೊಂಡು ದೇಶಸಂಚಾರ ಹೊರಟ
ಮಾದೇವಿಗೆ ಬೆಳಗುವೆನಾರುತಿಯ ॥ ೩ ॥

ಕಪ್ಪಡಿಸಂಗಮಬಿಟ್ಟು ಬಾಗೆವಾಡಿಗೆ ಹೋಗಿ
ಕಲ್ಲಬಸವಗ ಕಬ್ಬ ಮೆಲಿಸಿದ ದೇವಿ
ದಾನಮ್ಮಗ ಬೆಳಗುವೆನಾರುತಿಯ ॥ ೪ ॥

ಬಾಗೆವಾಡಿಯ ಬಿಟ್ಟು ಕಲ್ಯಾಣಪಟ್ಟಣಕ್ಹೋಗಿ
ಬಸವನ ಬಾಳಿಯ ಬನದಲಿ ಜಂಗಮರಿಗೆ ದಾಸೋಹ ಮಾಡಿದ
ದೇವಿ ದಾನಮ್ಮಗೆ ಬೆಳಗುವೆನಾರುತಿಯ ॥ ೫ ॥

ದಾನಧರ್ಮವ ಮಾಡಿ ಜ್ಞಾನಮಾರ್ಗವ ಹಿಡಿದ
ದಾನದ ಮಹಿಮೆಯಿಂದ ಹೆಸರು ಪಡೆದ
ದಾನಮ್ಮ ದೇವಿಗೆ ಬೆಳಗುವೆನಾರುತಿಯ ॥ ೬ ॥

ಕಲ್ಯಾಣಪುರ ಬಿಟ್ಟು ಸಂಗತೀರ್ಥದಿ ಬಂದು
ತಾಯಿತಂದೆಗೆ ದರುಶನ ಕೊಟ್ಟು ಗುಡ್ಡಾಪುರ ಕ್ಷೇತ್ರಕೆ
ಬಂದ ದೇವಿಗೆ ಬೆಳಗುವೆನಾರುತಿಯ ॥ ೭ ॥

[ ೫ ]

ಅತ್ತ ಇತ್ತ ತಿರುಗುವುದ್ಯಾಕ ಮುತ್ತಿನಂಥ ಮನಸಿರಬೇಕು
ಸತ್ಯವಂತೆ ದಾನಮ್ಮನನ್ನು ನಿತ್ಯದಲ್ಲಿ ನೆನೆಯಬೇಕು ‖ ೧ ‖

ಉಮರಾಣಿ ಗ್ರಾಮದಲ್ಲಿ ಸತ್ಯವಂತ ಶರಣರಲ್ಲಿ
ಹುಟ್ಟಿದಂಥ ಮಹಾತಾಯಿಯನ್ನು ನಿತ್ಯದಲ್ಲಿ ನೆನೆಯಬೇಕು ‖ ೨ ‖

ಅಂಗೈಯಲ್ಲಿ ಲಿಂಗವಹಿಡಿದು ಲಿಂಗವಂತ ಧರ್ಮವ ಬೆಳಸುವ
ಮಹಾತಾಯಿ ದಾನಮ್ಮನ ಸೇವೆ ನಿತ್ಯದಲ್ಲಿ ಮಾಡಬೇಕು ‖ ೩ ‖

ಕುರುಡರು ಕುಂಟರು ಬಂಜೆಗೆ ಫಲವ ಕೊಡುವ
ಮಹಾದೇವಿ ದಾನಮ್ಮನನ್ನು ನಿತ್ಯದಲ್ಲಿ ನೆನೆಯಬೇಕು ‖ ೪ ‖

ಭಕ್ತರ ಬಾನವನು ನಿತ್ಯದಲಿ ಸೇವಿಸುತ
ಬೇಡಿದವರಗಳ ಕೊಡುವಂಥ ತಾಯಿಯನ್ನು ನಿತ್ಯದಲ್ಲಿ ನೆನೆಯಬೇಕು ‖ ೫ ‖

ನಾಡಿನೊಳಗೆಲ್ಲ ಕಡಿಗಿ ಅಂಬಲಿಯನುಂಡು
ಅಡಿಗಡಿಗೆ ನೆನೆದರ ಓಡುವು ಸಂಕಟ–ನಿತ್ಯದಲ್ಲಿ ನೆನೆಯಬೇಕು ‖ ೬ ‖

ಕನ್ನಡ ರಾಜ್ಯದ ಹುಬ್ಬಳ್ಳಿ ಶಹರದೊಳಿರುವ
ದಾನಯ್ನ ಮನಸಿಗೆ ಬಂದ ಮಹಾತಾಯಿ ದಾನಮ್ಮನ–
ನಿತ್ಯದಲ್ಲಿ ನೆನೆಯಬೇಕು ‖ ೭ ‖

[ ೬ ]

ಗುಡ್ಡಾಪೂರ ದಾನಮ್ಮ ದೇವಿಯ ನೋಡಮ್ಮ
ದೇವಿಯ ಮುಂದೆ ಭಕ್ತಿಯನ್ನು ಬೆಳಗಮ್ಮ ‖ಪಲ್ಲ‖

ಮೂರುಹೊತ್ತಿನ ಪೂಜೆಯು ನಿನ್ನದು
ಮುಡಿಯ ಮಲ್ಲಿಗೆ ಧರಿಸುವುದೆನ್ನದು
ಜಪಮಣಿ ರುದ್ರಾಕ್ಷಿ ಧರಿಸುವ ತಾಯಿಗೆ ಜ್ಯೋತಿಯ ಬೆಳಗಮ್ಮ ‖ ೧ ‖

ನಿನ್ನಯ ಸೇವೆಯು ಎನಗಿರಲಿ
ಎನ್ನ ಕಾಯುವ ಹೊಣೆ ನಿನ್ನದಾಗಿರಲಿ
ಬೇಡಿದವರಗಳ ನೀಡುವ ತಾಯಿಗೆ ಜ್ಯೋತಿಯ ಬೆಳಗಮ್ಮ ‖ ೨ ‖

ದೇವಿಯ ಮುಂದೆ ಅಡಿಗಲ್ಲಪ್ಪ ಭಕ್ತ
ಅಲ್ಲಿರುವುದು ಮಹಾಸಂಕತೀರ್ಥ
ಬದಿಯಲ್ಲಿರುವ ಲಿಂಗನಾಥಗೆ ಜ್ಯೋತಿಯ ಬೆಳಗಮ್ಮ ‖ ೩ ‖

[ ೭ ]

ಎನ್ನ ಪಾಲಿಸು ದಾನಮ್ಮ ತಾಯಿ
ಎನ್ನ ಪಾಲಿಸು ||ಪಲ್ಲ||

ಸಾಲು ನಂದದ ದೀಪ ನಡುವೆ ನಿನ್ನಯ ರೂಪ
ಮಾಡಿದಿ ಪ್ರತಾಪಾ ತೋರು ನಿನ್ನಯ ರೂಪ || ೧ ||

ಸುತ್ತಮುತ್ತ ತೋಟ ನಡುವೆ ನಿನ್ನಯ ಪೀಠ
ಮಾಡಿದಿ ಚಲ್ಲಾಟ ತೋರಿಸು ನಿನ್ನ ಆಟ || ೨ ||

ದಾನಮದೇವಿಯ ನೋಡಿಬರೋಣ ನಡಿ
ನಾನು ನೀನು ಜೋಡಿ ವರಗಳ ಬೆಡಿ || ೩ ||

ಶಿರದಮೇಲಿನ ದಂಡೆ ತೆಗೆದುಕೊಡುವ್ರುದು ಕಂಡೆ
ದೇವಿಯ ದರ್ಶನ ಮಾಡಿ ಧನ್ಯಳಾದೆನು ನೋಡಿ || ೪ ||

ಅಲ್ಲಿ ಸಂಕತೀರ್ಥ ಸೋಮಲಿಂಗನಾಥ
ಅಡಿಗಲ್ಲಪ್ಪ ಭಕ್ತ ಗುಡ್ಡಾಪುರ ಕ್ಷೇತ್ರ
ಎನ್ನ ಪಾಲಿಸು || ೫ ||

ಇಲ್ಲಿರುವ ಏಳು ಪದ್ಯಗಳು ಆ ಮಾತೆಯ ಬಗೆಗಿರುವ ಭಕ್ತರ ಭಾವನೆಗಳನ್ನು ಎತ್ತಿ ತೋರಿಸುತ್ತವೆ. ಆಕೆ ಮಹಾತಾಯಿ, ವರದೆ. ಈ ಕವಿತೆಗಳು ಅತ್ಯಂತ ಮೇಲ್ತರಗತಿಯ ಪದ್ಯಗಳಲ್ಲದಿದ್ದರೂ ದಾನಮ್ಮನ ಬಗೆಗಿನ ಭಕ್ತಿಯ ಭಾವನೆಗಳನ್ನು ಎತ್ತಿ ತೋರಿಸುವುದರಿಂದ ಅವುಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಮೊದಲಿನ ನಾಲ್ಕು ಪದ್ಯಗಳನ್ನು ತೆಲಸಂಗದ ಭಕ್ತ ಅಡಿಗಲ್ಲಪ್ಪ, ಐದನೆಯ ಪದ್ಯವನ್ನು ಹುಬ್ಬಳ್ಳಿಯ ದಾನಯ್ಯ ಮತ್ತು ಆರು, ಏಳನೆಯ ಪದ್ಯಗಳನ್ನು ಶ್ರೀಮತಿ ಶಿವಪುತ್ರವ್ವ ಕಾತರಕಿ ಗದಗ ಅವರು ಬರೆದಿದ್ದಾರೆ. ದಾನಮ್ಮನು ವೀರಶೈವ ಮಹಿಳೆಯರಲ್ಲಿ ಖಡ್ಗವನ್ನು ಧರಿಸಿ ಧರ್ಮರಕ್ಷಣೆ ಮಾಡಿದ ವೀರಮಹಿಳೆಯರಲ್ಲಿಯೇ ಪ್ರಥಮ ಮಹಿಳೆಯೆನ್ನುವಂತೆ ಗೋಚರಿಸುತ್ತದೆ. ಅವಳ ಮೂರ್ತಿಯ ಕೈಯಲ್ಲಿ ಖಡ್ಗವಿರುವುದೂ ಇದಕ್ಕೆ ನಿದರ್ಶನವಾಗಿದೆ. ಈ ತಾಯಿ ಆರಾಧನೆ–ನೆನಹು ಭಕ್ತರಿಗೆ ಸಂತಸದಾಯಕವೆಂದು ಬೇರೆ ಹೇಳಬೇಕಿಲ್ಲ. ಅವಳ ದೇವಾಲಯ ರಚನೆಯು ಶಿವಶರಣರಲ್ಲಿ ಈಕೆಗೆ ಹೆಚ್ಚಿನ ಮಹತ್ವ ತಂದುಕೊಟ್ಟದೆ.

—ಬಿ. ಸಿ. ಜವಳಿ
30–6–1976

## ಪ್ರಮಾಣ ಗ್ರಂಥ-ಲೇಖನಗಳು :

1) ಕಿಟೆಲ್ಲರ ಕನ್ನಡ-ಇಂಗ್ಲೀಷ-ಕನ್ನಡ ನಿಘಂಟು, ಪುಟ ೫೫೦ (೧೮೯೩)
2) ಬಸವಪುರಾಣ: ಸಂಪಾದಕರು : ಡಾ. ಆರ್. ಸಿ. ಹಿರೇಮಠ ೧೯೭೧ರ ಪ್ರಕಟನೆ
3) ಶಿವತತ್ವ ಚಿಂತಾಮಣಿ; ಸಂಪಾದಕರು : ಪಂಡಿತ ಎಸ್. ಬಸಪ್ಪ (೧೯೬೦)
4) ಮಹದೇವಿಯಕ್ಕನ ರಗಳೆ; ಸಂಪಾದಕರು : ಚೆನ್ನಮಲ್ಲಿಕಾರ್ಜುನ (೧೯೩೩)
5) ಚೆನ್ನಬಸವ ಪುರಾಣ; ಸಂಪಾದಕರು : ಶಿ. ಶಿ. ಬಸವನಾಳ (೧೯೩೪)
6) ಶಿವದಾಸ ಗೀತಾಂಜಲಿ; ಸಂಪಾದಕರು: ಡಾ. ಎಲ್. ಬಸವರಾಜು(೧೯೬೩)
7) ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ; ಸಂಪಾದಕರು : ಡಾ. ಆರ್. ಸಿ. ಹಿರೇಮಠ
8) ಶಾಸನಗಳಲ್ಲಿ ಶಿವಶರಣರು; ಸಂ. ಡಾ. ಎಂ. ಎಂ. ಕಲಬುರ್ಗಿ; (೧೯೭೦)
9) Inscription in Northen Karnataka and Kolhapur State (1939)
10) South Indian Inscriptions, vol. xv
11) ಶರಣ ಸಾಹಿತ್ಯ ಸಂಪುಟ ೨೧, ಸಂಚಿಕೆ ೧.
12) ಶಿವಾನುಭವ ಸಂಪುಟ ೧, ಸಂಚಿಕೆ ೩; ಸಂಪುಟ ೧೩, ಸಂಚಿಕೆ ೧೧; ಸಂಪುಟ ೧೨, ಸಂಚಿಕೆ ೬
13) ಗುಡ್ಡಾಪುರ ದಾನಮ್ಮನ ಚರಿತ್ರೆ: ಪ್ರಕಟನೆ ವೀರಶೈವ ಪ್ರಗತಿಶೀಲ ಸಂಘ, ಗದಗ (೧೯೭೩)
14) ಶ್ರೀಕ್ಷೇತ್ರ ಗುಡ್ಡಾಪುರ; ಲೇ. ದಾನಯ್ಯನ ಪ್ರೀತಿಯ ಪುತ್ರಿ ಹುಬ್ಬಳ್ಳಿ.
16) ಶಿವಶರಣೆಯರ ಚರಿತ್ರೆಗಳು ಲೇ. ಫ. ಗು. ಹಳಕಟ್ಟಿ (೧೯೫೯)



# ಯುಗಪುರುಷ
# ಹಾನಗಲ್ಲ ಕುಮಾರ ಶಿವಯೋಗಿ

—ಪಂಚಾಕ್ಷರಿ ಹಿರೇಮಠ.

ಮಾನವನ ಜೀವನ ಅನೈಸರ್ಗಿಕವಾದಾಗ, ಬದುಕಿನಲ್ಲಿ ವಿಷವೇ ತುಂಬಿ ಬಂದಾಗ, ನೈತಿಕ ಹಾಗೂ ಮಾನಸಿಕ ಅಧೋಗತಿಯಾದಾಗ, ಸತ್ಯವಂತರು, ನೀತಿವಂತರು ಬದುಕುವುದೇ ಸಾಧ್ಯವಿಲ್ಲ, ಈ ಪರಿಸರದಲ್ಲಿ—ಎನ್ನುವ ಕಾಲದಲ್ಲಿ ಓರ್ವ ಮಹಿಮಾಪುರುಷನ ಉದಯವಾಗುತ್ತದೆ. ಬಹು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ನಂಬಿಕೆ ಇದು.

ಧರ್ಮದಲ್ಲಿ ಗ್ಲಾನಿಯುಂಟಾದಾಗ ನಾನು ಮತ್ತೆ ಬಂದು ಎಲ್ಲವನ್ನೂ ಸರಿ ಪಡಿಸುತ್ತೇನೆ—ಎನ್ನುವ ಪರಮಾತ್ಮನ ಆಶ್ವಾಸನೆ ಗೀತೆಯಲ್ಲೂ ಇದೆ.

ಈ ಶತಮಾನದ ಪೂರ್ವಾರ್ಧದಲ್ಲಿ ಇಂಥ ಕಾಲ, ಇಂಥ ಪರಿಸ್ಥಿತಿ ಈ ನಾಡಿನಲ್ಲಿತ್ತು. ಪ್ರತ್ಯೇಕವಾಗಿ ವೀರಶೈವ ಸಮಾಜ ತನ್ನ ಅಪೂರ್ವವಾದ ಸಂಸ್ಕೃತಿ, ಸಂಸ್ಕಾರ, ಆಚಾರ, ವಿಚಾರಗಳನ್ನು ಕಳೆದುಕೊಂಡು ಯಾವ ಯಾವದೋ ದಾರಿಯನ್ನು ಅನುಸರಿಸುವ ಸ್ಥಿತಿಯಲ್ಲಿತ್ತು. ವಿಶ್ವಮಾನ್ಯವಾಗಬಲ್ಲಂಥ ಭವ್ಯ ಸಂಸ್ಕೃತಿಯ, ಧರ್ಮದ ಹಿರಿಮೆಯನ್ನು ಪಡೆದ ಈ ಜನಾಂಗ ಸಂಕುಚಿತ ಮನೋ ಭಾವನೆಗೆ ಮಾರುಹೋಗಿ, ಭವ್ಯ ಪರಂಪರೆಯನ್ನು ಮರೆತು, ಜೀವಸತ್ವವನ್ನೇ ಕಳೆದುಕೊಂಡಿತ್ತು.

ಭೌತಿಕ, ಆಧ್ಯಾತ್ಮಿಕ, ತಾತ್ವಿಕ, ಸಾಮಾಜಿಕ ಈ ಎಲ್ಲ ಕ್ಷೇತ್ರದಲ್ಲಿಯೂ ಒಂದು ರೀತಿಯ ಗ್ಲಾನಿಯುಂಟಾದ ಒಂದು ಸಂಧಿಕಾಲ. ಓರ್ವ ಸಾಮಾನ್ಯ ಮನುಷ್ಯನಿಂದ ಈ ಕಾಲದ ಪರಿವರ್ತನೆ ಸಾಧ್ಯವಿರಲಿಲ್ಲ. ಅಲ್ಲಿ ಕೇವಲ ಸುಧಾರಣೆ ಸಾಲದು. ಪೂರ್ಣ ಪರಿವರ್ತನೆಯ ಅವಶ್ಯಕತೆ ಇತ್ತು.

ಹನ್ನೆರಡನೆಯ ಶತಮಾನದಲ್ಲೂ ಹೀಗೇ ಇತ್ತು. ಪರಸ್ಪರ ದ್ವೇಷ, ಜಾತಿ ಪಂಥಗಳಲ್ಲಿ ಜಗಳಗಳು, ನಡೆಯೊಂದು, ನುಡಿಯೊಂದು, ಆಚಾರಕ್ಕೂ ವಿಚಾರಕ್ಕೂ

ಸಂಬಂಧವಿಲ್ಲದ ಬದುಕು; ಜೀವನವೇ ಅಪಹಾಸ್ಯಕ್ಕೀಡಾದ ಸ್ಥಿತಿ ಆಗ ಪರಿಹಾರ ನೀಡಿ, ಜನ ಬದುಕುವಂತೆ ಉದಾತ್ತದ ದಾರಿಯಲ್ಲಿ, ಶಿವ ಮೆಚ್ಚುವ ರೀತಿಯಲ್ಲಿ ಜೀವನ ಸಾಗಿಸುವಂತೆ ಮಾಡಿದಾತ ನಮ್ಮ ಕೂಡಲಸಂಗನ ಪರಮಭಕ್ತ ಬಸವಣ್ಣ. ಕೂಡಲಸಂಗನ ಸಾಕ್ಷಿಯಾಗಿ ವಿಶ್ವದಲ್ಲಿಯೇ ನಡೆಯಲಾರದಂತಹ, ಮಹೋನ್ನತ-ವಾದಂತಹ, ಮಾನವ ಜೀವನದ ಹಿತಕ್ಕಾಗಿ ಕ್ರಾಂತಿಯೆನ್ನಸಗಿದನು. ಮಹಾನು-ಭಾವ ಬಸವಣ್ಣ.

ಬಸವಣ್ಣನ ಈ ಪವಿತ್ರದಾರಿಯನ್ನು ಬೆಳಕಿನದಾರಿಯನ್ನು ಈ ಶತಮಾನದ ಪೂರ್ವಾರ್ಧದಲ್ಲಿ ಜನ ಬದುಕಲೆಂದು, ಹಿತವಾಗಿಪ್ಪ, ಶಿವಂಗೆ ಪ್ರಿಯವಾಗಿಪ್ಪ ಜೀವನ ನಡೆಸಲೆಂದು ತಂದಾತ ನಮ್ಮ ಯುಗಪುರುಷ ಹಾನಗಲ್ಲ ಕುಮಾರೇಶ. ಈ ದಾರಿಕಂಡು ಹಿಡಿಯಲು ಅವರು ಪಟ್ಟ ಪರಿಶ್ರಮ, ಅವರು ಎಸಗಿದ ತಪಸ್ಸು ಅಷ್ಟಿಷ್ಟಲ್ಲ. ಅದು ಮಾತಿಗೆ ನಿಲುಕದು. ಕಲ್ಪನೆಗೆ ಒಳಪಡದು ಬದುಕಿನಲ್ಲಿ, ಜನಜೀವನದಲ್ಲಿ ಹೊಸ ಮನ್ವಂತರ, ಹೊಸ ಚೇತನವನ್ನೇ ತಂದರು. ಅದು ಅವರ ತಪಸ್ಸಿನ ಸಿದ್ಧಿ. ಸಮಾಜಕ್ಕೆ ನಾಡಿಗೆ ತಾವು ಜೀವನದುದ್ದಕ್ಕೂ ತಪಸ್ಸುಮಾಡಿ ಪಡೆದ ಸಿದ್ಧಿಯನ್ನು ತಾಯವಾತ್ಸಲ್ಯದಿಂದ ಸಮಾಜಕಿಸುವಿಗೆ ನೀಡಿ—ಅದು ಆರೋಗ್ಯ-ವಾಗಿರುವಂತೆ, ಸುಖವಾಗಿ ಬೆಳೆಯುವಂತೆ ಮಾಡಿದರು. ಯಾರೂ ಮಾಡಲಾರದ, ಇನ್ನು ಳಿದವರಿಗೆ, ಅಸಾಧ್ಯವಾದ ಅದ್ಭುತವಾದ ಈ ಕೆಲಸ ಮಾಡಿದರಂತೆಲೇ ಕುಮಾರಸ್ವಾಮಿಗಳು, ಹಾನಗಲ್ಲ ಈ ಯೋಗಿಯು ನಾಡ ಯೋಗಿಯಾದರು, ಯುಗಪುರುಷರಾದರು.

ಈ ಯೋಗಿಪುಂಗವನು ಪ್ರಕೃತಿಪ್ರಿಯ, ಸಂಗೀತಪ್ರಿಯ, ಕಾವ್ಯಪ್ರಿಯ; ಎಲ್ಲಕ್ಕೂ ಹೆಚ್ಚಾಗಿ ಮಾನವತಾಪ್ರಿಯ. ಈತ ತುಳಿದ ನೆಲ ಪಾವನವಾಯ್ತು. ನಿಂತನೆಲ ಪುಣ್ಯಕ್ಷೇತ್ರವಾಯಿತು, ಆಡಿದ ಮಾತು ಬೆಳಕಾಯಿತು, ನೋಡಿದ ನೋಟ ಶಿವನ ಕೂಟ ವಾಯಿತು. ಇವರು ನಡೆದಲ್ಲೆಲ್ಲ ಬೆಳಕಿನ ಹೆಜ್ಜೆ ಮೂಡಿದವು. ಆಡಿದುದು ನಡೆಯಾಯಿತು, ನಡೆದುದು ನುಡಿಯಾಯಿತು. ನಡೆನುಡಿಯೊಂದು-ಗೊಳಿಸಿದಾತ ನಮ್ಮ ಹಾನಗಲ್ಲ ಕುಮಾರಯೋಗಿ. ಜ್ಞಾನ, ಕ್ರಿಯೆಯಾಯಿತು, ಕ್ರಿಯೆ ಜ್ಞಾನವಾಯಿತು. ಇಂಥ ಮಹೋನ್ನತ ಬದುಕನ್ನು ಬಾಳಿದ ಶ್ರೀ ಕುಮಾರಸ್ವಾಮಿಗಳು ಬಡತನದ ಬವಣೆಯಲ್ಲಿ ಕಷ್ಟ ಕಾರ್ಪಣ್ಯದಲ್ಲಿ ಸಿಲುಕಿದ ಮನೆತನದಲ್ಲಿ ಜನ್ಮತಾಳಿದರು. ಮಹಿಮಾಪುರುಷರ ಜನನವೆ ಹೀಗೇನೊ! ಕ್ರಿಸ್ತನ ಜನನದ ಘಟನೆ, ಪರಿಸ್ಥಿತಿ ನೋಡಿದಾಗಲೂ ನಮಗೆ ಈ ಭಾವನೆಯೇ ತೋರುತ್ತದೆ ಬೆತ್ಲೆಹೇಮಿನ ದನಕಟ್ಟುವ ಕೊಟ್ಟಿಗೆಯಲ್ಲಿ ಜನಿಸಿದ ಆ ಮಗು ವಿಶ್ವವಂದ್ಯ, ಮಹಾಪುರುಷ, ದೇವ ಮಾನವನಾಗುತ್ತಾನೆಂದು ಯಾರು ನಂಬಿದ್ದರು? ಬಾಗೇ-ವಾಡಿಯಲ್ಲಿ ಜನಿಸಿ, ಕೂಡಲಸಂಗನ ಭಕ್ತಿಯಲಿ ವಿರತನಾದ ಬಸವಣ್ಣ ವಿಶ್ವವೇ ಅಚ್ಚರಿಪಡುವಂತಹ ಬದುಕನ್ನು, ತತ್ತ್ವವನ್ನು, ಆಚಾರವನ್ನು, ಮಾನವ ಧರ್ಮ-ವನ್ನು, ಈ ಜಗತ್ತಿಗೆ ನೀಡುತ್ತಿದ್ದನೆಂದು ಆಗ ಯಾವಾತ ಭಾವಿಸಿದ್ದ? ವಿಷವನಿಕ್ಕಿ-ದರೂ 'ನಿಮಗೆ ಕಲ್ಯಾಣವಾಗಲಿ' ಎನ್ನುತ್ತ ವಿಷಕುಡಿದ ಸಾಕ್ರೆಟೀಸನ ಜನನವಲ್ಲಿ

ಯಾರಾದರೂ ಭವಿಷ್ಯ ನುಡಿದಿದ್ದರೇ, ಆತನ ಭವ್ಯಜೀವನವನ್ನು ಕುರಿತು? ಸಾಮಾನ್ಯರಾದ ನಮ್ಮಂತೆಯೇ ಜನಿಸಿ, ಬೆಳೆದರು ಇವರು ಅಸಾಮಾನ್ಯರಾದರು, ಅಪ್ರಮಾಣರಾದವರು.

ಕನ್ನಡನಾಡಿನ ಸಾಂಸ್ಕೃತಿಕ ಕೇಂದ್ರವಾದ ಧಾರವಾಡ ಜಿಲ್ಲೆಯ ರಾಣೇ-ಬೆನ್ನೂರಿನ ತಾಲೂಕಿನಲ್ಲಿ "ಜೋಯಿಸರ ಹಳ್ಳಿ" ಎಂಬುದೊಂದು ಚಿಕ್ಕಗ್ರಾಮ. ಈ ಚಿಕ್ಕಗ್ರಾಮದಲ್ಲಿ ಸಾಲೀಮಠದ ಬಸವಯ್ಯ, ನೀಲಮ್ಮ ಎಂಬಹೆಸರಿನ ದಂಪತಿಗಳು, ಶಿವಪೂಜಾತತ್ಪರರು, ಆಚಾರನಿಷ್ಠರು. ಬಡತನವನ್ನೇ ಬಳುವಳಿಯಾಗಿ, ಭಾಗ್ಯವಾಗಿ ಪಡೆದರೂ ಅವರ ದಾಂಪತ್ಯಜೀವನ ಉದಾತ್ತವಾದುಧಾಗಿತ್ತು, ಅನುಕರಣೀಯವಾಗಿತ್ತು.

ಇಂದಿಗೆ ನೂರಹತ್ತುವರ್ಷಗಳ ಹಿಂದೆ ಕ್ರಿ. ಶ. ಸಾವಿರ ಎಂಟುನೂರ ಅರವತ್ತೇಳರ ಕಾಲ ಆಗ. ಕತ್ತಲೆಯ ಕಳೆಯಲೆಂದು ಬಂದ ಸೂರ್ಯನ ತೆರದಿ ಸಮಾಜ ಜೀವನದ ಸೂರ್ಯನಾಗಿ ಉದಯಿಸಿದನೆಮ್ಮ ಶ್ರೀ ಕುಮಾರಯೋಗಿ. ಇಂದು, ಈ ವಿಜ್ಞಾನಯುಗ ನಂಬಲು ಹಿಂಜರಿಯುವಂತಹ, ಪವಾಡವೆನ್ನುವಂತಹ, ಘಟನೆಗಳು ಹಲವಾರು ಇವೆ ಈ ಯೋಗಿಯ ಜನನಕ್ಕೆ ಹಿನ್ನೆಲೆಯಾಗಿ. ತಾಯಿ ನೀಲಮ್ಮನವರು ಕನಸಿನಲ್ಲಿ ಮಾಹೇಶ್ವರನನ್ನು ಕಂಡರು. ಆತ ತನ್ನ ಕೈಯಲ್ಲಿದ್ದ ಪುಷ್ಪವನ್ನು ಆಶೀರ್ವದಿಸಿ, ಅದಕ್ಕೆ ಬದಲಾಗಿ ಸುಕುಮಾರನನ್ನು ಬೇಡಿದ. ಅದಕ್ಕೆ ತಾಯಿ, ದೇವಮಾನವನನ್ನು ಜಗತ್ತಿಗೆ ನೀಡುವ ತಾಯಿ, "ಆಗಲಿ" ಎಂದಳು.

ಹನ್ನೊಂದನೆಯ ದಿನ ಮುತ್ತೈದೆಯರೆಲ್ಲ ಸೇರಿ ಜೋಗುಳವ ಪಾಡಿದರು, ಲೋಕೋತ್ತರನಾದ ಮಗುವನ್ನು ತೊಟ್ಟಿಲದಲ್ಲಿರಿಸಿ, 'ಸದಾಶಿವ' ಹಾಲಯ್ಯನೆಂದು ನಾಮಕರಣವೂ ಆಯಿತು.

ಮಕ್ಕಳೊಂದಿಗೆ ಬೆಳೆದ, ಆತನ ಆಟಪಾಠಗಳಲ್ಲಿ ಆತನದೇ ವೈಶಿಷ್ಟ್ಯ. ಗೋಲಿಯಾಟದಲ್ಲಿಟ್ಟ ಆತನ ದೃಷ್ಟಿಮುಂದೆ ದೃಷ್ಟಿಯೋಗವಾಯಿತು. ಮನೆ ಅಂಗಳದಲ್ಲಿ, ತನ್ನ ಸಮವಯಸ್ಸಿನವರೊಂದಿಗೆ ನಿಂತಿರುವಾಗ, ಆಡುವಾಗ ನೋಡಿದ ಡೊಂಬರಾಟ ಅವರ ಹಠಯೋಗಕ್ಕೆ ಕಾರಣವಾಯಿತು.

ಆರನೆಯ ವರ್ಷದಲ್ಲಿ ಬಂದು ಒಳ್ಳೇ ಮೂಹೂರ್ತದಲ್ಲಿ ತಂದೆ ತಾಯಿ ಅಕ್ಷರಾಭ್ಯಾಸಕ್ಕೆ ಪ್ರಾರಂಭಿಸಿದರು. ಹಾಲಯ್ಯ ಸದಾಶಿವನ ಅಭ್ಯಾಸ ಅಜ್ಜಂದಿರಾದ ಶ್ರೀ ಕೊಟ್ರಪ್ಪಯ್ಯನವರ ಶಾಲೆಯಲ್ಲಿಯೇ ನಡೆಯಿತು.

ಜನರಿಂದ ಕಿಕ್ಕಿರಿದು ತುಂಬಿದ ಮನೆಗೆ ಬಡತನವೇ ದಾಳಿಯಿಕ್ಕಿರುವಾಗ ಈ ಸದಾಶಿವನ ಅಭ್ಯಾಸ ನಿರಾತಂಕವಾಗಿ ಸಾಗಲು ಸಾಧ್ಯವಾಗಲಿಲ್ಲ. ಬಡತನದ ಬೇಗೆ ಅವರ ವಿದ್ಯೆ ಮುಂದುವರೆಯುವಂತೆ ಮಾಡಲಿಲ್ಲ. ಆಗ ನಡೆದ ಒಂದು ಘಟನೆಯಿಂದ ನೋವು ಅನುಭವಿಸಿದ ಸದಾಶಿವಯ್ಯನವರು, ಆ ಊರಿನಿಂದ ಕಜ್ಜರಿಗ್ರಾಮಕ್ಕೆ ಬಂದರು. ಅಲ್ಲಿ ಯಾರು ಯಾರದೋ ಪರಿಚಯ ಹೆಚ್ಚಿಸಿಕೊಂಡು ಅಭ್ಯಾಸ

ಮುಂದುವರಿಸಿದರು. ಸಮಗ್ರ ನಾಲ್ಕುವರುಷ ಉತ್ತಮರೀತಿಯಲ್ಲಿ ಪಾಸಾಗುತ್ತ ಅಭ್ಯಾಸ ಮುಂದುವರೆಸಿದರು ಮುಲ್ಕಿ ಪರೀಕ್ಷೆಗೆ ಕುಳಿತರು, ಪಾಸಾಗಲಿಲ್ಲ. ಅದರಿಂದ ಮನಸ್ಸಿಗೆ ನೋವಾಗಿ ತಾಯಿಯ ತವರುಮನೆಯಾದ ಲಿಂಗದ ಹಳ್ಳಿಗೆ ಬಂದು ಒಂದು ಖಾಸಗಿ ಶಾಲೆಯನ್ನು ಪ್ರಾರಂಭಿಸಿ ತಾವೇ ಮಾಸ್ತರರಾಗಿ ಶಾಲೆ ನಡೆಸಿದರು.

ಹೀಗಿರುವಾಗ ಅವರಿಗಿದ್ದ ಜ್ಞಾನದಾಹ ಅಪಾರವಾಯಿತು. ಆಗ ಅದೇ ಊರಿನಲ್ಲಿದ್ದ ಸಮಾಳದ ಬಸವಪ್ಪಯ್ಯನವರಿಂದ ಶ್ರೀ ನಿಜಗುಣರ ಸಾಹಿತ್ಯ, ವೇದಾಂತ ಅಭ್ಯಾಸ ಪ್ರಾರಂಭಿಸಿದರು. ವೇದಾಂತದ ಅರಿವು, ಇಷ್ಟ–ಪ್ರಾಣ–ಭಾವಲಿಂಗಗಳ ಸೂಕ್ಷ್ಮ ಪರಿಚಯ ನೀಡುವ "ಕೈವಲ್ಯ ಪದ್ಧತಿ" ಅವರ ಬಾಳನ್ನು ಇನ್ನೂ ಉದಾತ್ತಗೊಳಿಸಿತು. ಲಿಂಗಪೂಜೆಯಲ್ಲಿ ಅವರು ನಿರತರಾದರೆ ಬಾಹ್ಯಲೋಕದ ಪ್ರಜ್ಞೆ ಇರುತ್ತಿರಲಿಲ್ಲ. ನಿಜಗುಣರ ಗ್ರಂಥಗಳ ಓದಿನಿಂದಾಗಿ ಅವರಲ್ಲಿ ವೈರಾಗ್ಯ ಬೆಳೆಯಿತು. ಈ ಚಿಕ್ಕ ವಯಸ್ಸಿನಲ್ಲಿಯೇ ಅವರು ಕಾಮ, ಕ್ರೋಧ, ಮೋಹ, ಮದ, ಮತ್ಸರಗಳ ಮೀರಿನಿಂತ ಮಹಿಮರಾದರು.

ತನ್ನ ತವರುಮನೆಯಲ್ಲಿದ್ದ ಮಗನ ವಿಷಯ ತಿಳಿದು ತಾಯಿ ಬಂದು ಮದು-ವೆಗೆ ಒತ್ತಾಯಿಸಿದಾಗ, ತಾಯಿಗೆ ನೂರೊಂದು ಹೇಳಿ ಸಂಸಾರ ನನಗೆ ಸಲ್ಲದು, ಸತ್ಯವಾದ ಚಿರಂತನವಾದ ಲೋಕಹಿತಾರ್ಥವಾದ ಪ್ರಪಂಚಕ್ಕೆ ನಾನು ನನ್ನನ್ನೇ ಅರ್ಪಿಸಿಕೊಳ್ಳಬೇಕೆಂದಿದ್ದೇನೆ. ನೀನು ಆಶೀರ್ವದಿಸು. ಎಂದು ಹೇಳಿ, ತಾಯಿಗೆ ಸಮಾಧಾನಪಡಿಸಿ ಆ ಸ್ಥಳದಿಂದ ತಾನೇ ಹೊರಡುತ್ತಾನೆ.

ತಾಯಿ ಸಾಮಿಪ್ಯವನ್ನೂ ಬೇಕು ಎನ್ನುವ ವಯಸ್ಸಿನಲ್ಲಿಯೇ ಸದಾಶಿವಯ್ಯ-ನವರು ವೀರವಿರಾಗಿಯಾಗಿ ಒಮ್ಮೆಲೆ ಎಲ್ಲ ಮೋಹವನ್ನೂ ಕಿತ್ತೆಸೆದು ಸಮಾಜ ಪುರುಷನಾಗಲು ಹೊರಡುತ್ತಾನೆ. ಲಿಂಗದಹಳ್ಳಿ ಬಿಟ್ಟು ಹುಬ್ಬಳ್ಳಿಗೆ ಬಂದು ಆರೂಢರಲ್ಲಿ ವೇದಾಂತ ಅಭ್ಯಾಸ ಮುಂದುವರಿಸುತ್ತಾರೆ. ವೇದಾಂತದ ಅಭ್ಯಾಸಿಯಾಗಿಯೂ ವೇದಾಂತಿಯಾಗಲಿಲ್ಲ. ಇಷ್ಟಲಿಂಗದ ಬಗೆಗೆ ಭಕ್ತಿ ತೋರಿಸಿದ ಆರೂಢರ ಬಗೆಗೆ ನಮ್ಮ ಸ್ವಾಮಿಗಳಲ್ಲಿ ಶ್ರದ್ಧೆ ಸಾಲದು. ಶಿವಯೋಗದ ಬಗೆಗೇನೇ ಹೆಚ್ಚು ಆಸಕ್ತಿಯಿರಿಸಿಕೊಂಡ ಸ್ವಾಮಿಗಳು ಎಮ್ಮಿಗನೂರು ಜಡೆಸಿದ್ಧರ ಬಳಿಗೆ ಹೋದರು. ಅಲ್ಲಿ ಅವರಿಗೆ ಪರಿಹಾರ ದೊರಕಿತು. ಅಲ್ಲಿಯೇ ಸ್ವಾಮಿಗಳ ತೇಜಃ ಪುಂಜ ವ್ಯಕ್ತಿತ್ವವನ್ನು, ಸಿದ್ಧಿಯನ್ನು ಕಂಡ ಜಡೆಸಿದ್ಧರು "ಶಿವಯೋಗಿ" ಎಂದು ಕರೆದರು. ಈ ಶಿವಯೋಗಿಯ ಶಿವಯೋಗ ಎಳಂದೂರು ಬಸವಲಿಂಗ ಸ್ವಾಮಿಗಳಲ್ಲಿ ಪೂರ್ಣಗೊಂಡಿತು. ಬಸವಲಿಂಗ ಸ್ವಾಮಿಗಳು ಶಿಷ್ಯನಲ್ಲಿ ಅಗಾಧವಾದ ಶಕ್ತಿಯನ್ನು ಕಂಡು ಮೆಚ್ಚಿದರು. ತಮ್ಮಲ್ಲಿದ್ದುದನ್ನೆಲ್ಲ ಆತನಿಗೆ ಧಾರೆಯೆರೆದರು.

ಗುರುಶಿಷ್ಯರಿಬ್ಬರೂ ಸೇರಿ ನಾಡಸಂಚಾರ ಮಾಡಿ ಭಕ್ತರಿಗೆ ಸದ್ಬೋಧೆಯನ್ನು ಮಾಡಿದರು. ಸಂಚಾರದಲ್ಲಿರುವಾಗಲೇ ಶ್ರೀ ಬಸವಲಿಂಗ ಸ್ವಾಮಿಗಳವರಿಗೆ ದೇಹಾಲಸ್ಯವಾಯಿತು. ಆಗ ಸದಾಶಿವಯ್ಯ ಸ್ವಾಮಿಗಳು ಚಿಂತಿಸತೊಡಗಿದರು. ಇದನ್ನು

ಕಂಡು ಗುರುಗಳು ಶಿಷ್ಯನನ್ನು ಪಕ್ಕಕ್ಕೆ ಕರೆದು ಧೈರ್ಯ ಹೇಳುತ್ತ "ನಿನ್ನಲ್ಲಿ ಯೋಗ ಶಕ್ತಿಯಿಗೆ, ವಿರತಿಯಿದೆ, ಕಾರ್ಯದಕ್ಷತೆಯಿದೆ, ಧೈರ್ಯದಿಂದ ಈ ಸಮಾಜ ಶಿಶುವನ್ನು ಜೋಪಾನಮಾಡಲು ಸಿದ್ಧನಾಗು" ಎಂದು ಹೇಳಿ ಆಶೀರ್ವದಿಸಿ, ಅನುಗ್ರಹಿಸಿ ಲಿಂಗೈಕ್ಯರಾದರು. ಆ ಗುರುವಿನ ಅನುಗ್ರಹವೇ ಪರಮಾರ್ಥ ಸಂಪತ್ತೆಂದು ಸ್ವೀಕರಿಸಿದರು, ನಮ್ಮ ಸ್ವಾಮಿಗಳು.

ಅಲ್ಲಿಂದ ಮುಂದೆ ನಿಜಗುಣರ ತಪೋಭೂಮಿಯಾದ ಶಂಭುಲಿಂಗನ ಬೆಟ್ಟದಲ್ಲಿ ಬಂದು ಗವಿಯಲ್ಲಿ ನೆಲಸಿ ಸಮಾಜ, ನಾಡು, ದೇಶದ ಹಿತಕ್ಕಾಗಿ ಬೇಕಾದ ತಪಃ ಸಿದ್ಧಿಯನ್ನು ಪಡೆದರು. ಒಂದು ಮಂಗಲ ಸಮಯದಲ್ಲಿ ಮಹಾಸ್ವಾಮಿಗಳು ತಮ್ಮ ತಪಸ್ಸಿನ ಸಿದ್ಧಿಯನ್ನು ಸಮಾಜಕ್ಕೆ ನೀಡಲೆಂದು ಬೆಳಗಿನಲ್ಲಿ ಹಕ್ಕಿಯ ಮಂಗಲಗೀತದೊಂದಿಗೆ ಗವಿಬಿಟ್ಟು ಹೊರ ಹೊರಟರು.

ಅವರು ಹೋದಲ್ಲೆಲ್ಲ ಶಿಷ್ಯಕೋಟಿ ಬೆಳೆಯಿತು. ಅವರ ಮಾತು ಮುತ್ತು ರತ್ನ, ನಡೆನುಡಿ, ಶಿವಮೆಚ್ಚುವ ತೆರದಿ, ಸ್ವಾಮಿಗಳು ಜನರ ಮನದಲ್ಲಿ ವಿರಾಜ-ಮಾನರಾದರು. ಅವರು ತುಳಿದ ನೆಲ ಪಾವನ ಕ್ಷೇತ್ರವಾಯಿತು. ಹೀಗೆಯೇ ನಾಡೆಲ್ಲ ಸಂಚರಿಸುತ್ತ ಸೊರಬ ಪ್ರಾಂತಕ್ಕೆ ಬಂದರು. ಅಲ್ಲಿಯ ಭಕ್ತರ ಉತ್ಕಟ ಇಚ್ಛೆಯಂತೆ ಸ್ವಾಮಿಗಳು ಕೆಲಕಾಲ ಅಲ್ಲಿಯೇ ನೆಲಸಿದ್ದರು.

ಹಾನಗಲ್ಲ ಮಠಾಧಿಪತಿಗಳಾಗಿದ್ದ ಶ್ರೀ ನಿ. ಪ್ರ. ಫಕೀರ ಸ್ವಾಮಿಗಳವರು ತುಂಬ ವಯೋವೃದ್ಧರಾಗಿದ್ದರು. ಆಗ ಅವರು ಸಮರ್ಥ ಉತ್ತರಾಧಿಕಾರಿಯ ದಾರಿ ಕಾಯುತ್ತಿದ್ದರು. ಈ ಕ್ಷಣದಲ್ಲಿಯೇ ಸೊರಬ ಪ್ರಾಂತದಲ್ಲಿದ್ದ ಸದಾಶಿವಯ್ಯ ನವರನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು ಅವರು ಮಠಾದಿಪತ್ಯ ತಮಗೆ ಬೇಡವೆಂದು ಹೇಳಿದರೂ ಸ್ವಾಮಿಗಳು, ಭಕ್ತರುಕೇಳಲಿಲ್ಲ. ಶ್ರೀ ನಿ. ಪ್ರ. ಫಕೀರಸ್ವಾಮಿಗಳು ಹಾಗೂ ಭಕ್ತರ ಒತ್ತಾಯಕ್ಕಾಗಿ ಮಠಾಧಿಪತ್ಯ ಒಪ್ಪಿಕೊಂಡರು. ಆ ಮಠದ ಮಠಾಧಿಪತ್ಯದ ನಂತರ ಸದಾಶಿವಯ್ಯನವರು ಹಾನಗಲ್ಲ ಕುಮಾರಸ್ವಾಮಿ-ಗಳಾದರು. ಇಲ್ಲಿಂದಲೇ ಅವರ ಭವ್ಯ ಜೀವನದ ನಾಂದಿಯಾಗುತ್ತದೆ. ಹಾನಗ-ಲ್ಲಿನಲ್ಲಿ ಪ್ರಾರಂಭಿಸಿದ ಪಾಠಶಾಲೆಯಿಂದ ಅವರಿಗೆ ತೃಪ್ತಿಯಾಗಲಿಲ್ಲ. ಸಮಾಜದ ನಾಡಿನ ತಮಸ್ಸಿಗೆ ಜ್ಯೋತಿ ಮುಟ್ಟಿಸಿ ಅದು ಪ್ರಜ್ವಲಿಸುವಂತೆ ಮಾಡಬೇಕೆಂದು ಆಶಿಸಿ, ಆ ರೀತಿಯಲ್ಲಿ ಕಾರ್ಯತತ್ಪರರಾಗಿ ವೀರಶೈವ ಮಹಾಸಭೆಯೆಂಬ ಸಂಸ್ಥೆ-ಯೊಂದನ್ನು ಸ್ಥಾಪಿಸಿ ಅದರ ಮುಖಾಂತರ ಸಮಾಜ, ಧರ್ಮ, ಜನತೆಯ ಜಾಗೃತಿ-ಯನ್ನು ಪ್ರಾರಂಭಿಸಿದರು.

ನಾಡನ್ನೆಲ್ಲ ಸಂಚರಿಸಿ, ಅಲ್ಲಲ್ಲಿ ಸಭೆಸಮ್ಮೇಳನಗಳನ್ನೂ ಕರೆದು, ಪಾಠಶಾಲೆ ಗಳನ್ನು, ಉಚಿತಪ್ರಸಾದ ನಿಲಯಗಳನ್ನು, ವಾಚನಾಲಯಗಳನ್ನು ತೆರೆಯಿಸಿ, ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿ, ಸಮಾಜದಲ್ಲಿ ಹೊಸ ಬೆಳಕನ್ನು ಹೊಸ ದೃಷ್ಟಿಯನ್ನು ತರಲು ಪ್ರಯತ್ನಿಸಿದರು. ಈ ನಾಡಿನ ಸಂಸ್ಕೃತಿ, ಇತಿಹಾಸ, ಸಾಹಿತ್ಯದ ಬಗೆಗೆ ಮಹಾಸ್ವಾಮಿಗಳವರಲ್ಲಿ ಅಪಾರ ಅಭಿಮಾನ.

ನಾಲಂದ ವಿಶ್ವವಿದ್ಯಾಲಯದ ಹಾಗೆ ಒಂದು ಸಂಸ್ಥೆ ಸ್ಥಾಪಿಸಿ ಅವರ ಮುಖಾಂತರ ವೀರಶೈವ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಧರ್ಮದ ಏಳ್ಗೆ ಸಂಪಾದಿಸಬೇಕೆಂದು ಬಯಸಿ, ಪ್ರಕೃತಿ ಸೌಂದರ್ಯದ ಪರಮಧಾಮವಾದ ಸುತ್ತುಗಿರಿಗಳ ಕೋಟೆಯಿಂದ ಸುಶೋಭಿತವಾದ, ಮಾಮರ, ನೇರಳೆ, ಮುತ್ತುಗದ ಮರಗಳ ನೆರಳ 'ಬಯಲಿ'ನಲ್ಲಿ, ಜುಳು ಜುಳು ಎಂದು ಸದಾ ನಿನದಿಸುವ ಮಲಪ್ರಭಾ ನದಿಯಬಳಿ "ಶಿವಯೋಗ ಮಂದಿರ" ಸ್ಥಾಪಿಸಿದರು – ಶ್ರೀಗಳವರು, ಇಂದಿಗೆ ಅರವತ್ತಾರು ವರುಷಗಳ ಹಿಂದೆ. ಅದೊಂದು ಅದ್ಭುತ ಕಲ್ಪನೆ ಸಿದ್ದ ತಾಳಿದ ಸತ್ಯ. ಅದರ ಹಿನ್ನೆಲೆಯಲ್ಲಿರುವ ಘಟನೆಗಳು ಬಹು ವಿಚಿತ್ರವಾಗಿವೆ, ರೋಮಾಂಚಕವಾಗಿವೆ, ಪವಾಡಮಯವಾಗಿವೆ. "ಶಿವಯೋಗ ಮಂದಿರ" ಸ್ವಾಮಿಗಳ ಪೂರ್ಣಯೋಗದ ಫಲ.

'ಶಿವಯೋಗ ಮಂದಿರ' ಸುಂದರ ಕಾವ್ಯ. ತಂಗಾಳಿ ಸೂಸೂತಿದೆ ಇಲ್ಲಿ, ತನಿಗಂಪು ತೀಡುತಿದೆ, ಕೂಹೂ, ಕೂಹೂ ಎಂದು ಕೂಗುವ ಕೋಗಿಲೆಗಳ ಮಧುರ ಧ್ವನಿ ಇದೆ ಇಲ್ಲಿ – ನೂರಾರು ವಟುಗಳು ಕಾವಿಲಾಂಛನವ ತೊಟ್ಟು, ತಪದಲ್ಲಿ, ಪೂಜೆಯಲ್ಲಿ ಕಾಯಕದಲ್ಲಿ ನಿರತರಾಗಿರುವ ದೃಶ್ಯ, ನೂರಾರು ವಟುಗಳು, ವೀರ ವಿರಾಗಿಗಳ ಸಲುಹುವ ಗೋಮಾತೆಯರು, ಬಿಲ್ವಪತ್ರಿ ಗಿಡಗಳ ಸಾಲು ಸಾಲು, ಒಂದೆಡೆ ಪವಿತ್ರಬಸ್ಮ ಸಿದ್ಧಿಗೊಳಿಸುವ ಕಾಯಕ, ಮತ್ತೊಂದೆಡೆ ಪುರಾತನ ಗ್ರಂಥಗಳ ಸಂಶೋಧನ ಕೇಂದ್ರದಲ್ಲಿ ಸಂಶೋಧನೆಯಲ್ಲಿ ನಿರತರಾಗಿಹ ಸಂಶೋಧಕರು, ಇವಲ್ಲಕ್ಕೂ ಸೂತ್ರಧಾರಿಗಳಾಗಿ, ಶಕ್ತಿಯಾಗಿ, ಚೇತನಸ್ವರೂಪರಾಗಿ ನಿಂತವರು ನಮ್ಮ ಶ್ರೀ ಕುಮಾರಯೋಗಿಗಳು.

ನುಡಿದಂತೆ ನಡೆದು, ತಮ್ಮ ಅಪಾರ ತಪಃಶಕ್ತಿಯಿಂದ ಯೋಗದ ಬಲದಿಂದ ನಾಡಿನ ಜನಮನ ಗೆಲಿದರು. ಅವರು ಸಂಗ್ರಹಿಸಿ ಇಂದು ಶಿವಯೋಗ ಮಂದಿರದ ಸಂಶೋಧನ ಶಾಖೆಯಲ್ಲಿರಿಸಿರುವ ಪುರಾತನ ತಾಡೋಲೆ ಗ್ರಂಥಗಳು, ನಾಡಿನ ಸಂಶೋಧಕರಿಗೆ ಆಹ್ವಾನ ನೀಡುತ್ತಲಿವೆ. ಅವರ ಸಂಗ್ರಹದಿಂದಲೇ ವಿಶ್ವ ಸಾಹಿತ್ಯಕ್ಕೆ ನಮ್ಮ ಕಾಣಿಕೆಯಾಗಬಲ್ಲಂಥ ವಚನಸಾಹಿತ್ಯ ಬೆಳಕು ಕಂಡಿತು.

ನಮ್ಮ ನಾಡಿನಲ್ಲಿ ಸಂಗೀತ ಪ್ರಸಾರವಾಗಿದ್ದರೆ ಅದು ಶ್ರೀಗಳವರ ಪುಣ್ಯಪ್ರಭಾವ. ಆ ಪ್ರಭಾವಳಿಯಲ್ಲಿ ಬೆಳೆದ ಉಭಯ ಗಾಯನ ವಿಶಾರದ ಪಂ|| ಪಂಚಾಕ್ಷರಿ ಗವಾಯಿಗಳು ಕರ್ನಾಟಕದಲ್ಲಿ ಸಂಗೀತಕ್ಕೆ ಜೀವ ತುಂಬಿದರು. ಸಂಗೀತ, ಸಾಹಿತ್ಯ, ಸಂಸ್ಕೃತಿ, ಧರ್ಮ ಈ ಎಲ್ಲದರ ಉದ್ಧಾರಕ್ಕೆ, ಬೆಳವಣಿಗೆಗೆ ಕಾರಣಕರ್ತರಾದರು, ನಮ್ಮ ಯುಗಪುರುಷ ಶ್ರೀ ಕುಮಾರೇಶ.

ಶ್ರೀಗಳವರು ಚಲಿಸಿದ ನೆಲವೆಲ್ಲ ಪಾವನವಾಯ್ತು; ಅವರು ನುಡಿದದ್ದುಲ್ಲ ಮಂತ್ರವಾಯ್ತು; ಅವರು ನಡೆದಲ್ಲೆಲ್ಲ ಬೆಳಕಿನ ಹೆಜ್ಜೆ ಮೂಡಿದವು. ಆ ದಿವ್ಯ ಬೆಳಕಿನಲ್ಲಿ ಅಸಂಖ್ಯಾತ ಯತಿವರೇಣ್ಯರು; ಕವಿ, ಕಾವ್ಯಕೋವಿದರು, ಸಂಗೀತ ಸುಧಾಕರರು ಮೈದಳೆದರು.

ಆ ಪಾವನ ಬೆಳಕು ಇಂದು ಆ ಪರಶಿವನ ಚಿತ್ಕಳೆಯ ಬೆಳಕಿನೊಂದಿಗೆ ಸೇರಿದ್ದರೂ ಆ ಬೆಳಕಿನಲ್ಲಿ ಮೂಡಿಬಂದ ಅಸಂಖ್ಯಾತ ಬೆಳಕಿನ ಶಿಶುಗಳು ಈ ನಾಡಿನ ಜನಮನವನ್ನು ಕಲ್ಯಾಣದತ್ತ ನಡೆಯಿಸಿಕೊಂಡು ಹೋಗುತ್ತಿವೆ. ಹಾನಗಲ್ಲ ಶ್ರೀಗಳ ಚಿರಂತನ ಇರುವಿಕೆಗೆ ಇದಕ್ಕಿಂತ ಸಾಕ್ಷಿ ಇನ್ನೇನು ಬೇಕು ? ಅವರು ಪರಮ ಪುರುಷರು, ಪಾವನ ಚರಿತರು, ಸಕಲ ಸಚ್ಚಿದಾನಂದ ಭರಿತರು, ಶಿವಯೋಗ ಸಾಯುಜ್ಯಪಡೆದ ಮಹಾಮಹಿಮರು.



ನುಡಿಗಲಿಸಿದ ನಮ್ಮ ಕುಮಾರ
ನಡೆಗಲಿಸಿದ ನಮ್ಮ ಕುಮಾರ
ಶೀಲ ಸಂಸ್ಕೃತಿಯನುಳಿಸಿದನು ನಮ್ಮ ಕುಮಾರ;
ಶಿವಯೋಗಮಂದಿರವ ಸ್ಥಾಪಿಸಿದನಯ್ಯಾ
ಶಿವಯೋಗದನುಭವವ ರೂಪಿಸಿದನಯ್ಯಾ,
ವಿರತಿ ಶಿಖಾಮಣಿ ಸುಕುಮಾರ
ಇಂತಪ್ಪ ಹಾನಗಲ್ ಕುಮಾರನ ಮರೆತು,
ಕಂಡಂತೆ ನಡೆವವರ ಕಂಡು ನಗುವನಯ್ಯಾ
ನಮ್ಮ ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ.

# ಬಾಳಿನ ಆವಿಷ್ಕಾರ ಸಂಸ್ಕಾರ !

—ಸೂರ್ಯಸಿಂಹಾಸನಾಧೀಶ್ವರ
ಡಾ॥ ಶ್ರೀ ಜ. ಚ. ನಿ.

ಪ್ರಾಕೃತಿಕ ಸಂಸ್ಕಾರ ಪ್ರಕೃತಿನಿಷ್ಠವಾದುದು. ಪ್ರಾಗತಿಕ ಸಂಸ್ಕಾರ ಶ್ರೀಗುರು ನಿಷ್ಠವಾದುದು. ಸಂಸ್ಕಾರ ಇರ್ತೆರ. ಒಂದು ಪ್ರಕೃತಿ ಸಂಸ್ಕಾರ; ಇನ್ನೊಂದು ಪುರುಷ ಸಂಸ್ಕಾರ. ಇದನ್ನೆ ವೀರಶೈವ ಸಿದ್ಧಾಂತದಲ್ಲಿ ಅಂಗ ಸಂಸ್ಕಾರ, ಲಿಂಗಸಂಸ್ಕಾರ ಎಂದು ನಿರ್ದೇಶಿಸಲಾಗಿದೆ. ಪ್ರಕೃತಿ ಸಂಸ್ಕಾರ ಸಮಷ್ಟಿ-ವ್ಯಷ್ಟಿ ಎಂದು ಎರಡು ತೆರ. ಪ್ರಕೃತಿ ಸಮಷ್ಟಿಯೂ ಇದೆ. ವ್ಯಷ್ಟಿಯೂ ಇದೆ. ಅಂತೆಯ ಪುರುಷ ಸಂಸ್ಕಾರವೂ ಇಬ್ಬಗೆಯಾಗಿದೆ.

ಅಚರವಾದುದೆಲ್ಲ ಪ್ರಕೃತಿ; ಚರವಾದುದೆಲ್ಲ ಪುರುಷ. ಜಾಗತಿಕ ಜಡ ವಸ್ತುಗಳೆಲ್ಲ ಪ್ರಾಕೃತಿಕ ಸಂಸ್ಕಾರವನ್ನು ಪಡೆದು ಆವಿಷ್ಕಾರವಾಗಿವೆ. ಜಂಗಮ ಜೀವಿಗಳೂ ಪ್ರಾಕೃತಿಕ ಸಂಸ್ಕಾರವನ್ನು ಪಡೆದು ಆವಿಷ್ಕಾರವಾಗಿವೆ. ಈ ಸೃಷ್ಟಿಯ ಸಮಷ್ಟಿ ಸಂಸ್ಕಾರ ನಿಸರ್ಗ. ಇದೊಂದು ಸರ್ಗ; ಅಂದರೆ ಒಂದು ಘಟ್ಟ, ಒಂದು ಅಧ್ಯಾಯ. ಇಷ್ಟಕ್ಕೆ ಸಂಸ್ಕಾರ ಸಮಾಪ್ತವಾಗುವುದಿಲ್ಲ. ಒಂದು ವೇಳೆ ಆದರೆ ಅದು ಪ್ರಗತಿ ಸೂಚಕವಲ್ಲ.

ಪ್ರತಿ ಜಡಾಜಡ ವಸ್ತುವಿಗೂ ಪುರುಷ ಮತ್ತೆ ತನ್ನದೇ ಆದ ಸಂಸ್ಕಾರವನ್ನು ಕೊಡುತ್ತಾನೆ. ಇದರಿಂದ ಪ್ರತಿ ವಸ್ತುವಿಗೂ ಕಲೆ, ನೆಲೆ ಬೆಲೆಗಳುಂಟಾಗುತ್ತವೆ. ಸಂಸ್ಕಾರವೆ ಒಂದು ಕಲೆ ! ಸಂಸ್ಕರಣವೆ ಜೀವನ. ಚಿನ್ನ ಧಾನ್ಯ ಆಗುವುದು ಪ್ರಾಕೃತಿಕ ಸಂಸ್ಕಾರ. ಅವು ಮರಳಿ ಆಭರಣ ಅನ್ನ ವಾಗುವುದು ಪೌರುಷ ಸಂಸ್ಕಾರ. ಚಿನ್ನ ಧಾನ್ಯಗಳಿಗು ಆಭರಣ ಅನ್ನಗಳಿಗೂ ಇರುವ ಕಲೆ ನೆಲೆ ಬೆಲೆಗಳ ತರ–ತಮಗಳನ್ನು ಗಮನಿಸಬೇಕು. ಪುರುಷ ಸಂಸ್ಕಾರದಿಂದ ಭೂತಿ ವಿಭೂತಿ-ಯಾಗುತ್ತದೆ; ಕೃತಿ ಸಂಸ್ಕೃತಿಯಾಗುತ್ತದೆ, ವಿಧಾನ ಸಂವಿಧಾನವಾಗುತ್ತದೆ. ಪದ ಸಂಪದ ವಾಗುತ್ತದೆ. ಭ್ರಮ ಸಂಭ್ರಮವಾಗುತ್ತದೆ. ಬಂಧ ಸಂಬಂಧವಾಗುತ್ತದೆ. ನುಡಿ ಸೂಳ್ನುಡಿಯಾಗುತ್ತದೆ. ಜೀವನ ಸಂಜೀವನ ವಾಗುತ್ತದೆ. ಸಂಸ್ಕಾರದ ಸಾಮರ್ಥ್ಯ ಅಂತಹದು.

ತಿದ್ದುವಿಕೆ ಶುದ್ಧವಿಸುವಿಕೆ ಪುಟ ಇಡುವಿಕೆ ನಯಗಾರಿಕೆ ಅಲಂಕರಿಸುವಿಕೆ ಒಪ್ಪ ಹಾಕುವಿಕೆ ಯೋಗ್ಯತೆಯನ್ನು ಬೆಳೆಸುವಿಕೆ ಇವಿಷ್ಟು ಸಂಸ್ಕಾರ ಶಬ್ದಕ್ಕಿರುವ ಅರ್ಥಗಳು. ಇದರಿಂದ ಸ್ಥಿತಿ ಸಂಸ್ಥಿತಿಯಾಗುತ್ತದೆ. ಅಂದರೆ ಸುಸ್ಥಿತಿ ಅಳ-ವಡುತ್ತದೆ. ಈ ಅರ್ಥವ್ಯಾಪ್ತಿಯಿಂದ ಸಂಸ್ಕಾರ ವ್ಯಾಪ್ತಿ, ಸಂಸ್ಕಾರ ದೀಪ್ತಿಗಳು ಅಭಿವ್ಯಕ್ತವಾಗುತ್ತವೆ.

ತರತರದ ಸಂಸ್ಕಾರಗಳ ಸಂಸ್ತರ ಮಾನವೀಯ ಜೀವನ, ಹುಟ್ಟನಿಂದ ಸಾಯುವವರೆಗೂ ಒಂದಿಲ್ಲೊಂದು ಸಂಸ್ಕಾರ ನಡದೇ ಇರುತ್ತದೆ. ಸಂಸ್ಕಾರವೆ ಜೀವನ ಅಸಂಸ್ಕಾರವೆ ಮರಣ. ಹುಟ್ಟುಸಾವುಗಳ ನಡುವಿನದೆ ಸ್ಥಿತಿ, ಸ್ಥಿತಿಯ ಜೀವಾಳವೇ ಗತಿ. ಸಂಸ್ಕಾರವಿಲ್ಲದಿದ್ದರೆ ಸ್ಥಿತಿ ದುಸ್ಥಿತಿಯಾಗುತ್ತದೆ; ಗತಿ ದುರ್ಗತಿಯಾಗುತ್ತದೆ; ಸ್ಥಿತಿ ಸುಸ್ಥಿತಿ, ಗತಿ ಪ್ರಗತಿ ಆಗಬೇಕಾದರೆ ಸಂಸ್ಕಾರ ಅಗತ್ಯ ಅದರಲ್ಲಿಯೂ ಸುಸಂಸ್ಕಾರ ಅಗತ್ಯ. ಸ್ಥಿತಿಗೇಡಿ ಗತಿಗೇಡಿ ಆಗದಂತಿರಬೇಕಾದರೆ ಸುಸಂಸ್ಕಾರದ ಅಗತ್ಯ ಅದೆಷ್ಟಾದರೂ ಇದೆ.

ಕುಂಬಾರ ಮಣ್ಣಿಗೆ ಸಂಸ್ಕಾರವನ್ನಿತ್ತು ಮಡಕೆಯನ್ನಾಗಿಸ್ಸುತ್ತಾನೆ. ಶಿಲ್ಪಿ ಕಲೆಗೆ ಸಂಸ್ಕಾರ ವನ್ನಿತ್ತು ಶಿವನನ್ನಾಗಿಸುತ್ತಾನೆ. ಮಣ್ಣು ಕಲ್ಲುಗಳ ಮಾತೇ ಹೀಗಿರುವಾಗ ಇನ್ನುಳಿದವುಗಳ ಮಾತನ್ನೇನು ಹೇಳುವುದು ? ಗುರುದೇವನು ಉದಕಕ್ಕೆ ಸಂಸ್ಕಾರವನ್ನು ಕೊಟ್ಟು ಪಾದೋದಕವನ್ನಾಗಿಸುತ್ತಾನೆ; ಪದಾರ್ಥಕ್ಕೆ ಸಂಸ್ಕಾರವನ್ನು ಕೊಟ್ಟು ಪ್ರಸಾದವನ್ನಾಗಿಸುತ್ತಾನೆ, ಭವಿಗೆ ಸಂಸ್ಕಾರ-ವನ್ನು ಕರುಣಿಸಿ ಭಕ್ತ ನನ್ನಾಗಿಸುತ್ತಾನೆ. ಎಲ್ಲ ಉದ್ಯಮಗಳು ಒಂದಿಲ್ಲ ಒಂದರ ಸಂಸ್ಕಾರವನ್ನೆ ಉದ್ಬೋಧಿಸುತ್ತವೆ. ಸಂಸ್ಕಾರ ಪ್ರಭಾವವನ್ನೆ ಕಾರ್ಯಗಳು ಕಾಣು-ವಂತೆಸಗುತ್ತವೆ.

ಸಂಸ್ಕಾರ ಅದೊಂದು ಸತ್ಕಲೆ. ಕಲೆಗೆ ಬೇಕಾಗುವಂತೆ ಇದಕ್ಕೂ ಹಲವಾರು ಪರಿಕರಗಳು ತಂತ್ರಗಳು ಬೇಕು. ಆದರೆ ಇದರದೆ ಆದ ಪರಿಕರಗಳು ತಂತ್ರಗಳು ಬೇರೆ ! ಸಂಸ್ಕಾರದಿಂದ ಆವಿಷ್ಕಾರವಾಗುವ ಸೌಂದರ್ಯವೆ ಬೇರೆ ! ಕೌಶಲ್ಯವೆ ಬೇರೆ ! ನಾದವೆ ಬೇರೆ ! ಸಂಸ್ಕಾರದಿಂದ ಪ್ರವೃತ್ತಿ ಪ್ರಕೃಷ್ಟ ವೃತ್ತಿ–ಪ್ರಬುದ್ಧ ವೃತ್ತಿಯಾಗಿ ಏರ್ಪಡುತ್ತವೆ. ಸಂಕುಚಿತತೆ ತೊಲಗಿ ವಿಕಾಸತೆಯುಂಟಾಗುತ್ತದೆ. ವಿಶುದ್ಧತೆ ಪ್ರಬುದ್ಧತೆಗಳುಂಟಾಗುತ್ತವೆ. ಚನ್ನಿಲ್ಲದ್ದನ್ನು ಚನ್ನಾಗಿ ಮಾಡುವುದೆ ಸಂಸ್ಕಾರದ ಗುರಿ, ಸಿರಿ.

ಸಂಸ್ಕಾರ ದೈಹಿಕ, ಮಾನಸಿಕ, ಬೌದ್ಧಿಕ, ಪ್ರಾಣಾತ್ಮಿಕ, ಭಾವಿಕ, ಜೈವಿಕ, ಎಂದು ಆರು ಬಗೆಯಾಗಿದೆ. ಪಾರ್ಥಿವ, ಸಾಲೀಲ, ಆಗ್ನೇಯ, ವಾಯುವೀಯ, ಆಕಾಶೀಯ, ಆತ್ಮೀಯ ಎಂದೂ ಹೇಳುವುದುಂಟು. ಈ ಆರನ್ನೂ ಒಬ್ಬುಳಿ ಮಾಡಿ ಕ್ರಿಯಾಸಂಸ್ಕಾರ, ಮಂತ್ರ ಸಂಸ್ಕಾರ, ವೇಧ ಸಂಸ್ಕಾರ ಎಂದು ಮೂರು

ತೆರನಾಗಿ ಮಿತಗೊಳಿಸಲಾಗಿದೆ. ಇವೆಲ್ಲ ಸಂಸ್ಕಾರಗಳನ್ನು ಶ್ರೀಗುರುದೇವನು ನೆರವೇರಿಸುತ್ತಾನೆ. ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರುವಾಗಿ ಸ್ಥೂಲ, ಸೂಕ್ಷ್ಮ, ಕಾರಣ ತನುಗಳಿಗೆ ಶಿವದೀಕ್ಷಾ ಸಂಸ್ಕಾರವನ್ನಿತ್ತು ಪರಿವಿಡಿದು ತ್ಯಾಗಾಂಗ, ಭೋಗಾಂಗ, ಯೋಗಾಂಗಗಳನ್ನಾಗಿಸುತ್ತಾನೆ. ಅಂತೆಯೆ ತ್ರಿವಿಧಾತ್ಮರಿಗೆ ಸಂಸ್ಕಾರವನ್ನಿತ್ತು ಇಷ್ಟ (ಕ್ರಿಯಾ) ಲಿಂಗ, ಪ್ರಾಣ (ಜ್ಞಾನ) ಲಿಂಗ, ಭಾವ (ತೃಪ್ತಿ) ಲಿಂಗಗಳನ್ನಾಗಿಸುತ್ತಾನೆ. ಪಾರ್ಥಿವಾದಿ ಷಡಂಗ ಸಂಸ್ಕಾರ ಮಾಡಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂದೆನಿಸಿಸುತ್ತಾನೆ. ಈ ಷಂಡಗಗಳಲ್ಲಿ ಪರಿವಿಡಿದು ಆಚಾರಲಿಂಗ ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗಗಳನ್ನು ಪ್ರತಿಷ್ಠಿಸುತ್ತಾನೆ ಇದು ಶಿವಾದ್ವೈತ ಮತ ಶ್ರೀಗುರು ಕರುಣಿಸುವ ಸಂಸ್ಕಾರ ಪ್ರಕ್ರಿಯ.

ಇನ್ನು ಸಾಮಾನ್ಯವಾಗಿ ದೈಹಿಕ ಬೌದ್ಧಿಕ ಮಾನಸಿಕ ಪ್ರಾಣಾತ್ಮಿಕ ಸಂಸ್ಕಾರ ಗಳನ್ನು ತಾಯಿ, ಶಿಕ್ಷಕ, ಯೋಗಿ ಇವರು ನೆರವೇರಿಸುತ್ತಾರೆ. ಇವುಗಳಲ್ಲಿ ಭಾವ ಸಂಸ್ಕಾರ ಜೀವ ಸಂಸ್ಕಾರಗಳು ಉಂಟಾಗುವದಿಲ್ಲ. ಬೌದ್ಧಿಕ ಸಂಸ್ಕಾರವನ್ನು ಜ್ಞಾನಿಯೂ ಮಾಡಬಲ್ಲ. ಸಾಂಖ್ಯರು ತಾತ್ತ್ವಿಕ ಸಂಸ್ಕಾರವನ್ನು ನಿರ್ವಹಿಸು ತ್ತಾರೆ. ಅಂದರೆ ಇಪ್ಪತ್ತೈದು ತತ್ತ್ವ ಸಂಸ್ಕಾರ ಅವರದು. ಮೂವತ್ತಾರು ತತ್ತ್ವ ಸಂಸ್ಕಾರ ವೀರಶೈವರದು. ಮಹಾನುಭಾವರು ಮಾತ್ರ ಭಾವ-ಜೀವಿಗಳ ಸಂಸ್ಕಾರ ವನ್ನು ಮಾಡಲು ಸಮರ್ಥರಾಗಿರುತ್ತಾರೆ. ಆದರೆ ಅವರು ಆಚಾರ್ಯರಾಗಿರಬೇಕು. ಇಲ್ಲವಾದರೆ ಸಾಧ್ಯವಾಗದು. ಸಂಸ್ಕಾರ ನಿರ್ವಹಣೆಗೆ ಆಚಾರ್ಯತ್ವ ಅನಿವಾರ್ಯ. ಒಟ್ಟಿನಲ್ಲಿ ಬಹಿರಂಗ ಅಂತರಂಗಗಳೆರಡರ ಪರಿಶೋಧನವೆ ಸಂಸ್ಕಾರದ ಧ್ಯೇಯ.

ಸಂಸ್ಕಾರ ಪರಿಷ್ಕಾರದಿಂದ ಪ್ರಾರಂಭವಾಗುತ್ತದೆ. ಆವಿಷ್ಕಾರದಲ್ಲಿ ಪರಿ-ಸಮಾಪ್ತಿಗೊಳ್ಳುತ್ತದೆ. ಪರಿಷ್ಕಾರವೆಂದರೆ ಚನ್ನಾಗಿ ಶೋಧಿಸುವಿಕೆ, ಪರಿಶೀಲಿಸುವಿಕೆ, ಉಭಯಾಂಗಗಳನ್ನು ಸೋಸಿ ಸೋಸಿ ಸರಿಪಡಿಸುವಿಕೆ, ಪರಿಶೋಭಿಸುವಂತೆ ಅಂದರೆ ಪ್ರಕಾಶಿಸುವಂತೆ ಮಾಡುವಿಕೆ ಹೀಗೆ ಮಾಡುವುದರಿಂದ ಅಂಗ-ಆತ್ಮಗಳಲ್ಲಿ ಒಂದು ಹೊಸ ಶಕ್ತಿಯ ಆವಿಷ್ಕಾರವಾಗುತ್ತದೆ. ಅಂದರೆ ಪ್ರಕಟವಾಗುತ್ತದೆ. ಪ್ರಾಸಾದಿಕತೆ ಉಂಟಾಗುತ್ತದೆ. ಹೊಸ ಆಯಾಮ, ಹೊಸ ತಿರುವು ಉಂಟಾಗುತ್ತದೆ.

ನಾಮ ರೂಪ ಗುಣ ಕ್ರಿಯೆಗಳು ಪರಿವರ್ತನಗೊಳ್ಳುವುದೆ ಸಂಸ್ಕಾರದ ಮುಖ್ಯ ಲಕ್ಷಣ. ಎಲ್ಲ ಸಂಸ್ಕಾರಗಳಿಗೂ ಈ ಲಕ್ಷಣ ಸಮನ್ವಯವಾಗುತ್ತದೆ. ಎಲ್ಲ ವಸ್ತುಗಳಿಗೂ ಸಮನ್ವಯವಾಗುತ್ತದೆ. ನಿದರ್ಶನಕ್ಕಾಗಿ ಒಂದು ನೆಲ್ಲನ್ನು ತೆಗೆದುಕೊಳ್ಳಿ. ಅದರ ಮೇಲಿನ ಹೊಟ್ಟನ್ನು ತೆಗೆಯುವುದು ಒಂದು ಸಂಸ್ಕಾರ. ಅದನ್ನು ತೆಗೆದ ಬಳಿಕ ಅದು ತನ್ನ ಮೊದಲಿನ ಹೆಸರನ್ನು ರೂಪವನ್ನು ಕಳೆದುಕೊಳ್ಳು ತ್ತದೆ. ಅದಕ್ಕೆ ಅಡುವ ಮತ್ತೊಂದು ಸಂಸ್ಕಾರವನ್ನು ಕೊಟ್ಟರೆ ಅದರ ಮೊದಲಿನ ಕಠಿಣ ಗುಣ ಹೋಗುತ್ತದೆ; ಮೃದುವಾಗಿ ಅನ್ನವೆನಿಸುತ್ತದೆ. ಅದಕ್ಕೆ ಮೂರನೆಯ ತಾಂತ್ರಿಕ ಸಂಸ್ಕಾರವನ್ನು ಕೊಟ್ಟರೆ ಸಮರ್ಪಣ ಕ್ರಿಯೆಗೆ ಒಗ್ಗುತ್ತದೆ, ಪ್ರಸಾದವೆನಿ

ಸುತ್ತದೆ. ಅಂತೆಯೇ ಮಾನವನ ಸ್ಥೂಲ ತನುವಿಗೆ ಕ್ರಿಯಾಸಂಸ್ಕಾರವನ್ನಿತ್ತರೆ ಕಾರ್ಮಿಕಮಲ ಕಳೆದು ತ್ಯಾಗಾಂಗವೆನಿಸುತ್ತದೆ. ಜೊತೆಗೆ ರೂಪು ಗುಣ ಕ್ರಿಯೆಗಳೂ ಮಾರ್ಪುಗೊಳ್ಳುತ್ತವೆ. ಸೂಕ್ಷ್ಮ ತನುವಿಗೆ ಅಂದರೆ ಮನಪ್ರಾಣಗಳಿಗೆ ಮಂತ್ರದೀಕ್ಷಾ ಸಂಸ್ಕಾವನ್ನಿತ್ತರೆ ಅದು ಭೋಗಾಂಗವೆನಿಸುತ್ತದೆ. ಅದರ ಗುಣಕ್ರಿಯೆಗಳು ಮಾರ್ಪುಗೊಳ್ಳುತ್ತವೆ. ಕಾರಣ ತನುವಿಗೆ ವೇಧಾಸಂಸ್ಕಾರವನ್ನಿತ್ತರೆ ಅದು ಯೋಗಾಂಗವೆನಿಸುತ್ತದೆ. ಮತ್ತು ಅದರ ಗುಣಕ್ರಿಯೆಗಳು ಬೇರ್ಪಡುತ್ತವೆ. ಪ್ರಾಕೃತಿಕ ನಾಮರೂಪಗಳು ಗುಣಕ್ರಿಯೆಗಳು ಉಂಟಾಗಿ ಒಂದು ಬಗೆಯ ಹೊಸ ಶಕ್ತಿಯ ಆವಿಷ್ಕಾರವಾಗುತ್ತದೆ.

ತ್ಯಾಗಾಂಗದಲ್ಲಿ ಕರ್ಮವಳಿದು ಕ್ರಿಯೆಯ ಆವಿಷ್ಕಾರ, ಭೋಗಾಂಗದಲ್ಲಿ ಮಾಯಾತ್ಮಕ ಅಜ್ಞಾನವಳಿದು ಜ್ಞಾನದ ಆವಿಷ್ಕಾರ, ಯೋಗಾಂಗದಲ್ಲಿ ಆಣವೀಯ ಮಲ ತೊಲಗಿ ವಿಭುತ್ವದ ಮತ್ತು ಅನುಭಾವಿಕದ ಆವಿಷ್ಕಾರವಾಗುತ್ತದೆ. ಹೀಗೆ ಪರಿವಿಡಿದು ಕ್ರಿಯಾಶಕ್ತಿ ಜ್ಞಾನಶಕ್ತಿ ಅನುಭಾವಗಳ ಆವಿಷ್ಕಾರವಾಗುವುದೇ ಸಂಸ್ಕಾರದ ಧ್ಯೇಯ. ಈ ತ್ರಿವಿಧ ಶಕ್ತಿಗಳ ಪರಿಷ್ಕಾರ ಆವಿಷ್ಕಾರಗಳಿಂದ ಪ್ರಗತಿ ಜೀವನ, ಪ್ರಬುದ್ಧ ಜೀವನ. ಇನ್ನು ಷಡಂಗ ಸಂಸ್ಕಾರದಲ್ಲಿ ಷಟ್‌ಶಕ್ತಿಗಳ ಪರಿಷ್ಕಾರ ಆವಿಷ್ಕಾರಗಳುಂಟಾಗುತ್ತವೆ. ಆಗ ಪೂರ್ಣ ಜೀವನ ಪೂರ್ಣವಾಗುತ್ತದೆ. ಪರಾವಾಕ್ ಶಕ್ತಿ ಪ್ರಾದುರ್ಭಾವವಾಗಿ ಚಿತ್ಕ್ರಿಯಾಶಕ್ತಿ ಪ್ರಾದುರ್ಭಾವವಾಗಿ ನುಡಿ ನಡೆ ಎಲ್ಲ ಬಗೆಯಲ್ಲಿ ಚನ್ನವಾಗುತ್ತದೆ. ಇವೆರಡೂ ಮಾನವೀಯ ಮೌಲ್ಯಗಳು. ಆ ಚನ್ನ ನಡೆ ನುಡಿಗಳಿಂದ ಅಪೂರ್ವ ಪ್ರತಿಭೆ ಪ್ರಜ್ವಲಿಸುತ್ತದೆ. ಆ ಪರಾಶಕ್ತಿಯುಳ್ಳ ವಾಣಿ, ಆ ಚಿತ್ಕಳೆಯುಳ್ಳ ಕ್ರಿಯಾಚಾರ ವಿಚಾರ ಮತ್ತು ಅನುಭವ ಉಂಟಾಗುವುದಕ್ಕಿಂತ ಬೇರೆ ಮಹೋನ್ನತ ಮಾನವೀಯತೆಯುಂಟೆ ?

ಮಾನವ ಪ್ರಗತಿ ಪಥದಲ್ಲಿ ಮುನ್ನಡೆಯಬೇಕೆಂದರೆ ಮೊದಲು ತನಗುಂಟಾದ ಪ್ರಾಕೃತಿಕ ಸಂಸ್ಕಾರ ಏತಕ್ಕೂ ಸಾಲದು. ಶ್ರೀಗುರು (ಪೌರುಷ) ಸಂಸ್ಕಾರಕ್ಕೆ ಒಳಗಾಗದಲ್ಲಿ ಪಶುವಾಗಿ ಬಾಳಬಲ್ಲನು. ಇದಕ್ಕೆ ಗಿರಿಜನ, ಹರಿಜನ, ಜೀವನ ನಿದರ್ಶನ. ಅಲ್ಲದೆ ಆದಿ ಮಾನವ ಹೇಗಿದ್ದನೆಂಬುದನ್ನು ಅರಿಯದ ಐತಿಹಾಸಿಕರಿಲ್ಲ. ಇಂದಿನ ನಾಗಿರಕತೆ ಒಂದು ಬಗೆಯ ಸಾಂಸ್ಕಾರಿಕ ಫಲ. ಇದು ಕೇವಲ ಆದಿಭೌತಿಕ ಸಂಸ್ಕಾರ ! ಈ ನಾಗರಿಕತೆಯಿಂದ ಮಾನವೀಯ ಸಂಸ್ಕೃತಿ ವೈಗೂಡಿ ಬಾರದು. ಇದಕ್ಕಾಗಿ ಆಧ್ಯಾತ್ಮಿಕ ಸಂಸ್ಕಾರ ಅಗತ್ಯ. ಶಿಕ್ಷಣ ಸಂಸ್ಕೃತಿ ಆಚಾರ ವಿಚಾರ ಸ್ವಾನುಭವ ಇವೆಲ್ಲ ಆಧ್ಯಾತ್ಮಿಕ ಸಂಸ್ಕಾರದಲ್ಲಿ ಸಮಾವೇಶಗೊಳ್ಳುತ್ತವೆ. ಇದನ್ನು ಬೋಧಿಸುವವರು ಗುರುಗಳೆನಿಸುತ್ತಾರೆ ಶಿಕ್ಷಣಕ್ಕೆ ಶಿಕ್ಷಣಾಲಯಗಳು ಶಿಕ್ಷಕರು ಬೇಕಾಗುವಂತೆ, ಸಂಸ್ಕೃತಿಗೆ ಸದಾಚಾರಕ್ಕೆ ಮಠ ಮಂದಿರ ಆಶ್ರಮಾದಿಗಳು ಗುರುದೇವರುಗಳು ಬೇಕು. ಶಿಕ್ಷಕರಿಂದ ಬೋಧನೆ ಮಾತ್ರ ನಡೆಯುತ್ತದೆ. ಬೌದ್ಧಿಕ ನೈತಿಕ ಮಾತ್ರ ಉಂಟಾಗುತ್ತದೆ. ಗುರುದೇವ (ಆಚಾರ್ಯ) ನಿಂದ ಬೋಧನೆ ಶೋಧನಗಳೆರಡೂ ನಡೆಯುತ್ತವೆ. ಇದು ಸರ್ವಾಂಗೀಣ ಸಂಸ್ಕಾರ. ಪರಿಶುದತ್ತೆ

ಸರ್ವಾಂಗದಲ್ಲಿ ಆವಿಷ್ಕಾರವಾಗುತ್ತದೆ ಆ ಸರ್ವಾವಿಷ್ಕಾರವೆ ಸಂಸ್ಕಾರ.

ಸಂಸ್ಕೃತಿ ಪ್ರಧಾನವಾಗಿ ಬಾಹ್ಯಾಂಗನಿಷ್ಠ : ಶಿಕ್ಷಣ ಪ್ರಧಾನವಾಗಿ ಬೌದ್ಧಿಕ. ಸಂಸ್ಕಾರ ಸರ್ವಾಂಗನಿಷ್ಠ. "ಕುಳಿತು ಪೂಜಿಸುವರು, ಒಳಗೆ ಅಲ್ಲದಾಟವನಾಡುವರು" ಎಂಬೀ ಉಕ್ತಿಯಲ್ಲಿ ಸಂಸ್ಕೃತಿ ಏಕದೇಶೀಯವಾಗಿ ಪ್ರದರ್ಶಿತವಾಗಿದೆ. ಕುಳಿತು ಪೂಜಿಸುವುದೇನೋ ಸಂಸ್ಕೃತಿಯೆ! ಆದರೆ ಒಳಗಿನ ಮನದ ಹರಿದಾಟ ಅದು ಉತ್ತಮ ಕೃತಿಯಲ್ಲ; ಉತ್ತಮ ಸಂಸ್ಕಾರವಲ್ಲ. ಕೃತಿ ಸಮ್ಯಕ ಆಗಿದ್ದರೆ ಅದು ಸಂಸ್ಕೃತಿ ಕ್ರಿಯೆ ಜ್ಞಾನ ಇಚ್ಛೆ ಭಾವ ಜೀವ ಎಲ್ಲವೂ ಸಮ್ಯಕ ಆಗಿದ್ದರೆ ಸಂಸ್ಕಾರ.

ಸಂಸ್ಕಾರ ಪ್ರಕ್ರಿಯೆ ಅಪಾರ. ಅದನ್ನೆಲ್ಲ ಬಿತ್ತರಿಸಲು ಇಲ್ಲಿ ಅನವಸರ. ಅದು ಈ ಅಲ್ಪ ವ್ಯಾಪ್ತಿಗೆ ಮಿಂಚದ ಕಾರ್ಯ. ಹರವಾಗಿ ಅರಿಯ ಬೇಕೆನ್ನುವವರು ನಮದೇ ಆದ 'ಸಂಸ್ಕಾರ' ಎಂಬ ಹೆಸರಿನ ಹೊತ್ತಗೆಯನ್ನು ಓದಬೇಕು. ಈ ಬಗೆಗೆ ಅದು ಏಕೈಕಕೃತಿ.

ಪಶ್ಚಿಮಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆನು
ಸುತ್ತಿಮುತ್ತಿದ ಕತ್ತಲೆಯಲ್ಲ ಅತ್ತಿತ್ತ ಹರಿದು ಹೋದುದ ಕಂಡೆ
ಹತ್ತು ದಿಕ್ಕಿನ ಒಳ ಹೊರಗೆಲ್ಲ ಬೆಳಗಿನ ಮೊತ್ತವೇ ತುಂಬಿತ್ತ ಕಂಡೆ
ಮುಚ್ಚಿದ ಕಮಲಂಗಳೆಲ್ಲ ಬಿಚ್ಚಿ ಅರಳಾಗಿ;
ಹೊಚ್ಚ ಹೊಸ ಗಂಧ ದೆಸೆ ದೆಸೆಗೆ ಎಸೆದುದ ಕಂಡೆ
ಇಂತಿದರ ಕುಶಲವ ಕಂಡು ಬೆಱಗಾದೆನಯ್ಯಾ ಅಖಂಡೇಶ್ವರಾ.



# ಮಹಾಯೋಗಿ ವೇಮನ

—ಶ್ರೀಮತಿ ಮಧು ವೇಕಾರೆಡ್ಡಿ ಎಂ.ಎ.

"ಭೂಮಿಯಲ್ಲಿ ಪುಣ್ಯ ಪುರುಷರುದಿಸದಿರೆ
ಜಗಗಳ್ ಬೆಳಗುತಿಹವೆ ಹಗಲು ರಾತ್ರಿ
ಸರ್ವವೆಲ್ಲ ಬಯಲು ಅಲ್ಲಿಗಲ್ಲಿಗೆ ನೋಡೆ
ವಿಶ್ವತೋಭಿರಾಮ ಕೇಳೊ ವೇಮಾ"

ಭಾರತೀಯ ಸಾಹಿತ್ಯ ಪ್ರಪಂಚದಲ್ಲಿ ಚಿರಂತನ ಬೆಳಗುತ್ತಿರುವ ಧ್ರುವ ನಕ್ಷತ್ರ ಗಳಲ್ಲಿ ವೇಮನನೂ ಒಬ್ಬನೆಂದು ನಿಸ್ಸಂದೇಹವಾಗಿ ಹೇಳಬಹುದು. ಸಮಸ್ತ ಪ್ರಪಂಚವನ್ನೇ ಅರಿತ ಅವನ ಸರಳವಾದ, ಅರ್ಥಗರ್ಭಿತವಾದ ಸ್ಪಷ್ಟೋಕ್ತಿಗಳು ಪಂಡಿತ ಪಾಮರರ ಹೃದಯಗಳನ್ನು ಸಹಜವಾಗಿ ಸೆರೆಹಿಡಿಯಬಲ್ಲವು. ತನ್ನ ಅಪಾರವಾದ ಅನುಭವದ ಸಾರವನ್ನೇ "ಅಟವೆಲದಿ" ಎಂಬ ಛಂದಸ್ಸು ಮಾಧ್ಯಮ ದಲ್ಲಿ ರಚಿಸಿ, ಸಣ್ಣ ಸಣ್ಣ ವಚನಗಳ ಮುಖಾಂತರ ಸೂರೆಗೈದ ವೇಮನ ಇಂದಿಗೂ ಭಾರತೀಯರ ಕೃತಜ್ಞತೆಗೆ ಪಾತ್ರನಾಗಿದ್ದಾನೆ.

ವೇಮನ ಹುಟ್ಟುಕವಿ. ತೆಲಗು ಕವಿಗಳಲ್ಲಿ ಸೀಮಾಪುರುಷ. ಅವನು ಭರತ ದಂಡಿಯರಂತಹ ವಿದ್ವನ್ಮಣಿಗಳ ಹೆಸರು ಕೇಳಿದವನೂ ಅಲ್ಲ; ಭಗವದ್ಗೀತೆ ಬ್ರಹ್ಮ ಸೂತ್ರರಾಗಳಂತಹ ಪವಿತ್ರ ಗ್ರಂಥಗಳನ್ನು ಓದಿದವನೂ ಅಲ್ಲ. ಆದರೂ ಅವನ ಉದಾತ್ತ ವಿಚಾರಗಳು ಯಾವ ಉಚ್ಚಮಟ್ಟದ ಹೊತ್ತಿಗೆಯ ಪುಟಗಳನ್ನು ಮೀರಿ- ಸುವ ಸಾಮರ್ಥ್ಯ ಪಡೆದಿವೆ. ತೀಕ್ಷ್ಣಮತಿಯಾದ ಇವನಲ್ಲಿ ಸಮಾಜದ ಸ್ಥಿತಿ-ಗತಿ ಗಳನ್ನು ಚೆನ್ನಾಗಿ ಅರ್ಥೈಸಿಕೊಳ್ಳಬಲ್ಲ ಅಗಾಧವಾದ ಒಂದು ಶಕ್ತಿ ಇತ್ತು. ಅಂಥ ಶಕ್ತಿಯನ್ನು ಜಾಣ್ಮೆಯಿಂದ, ಪ್ರಭಾವಪೂರಿತವಾಗಿ ಪದ್ಯಗಳ ಮೂಲಕ ಹೊರ- ಹೊಮ್ಮಿಸುವ ಹೊಣೆಯನ್ನು ಅವನಲ್ಲಡಗಿದ ಅಪೂರ್ವವಾದ ಪ್ರತಿಭೆ ಕ್ಷಣದಲ್ಲಿ ನಿರ್ವಹಿಸುತ್ತಿತ್ತು. ಇವನದು ಸರಳವಾದ ಶುದ್ಧವಾದ ಭಾಷೆ ದೇಸೀ ಭಾಷೆಯಲ್ಲಿ ಅದ್ಭುತವಾದ ಪ್ರಭುತ್ವ ತನ್ನ ಅನಿಸಿಕೆಗಳನ್ನು ಅವನು ಬಯಲಿಗಿರಿಸಿದ್ದು ನಿಜಕ್ಕೂ ವಿದ್ವಜ್ಜನಕ್ಕಾಗಿ ಅಲ್ಲ; ನಿರಕ್ಷರ ಕುಕ್ಷಿಗಳಾದ ಹಳ್ಳಿಯ ಜನತೆಯ ಮನತಟ್ಟಿ, ಅವರನ್ನು ಎಚ್ಚರಗೊಳಿಸಬೇಕೆಂಬುದೇ ಅವನಿಗಿದ್ದ ಬಲವಾದ ಆಸೆ. ಅಂತೆಯೇ ಅವನು 'ಜನತೆಯ ಕವಿ' ಎನ್ನಿಸಿಕೊಂಡ. ಅವನ ಪದ್ಯಶೈಲಿಯಂತೂ ತುಂಬ

ಆಕರ್ಷಣೀಯ. ಒಮ್ಮೆ ಮೃದು–ಮಧುರ ಭಾವಬುಗ್ಗೆ ಚಿಮ್ಮಿದರೆ, ಮತ್ತೊಮ್ಮೆ ಕಠೋರ, ತೀವ್ರತೆಗಳ ಗುಡುಗು. ಈ ಕ್ಷಣದಲ್ಲಿ ಸೌಮ್ಯವಾದರೆ ಮರುಘಳಿಗೆಯಲ್ಲಿ ವಿಡಂಬನೆ ಮತ್ತೆ ಹಾಸ್ಯ ಹೀಗೆ ಅವನಲ್ಲಿ ನವರಸಗಳ ಸಮ್ಮಿಳನ ಅವನದು ಸ್ವತಂತ್ರ ಚೇತನ. ಇಲ್ಲಿಯವರೆಗೆ ದೊರೆತಿರುವ ಸುಮಾರು ೩೦೦೦ ಕ್ಕೂ ಹೆಚ್ಚಿನ ವಚನ ಗಳು ದೇಶದ ಮೂಲೆ ಮೂಲೆಯಲ್ಲಿ ಪಸರಿಸಿ, ವೇಮನನ ಉನ್ನತ ವ್ಯಕ್ತಿತ್ವ ತಿಳಿಯ ಪಡಿಸುವಲ್ಲಿ ಸಾರ್ಥಕತೆ ಪಡೆದಿವೆ.

ವೇಮನನ ಜಾತಿ, ಕಾಲ, ಜನ್ಮಸ್ಥಳ ಮೊದಲಾದ ವಿಷಯಗಳು ಇನ್ನೂ ವರೆಗೆ ಯಾವ ಒಂದು ಇತ್ಯರ್ಥವನ್ನೂ ಹೊಂದಿಲ್ಲ. ಅವನ ಪದ್ಯಗಳಿಂದಲೇ ಅವನು ಹುಟ್ಟು ವೀರಶೈವನೆಂದು ಊಹಿಸಲಾಗಿದೆ. ಜಾತಿಯಿಂದ 'ರೆಡ್ಡಿ ಕಾಪು' ಎಂದು ಹೇಳುವುದುಂಟು. ತಂದೆ ಕುಮರಗಿರಿ ವೇಮಾರೆಡ್ಡಿ, ತಾಯಿ ಮಲ್ಲಮ್ಮ ಜನ್ಮಸ್ಥಳ ಯಾವುದೆಂಬುದು ಸ್ಪಷ್ಟವಾಗಿ ಹೇಳಲಾಗದು. ಕಟಾರಪಲ್ಲಿಯೊ, ಕೊಂಡವಿಡೊ; ಕೃಷ್ಟಿಪಾಡಿಯೊ ಒಟ್ಟು ಮದ್ರಾಸಿನ ವಾಯವ್ಯಕ್ಕೆ ಕಡಪ ಜಿಲ್ಲೆಗೆ ಸೇರಿದಂತೆ ಸುಮಾರು ೨೦೦ ಮೈಲು ದೂರದಲ್ಲಿ ಇವನ ಹುಟ್ಟೂರು ಇರುವುದಂತೂ ನಿಶ್ಚಿತ. ಕಾಲದ ವಿಷಯವಾಗಿ ಸುಮಾರು ೧೬ ರಿಂದ ೧೮ ನೆಯ ಶತಮಾನಗಳ ಮಧ್ಯ, ಅದರಲ್ಲೂ ಇತ್ತೀಚಿನ ಸಂಶೋಧನೆಯಿಂದ ಪ್ರಾಯಶಃ ೧೬೫೦–೧೭೦೦ ನಡುವಿನ ಅವಧಿಯಲ್ಲಿಯೇ ಇವನ ಜನನವಾಗಿದೆ ಎಂದು ತಿಳಿದು ಬಂದ ಸಂಗತಿ ನಂಬಲರ್ಹ ವಾಗಿದೆ.

ವೇಮನ ತನ್ನ ಬಾಲ್ಯವನ್ನು ಸಕಲರ ಮುದ್ದಿನಲ್ಲಿ ಕಳೆದರೂ ಅತ್ತಿಗೆ ನರಸಾಂಬೆಯೇ ಅವನ ಸರ್ವಸ್ವ. ಯೌವನಕ್ಕೆ ಕಾಲಿಡುತ್ತಿದ್ದಂತೆ ವೇಶ್ಯೆಯ ಸಂಗ ದಿಂದ ಸಂಗದಿಂದ ಸದ್ಗುಣಿಯಾಗಿ ಉಳಿಯುವುದು ಸಾಧ್ಯವಾಗದೆ ಹೋಯಿತು. ಒಮ್ಮೆ ಮೋಹಿನಿಗೆ ಹಣದ ದಾಹ ತೀವ್ರವಾದಾಗ ವೇಮನ ತನ್ನ ಅತ್ತಿಗೆಯ ಸೌಭಾಗ್ಯದ ದ್ಯೋತಕವಾದ ರತ್ನ ಖಚಿತವಾದ ಮೂಗುತಿಯಿಂದ ಅವಳನ್ನು ತೃಪ್ತಿ ಪಡಿಸಬೇಕಾದ ಪ್ರಸಂಗ ಬಂದೊದಗುವದು, ಈಗ ವೇಮನಿಗೆ ಅತೀವ ವೇದನೆ ಯಾಗುತ್ತದೆ. ತನ್ನ ಮಮತೆಯ ಮೈದುನ ಪಶ್ಚಾತಾಪದ ಅಗ್ನಿಕುಂಡದಲ್ಲಿ ಬೇಯುತ್ತಿ ರುವುದನ್ನು ಕಂಡ ಅತ್ತಿಗೆ ನರಸಾಂಬೆ ಇವನ ಜ್ಞಾನೋದಯ ಕಾಲ ಸಮೀಪಿಸಿದೆ ಎಂದು ಅರಿತಳು. ಸಂತೋಷದಿಂದ ತನ್ನ ಅಮೂಲ್ಯ ಆಭರಣವನ್ನು ವೇಮನನ ಕೈಗಿತ್ತಳು.

ವೇಮನನ ಜೀವನಲ್ಲಿ ಅದೊಂದು ಘಟನೆ ಘಟಿಸದೆ ಹೋಗಿದ್ದರೆ, ಬಹುಶಃ ಕೊನೆಯವರೆಗೂ ಅವನೊಬ್ಬ ಕೀಳು ದರ್ಜೆಯ ಮನುಷ್ಯನಾಗಿಯೆ ಉಳಿಯುತ್ತಿದ್ದನೊ ಏನೊ! ಅವನು ಅತ್ತಿಗೆಯ ಕರಾರಿನಂತೆ ವೇಶ್ಯೆಯ ಸಂಪೂರ್ಣ ನಗ್ನ ದೇಹದಲ್ಲಿಯ ಅಂಗಾಂಗಗಳನ್ನು ದಿಟ್ಟಿಸಿದ. ಆ ಕ್ಷಣವೇ ಅವಳಲ್ಲಿ ಜಿಗುಪ್ಸೆಗೊಂಡ ಅವಳ ಸಂಗ ಬೆಂಕಿಯ ಸಂಗವಾಯಿತು. ಅವಳಿಂದ ಎಂದೆಂದಿಗೂ ಬಹುದೂರ ಸರಿದ ಮನದಲ್ಲಿ ವೈರಾಗ್ಯ ತಾಳಿದ ಅಂದಿನಿಂದಲೇ ಶಿವಶರಣರಂತೆ ಕಾಯಕದಲ್ಲಿ ನಿರತನಾದ.

ಮುಂದೆ ಒಂದು ದಿನ ಸ್ನೇಹಿತ ಅಭಿರಾಮಯ್ಯನ ಅನುಗ್ರಹದಿಂದ ಮಹಾ ಯೋಗಿಗಳಾದ ಲಂಬಿಕಾ ಶಿವಯೋಗಿಗಳ ದರ್ಶನ ತೆಗೆದುಕೊಳ್ಳುವ ಸುಯೋಗ ದೊರೆಯುತ್ತದೆ. ಮನನೊಂದ ವೇಮನ ಅವರ ಸದುಪದೇಶದ ನುಡಿಗಳಿಂದ ಮಂತ್ರಮುಗ್ಧನಾದ. ಯಾವುದೋ ದೈವಿಶಕ್ತಿ ಅವನ ದೇಹದಾದ್ಯಂತ ಸಂಚರಿಸಿ-ದಂತಾಯಿತು. ಆ ಕ್ಷಣವೇ ಅವನ ವ್ಯಕ್ತಿತ್ವಕ್ಕೆ ಇನ್ನೊಂದು ಹೊಸರೂಪ ಸಿಕ್ಕಿತು.

ಕಾಲಕ್ರಮೇಣ ವೇಮನ ಸಮಾಜದ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದು-ಕೊಳ್ಳತೊಡಗಿದ. ಅತಿ ಸಮೀಪದಿಂದ ಜನರ ಮನೋಧರ್ಮವನ್ನು ಗ್ರಹಿಸಿದ. ಧರ್ಮದ ಹೆಸರಿನಲ್ಲಿಯ ಬೂಟಾಟಿಕೆ, ಜಾತಿಭೇದ, ಬಡತನ, ಅನೇಕ ಕುರುಡು ನಂಬಿಕೆಗಳಿಗೆ ಮಾರುಹೋದ ಜನರ ಶೋಚನೀಯ ಅವಸ್ಥೆ ಕಂಡು ಅವನ ಮನಸ್ಸು ರೋಷಿಹೋಯಿತು. ಇವುಗಳಲ್ಲಿಯ ಸತ್ಯಾಸತ್ಯವನ್ನು ಬಯಲಿಗೆಳೆದು ಅವುಗಳನ್ನು ಜನರಿಗೆ ಚೆನ್ನಾಗಿ ಮನವರಿಕೆಯಾಗುವಂತೆ ಬಿಂಬಿಸಬೇಕು, ಸಮಾಜದಲ್ಲಿ ತನ್ನ-ಕೈಲಾದ ಮಟ್ಟಿಗೆ ಸುವ್ಯವಸ್ಥೆ ಸ್ಥಾಪಿಸಬೇಕು ಎಂಬ ಸದುದ್ದೇಶ ಹೊಂದಿದವನಾಗಿ ಬಲವಾದ ಕಳಕಳಿಯಿಂದ ಪರಿಶ್ರಮಿಸತೊಡಗಿದ. ಶ್ಲೇಷ್ಮ ಗಾದೆಗಳನ್ನೂ, ದೃಷ್ಟಾಂತಗಳನ್ನೂ ಒಳಗೊಂಡ ಸಂಕ್ಷಿಪ್ತವಾದ ಅವನ ವಚನಗಳನ್ನು ಗಮನಿಸಿ-ದಾಗ ಅವನ ಮನದ ಅಭಿಲಾಷೆ ಯಾವ ಮಟ್ಟದ್ದು ಎಂಬುದು ಸ್ಪಷ್ಟವಾಗಿ ಗೋಚರವಾಗದೆ ಇರದು. ಅವನ ಪ್ರತಿ-ಪದ್ಯಗಳ ಕೊನೆಗೆ ಕಂಡುಬರುವ "ವಿಶ್ವತೋಭಿರಾಮ ಕೇಳೊವೇಮಾ" ಎಂಬ ಅಂಕಿತವೇ ತನ್ನ ಬದುಕಿಗೊಂದು ಗುರಿ ತೋರಿದ ಗೆಳೆಯ ಅಭಿರಾಮಯ್ಯನ ಬಗೆಗಿರುವ ಉತ್ಕಟ ಪ್ರೇಮ, ಗೌರವಾಭಿಮಾನ ಗಳನ್ನು ವ್ಯಕ್ತಪಡಿಸುತ್ತದೆ.

ದೇವರ ಅಸ್ತಿತ್ವದ ಬಗೆಗಿರುವ ಆಗಿನ ಜನರಲ್ಲಿಯ ತಪ್ಪು ತಿಳುವಳಿಕೆ ಕಂಡು ವೇಮನನಿಗೆ ಬಹು ವಿಷಾಧವೆನಿಸುತ್ತದೆ. ಜನತೆಯ ಈ ಪೊಳ್ಳ ನಂಬಿಕೆ ಸರಿಪಡಿ-ಸುವುದಕೋಸ್ಕರ ವೇಮನ ಈ ರೀತಿ ಹೇಳುತ್ತಾನೆ 'ಶಿಲೆಯ ಕಂಡು ಜನರು ಶಿವನೆನು ವರು, ತಮ್ಮೊಳಿರ್ಪ ಶಿವನ ತಾನೇಕೆ ತಿಳಿಯರು ? ಶಿವನು ಅವರವರ ಆತ್ಮಗಳ-ಲ್ಲಿಯೇ ವಾಸಮಾಡಿದ್ದಾನೆ. ಪರಿಶುದ್ಧ ಮನದಿಂದ ಕೂಗಿದರೆ ಅವನು ಸದಾ ಓಗೊಡುತ್ತಲಿರುವನು. 'ನೆನೆದವರ ಮನದಲ್ಲಿ' ಎಂಬಂತೆ ಈಶ್ವರನ ಇರುವಿಕೆಯು. ಆತ್ಮಶುದ್ಧವಿಲ್ಲದ ಆಚಾರ ಮಾಡುವವನು ಶುದ್ಧ ವೇಷಧಾರಿ. 'ಭಾಂಡ ಶುದ್ಧವಿಲ್ಲದ ಅಡುಗೆಯೇಕೆ ? ಚಿತ್ತ ಶುದ್ಧವಿಲ್ಲದ ಶಿವಪೂಜೆ ಅದೇಕೆ' ? ಎಂದು ಮುಂತಾಗಿ ಖಂಡಿತವಾಗಿ ನುಡಿಯುತ್ತಾನೆ ವೇಮನ. ಇದೇ ವಿಚಾರವನ್ನೂ ಸರ್ವಜ್ಞನು ಹೀಗೆ ಹೇಳುತ್ತಾನೆ 'ಸಣ್ಣನೆಯ ಮಳಲೊಳಗೆ ನುಣ್ಣನೆಯ ಶಿಲೆಯೊಳಗೆ ಬಣ್ಣಿಸಿ ಬರೆವ ಪಟದೊಳಗೆ ಇರುವಾತ ತನ್ನೊಳಗೆ ಇರನೆ? ಇಲ್ಲಿ ವೇಮನ-ಸರ್ವಜ್ಞ ರಲ್ಲಿಯ ವಿಚಾರ ಸಾಮ್ಯವನ್ನು ನಾವು ಕಾಣಬಹುದು. ವೇಮನನ ಇಂತಹ ಧೈರ್ಯವಾದ, ಸ್ಪಷ್ಟ ಮಾತುಗಳಿಂದ ಆಗ ತಾವು ಧರ್ಮನಿಷ್ಠರು, ಮಡಿವಂತರು ಎಂದು ಹೇಳಿಕೊಳ್ಳುತ್ತಿದ್ದ ಡಂಭಾಚಾರಿಗಳು ತತ್ತರಿಸಿಹೋದರು. ಇವನ

ಧೈರ್ಯಕ್ಕೆ ಕೆಲವರು ತಲೆದೂಗಿದರೂ ಇನ್ನುಳಿದ ಕುಹಕಿಗಳು ಇವನೊಬ್ಬ ಧರ್ಮ ದೂಷ್ಷಕನಾದ ನಾಸ್ತಿಕ, ಅರೆಹುಚ್ಚ. ಇವನ ಹೆಸರು ಹೇಳುವುದೇ ಮಹಾಪಾತಕ ಎಂದು ಕೂಗಿಕೊಳ್ಳತೊಡಗಿದರು. ಇವರ ನಿರರ್ಥಕ ಬೊಬ್ಬೆಗೆ ಬೆಚ್ಚದೆ ವೇಮನ ಸಮಾಜ ಸುಧಾರಣೆಯ ಸಂಕಲ್ಪದ ಹಾದಿಯಲ್ಲಿ ನೂರಾರು ಅಡೆತಡೆಗಳನ್ನು ಲೆಕ್ಕಿಸದೆ ಮುಂದೆ ಸಾಗಿದ.

ವೇಮನ ವಿಗ್ರಹ ಪೂಜೆಯ ತೀವ್ರವಿರೋಧ 'ಅಡವಿ ಕಲ್ಲಳ್ ತಂದು ಕಾಲ ಕೈಗಳ ಮಾಡಿ ಉರವ ಶಿರವನ್ನೈದೆ ಮಾಡಿ ಜಡಶಿಲೆಗೆ ನಮಿಸುವರಲ್ಲಾ' ಇಂತಹ ತೋರಿಕೆಯ ಭಕ್ತಿ ಕುರಿತು ಬಸವಣ್ಣನವರೂ ಕೂಡ 'ಕಾಲೆಕಂಬ ದೇಹವೆ ದೇಗುಲ ಶಿರವೇ ಹೊನ್ನ ಕಳಶವಯ್ಯಾ' ಎಂದು ಹೇಳುವಲ್ಲಿ ಔಚಿತ್ಯವನ್ನು ಕಾಣಬಹುದು. 'ಭವ್ಯ ದೇವಾಲಯಗಳ ನಿರ್ಮಿಸಿ ದೇವಮೂರ್ತಿ ಪ್ರತಿಷ್ಠಾಪಿಸಿದವರು. ಕೊಲೆ-ಯಾದರು. ವಿಗ್ರಹಗಳನ್ನು ಒಡೆದವರು ಒಡೆಯರಾದರು. ಎನ್ನುತ್ತಾ ವೇಮನ ಈ ಆಡಂಬರ, ಈ ಮೂರ್ಖತನವನ್ನು ಮನಸ್ಸಿನಿಂದ ಬೇರುಸಹಿತ ಕಿತ್ತುಹಾಕದೆ ಸಮಾಜದ ಏಳ್ಗೆ ಖಂಡಿತವಾಗಿ ಕನಸಿನಮಾತು ಎಂಬುದನ್ನು ಜನರಿಗೆ ಒತ್ತಿ ಒತ್ತಿ ಹೇಳುತ್ತಿರುವುದನ್ನು ನೋಡಿದರೆ, ಇವನೊಬ್ಬ ಶ್ರೇಷ್ಠ ದಾರ್ಶನಿಕ ಎಂಬುದು ಸರ್ವರಿಗೆ ಮನವರಿಕೆಯಾಗುತ್ತದೆ.

ಉಪವಾಸ, ಮಂತ್ರ-ತಂತ್ರ, ವ್ರತ-ನಿಯಮ, ತೀರ್ಥಯಾತ್ರೆಗಳಿಂದ ಆ ಪರಮಾತ್ಮನಿಗೆ ನಿಜವಾದ ಭಕ್ತಿ ಅರ್ಪಿಸಿದಂತಾಗುವುದಿಲ್ಲ. ಸದ್ಗತಿ ದೊರಕದು, "ದಶಮಿ ಏಕಾದಶಿಯ ಮಾಡೆ ಅವರಲ್ಲಿ ದುರ್ಗುಣಗಳಿರವೆ'? ಅರಿಷಡ್ ವರ್ಗಗಳೇ ಮನೆಮಾಡಿ ಕೊಂಡಂಥ ಈ ಶರೀರವು ಬಾಹ್ಯನೋಟಕ್ಕೆ ಉಪವಾಸ ವನವಾಸ ಮಾಡಿದರೆಪ್ರಯೋಜನವಾಗುವುದೆ? "ಹುತ್ತದ ಮೇಲೆ ಹೊಡೆದರೆ ಅದರೊಳಿರ್ಪ ವಿಷ ಸರ್ಪಸಾಯ್ವುದೆ"?ಕಾಯಾ ವಾಚಾ ಮನಸಾ ಭಗವಂತನಲ್ಲಿ ಮೊರೆಹೊಕ್ಕಾಗಲೇ ನಿಜವಾದ ಸದ್ಗತಿ ಎಂಬ ಇದೇ ಮಾತನ್ನು "ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ, ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ, ಹದುಳಿಗರಲ್ಲದವರಲ್ಲಿ ಗಂಧಾಕ್ಷತೆ, ಅಱಿವುಕಣ್ದೆಱೆಯದವರಲ್ಲಿ ಆರತಿ, ಭಾವಶುದ್ಧವಿಲ್ಲದವರಲ್ಲಿ ಧೂಪ, ಪರಿಣಾಮಿಗಳಲ್ಲದವರಲ್ಲಿ ನೈವೇದ್ಯ, ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ| ಹೃದಯಕಮಲ ಅರಳದವರಲ್ಲಿ ಇರಲೊಲ್ಲೆಯಯ್ಯಾ ನೀನು" ಎಂದು ಅಕ್ಕಮಹಾದೇವಿ ತನ್ನ ಸರ್ವಸ್ವವನ್ನೇ ಚನ್ನಮಲ್ಲಿಕಾರ್ಜುನನ ಅಡಿದಾವರೆಗಳಿಗೆ ಅರ್ಪಿಸಿಬಿಟ್ಟಿದ್ದಳು. ವೇಮನ ಶಿವಶರಣರ ಆಚಾರ ವಿಚಾರಗಳನ್ನು ಚೆನ್ನಾಗಿ ತಿಳಿದು ಕೊಂಡು ಮೆಚ್ಚಿ ಕೊಂಡಿದ್ದನೆಂಬುದು ಕೆಲವು ವಚನಗಳಲ್ಲಿಯ ವಿಚಾರಧಾರೆಯನ್ನು ಗಮನಿಸಿದಾಗಕಂಡು ಬರುತ್ತದೆ. ತಾನು ನಿಂತ ಕಡೆಗೆ ದೈವವಿದೆಯೆಂದು ತಿಳಿದು 'ಒಡಲ ಶುದ್ಧಿ ಮಾಡಿ ಒಡೆಯನ ಕಾಣ್ಬುದು.' ಎಂಬುದಾಗಿ ವೇಮನ ಜನತೆಯ ಮನ ಮುಟ್ಟುವಂತೆ ಧರ್ಮದ ತಿರುಳನ್ನು ಅರುಹಿದ. ಕಾಶಿ, ಮಧುರೆ, ಗಯಾ, ಪ್ರಯಾಗವೆಂದು 'ತನುವಿನೊಳಿಪ್ಪ ತತ್ವವ ತಿಳಿಯದೆ ಕೈಕಾಸ ನೀಗುಟೆ' ಎಂದು ತೀರ್ಥಯಾತ್ರೆ

ನೆಪದಲ್ಲಿ ತಮ್ಮ ಅಮೂಲ್ಯವಾದ ಕಾಲಹರಣ ಮಾಡಿ ಅಲೆಯುವ ವೇಷಧಾರಿಗಳಿಗೆ ವೇಮನ ತನ್ನ ಕಟೋಕ್ತಿಗಳಿಂದ ಟೀಕಿಸಿದ್ದಾನೆ. ವೇಮನನಿಗೆ ಜನರಲ್ಲಿ ಅಂಧ-ಶ್ರದ್ಧೆಯನ್ನು ತೊಲಗಿಸಬೇಕೆಂಬ ಉದ್ದೇಶ ಬಲವಾಗಿತ್ತೆಂಬುದಕ್ಕೆ ಅವನ ನುಡಿಗಳೇ ಸಾಕ್ಷಿಯಾಗಿವೆ.

ಆಗ ಜನರಲ್ಲಿ ಜಾತಿಭೇದ ಹೆಚ್ಚಾಗಿ ಆಯಾ ಜಾತಿಗಳು ತಮ್ಮ ತಮ್ಮ ತೇಜಸ್ಸನ್ನೇ ಕಳೆದುಕೊಳ್ಳತೊಡಗಿದವು. ವೇಮನನಿಗೆ ತುಂಬ ಮರುಕವುಂಟಾಗಿ ಹೀಗೆ ಹೇಳುತ್ತಾನೆ. " ಮತಮನವರಿಯದವರು ಮತಗಳ ಕಲ್ಪಿಸಿ ಉರ್ವಿಯೊಳು ಜನರು ದುಃಖಿಸುವರು" ಕನಕದಾಸರ ಒಂದು ಸುಂದರವಾದ ಪದ್ಯ ಈ ಹೇಳಿಕೆಗೆ ಇನ್ನೂ ಪುಷ್ಟಿಕೊಡುತ್ತದೆ. ' ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯ-ನೇನಾದರೂ ಬಲ್ಲಿರಾ ' ಎಂದು ಮತವಾದಿ ಮಾನವರನ್ನು ಕೆಣಕಿದ್ದಾರೆ. ಇದೇ ಸಂದರ್ಭಕ್ಕೆ ಸರ್ವಜ್ಞಕವಿಯ ವಚನವನ್ನೂ ಉದಾಹರಣೆಗೆ ತೆಗೆದುಕೊಳ್ಳಬಹುದು. " ನಡೆವುದೊಂದೆ ಭೂಮಿ ಕುಡಿವುದೊಂದೆ ನೀರು ಸುಡುವಗ್ನಿ ಒಂದೆ ಇರುತಿರಲು ಕುಲಗೋತ್ರ ನಡುವೆ ಎತ್ತಣದು ಸರ್ವಜ್ಞ ".

ಗಾಂಧೀಜಿಯವರಂತೆ ವೇಮನನೂ ಅಸ್ಪೃಶ್ಯ ನಿರ್ಮೂಲನೆಗಾಗಿ ಬಹಳಷ್ಟು ಶ್ರಮಪಟ್ಟ. ' ರಾಮನಾಮ ಪಠಣದಿಂದ ವಾಲ್ಮೀಕಿ ಬೇಡನಿಂದ ದ್ವಿಜನಾದ ಕುಲವು ಮುಖ್ಯವಲ್ಲ. ಘನವು ಮುಖ್ಯವಯ್ಯಾ', 'ನಮ್ಮ ದೇಹವೇ ಮಾಂಸ, ಖಂಡ, ರಕ್ತಗಳಿಂದ ತುಂಬಿಕೊಂಡು ಅದರ ಮಧ್ಯದಲ್ಲಿಯೇ ನಾವಡಗಿದಾಗ ಹೊಲೆಯನ ಚಾಂಡಾಲ ನೆಂದೇಕೆ ನಿಂದಿಸುವಿರಿ ? ಎಂದು ವೇಮನ ಉಚ್ಚಕುಲಧಾರಿಗಳಿಗೆ ನಿರ್ಭಯವಾಗಿಕೇಳುವ ಪ್ರಶ್ನೆ.

ನಮ್ಮಲ್ಲಿ ಬಡವರ ಬಳಗವೇ ಹೆಚ್ಚಿದೆಯೆಂಬುದನ್ನು ಕಂಡುಕೊಂಡಿದ್ದ ವೇಮನ ಅವರ ವಿಷಯವಾಗಿ ಅಪಾರವಾದ ಸಹಾನುಭೂತಿ ಹೊಂದಿದವನಾಗಿದ್ದ. 'ಬಡತನವು ನಂದಿಸಲಾಗದ ಕಿಚ್ಚು' ಬಡತನವೇ ಪರಸ್ಪರ ವಿಶ್ವಾಸವನ್ನು ಅಳಿಯುವಂತೆ ಮಾಡುತ್ತದೆ. ಇದರಿಂದಾಗಿ ಕೆಲವೊಮ್ಮೆ ಮಾನ ಮರ್ಯಾದೆಗಳನ್ನು ಕಳೆದುಕೊಳ್ಳುವಂತಹ ಪ್ರಸಂಗಗಳೂ ಬರುವುದುಂಟು. ಅದಕ್ಕಾಗಿ ಆಗಿನ ಶ್ರೀಮಂತರಲ್ಲಿ, ದೀನ ದರಿದ್ರರಿಗೆ ಸಹಾಯ ಮಾಡಲು ನಮ್ರವಾಗಿ ಕೇಳಿಕೊಂಡ. ಬಡವರೇ ಇರಲಿ; ಶ್ರೀಮಂತರೇ ಇರಲಿ, ಅವರು ದುಡಿದು ತಿನ್ನಬೇಕು' ಎಂಬ ಕ್ರೈಸ್ತ ಸೂತ್ರದಲ್ಲಿ ಅವನು ಗೌರವವಿಟ್ಟವನು. ಬಸವಣ್ಣನವರು 'ಕಾಯಕವೇ ಕೈಲಾಸ' ಎಂದು ಹೇಳಿದರು. ಆ ಹೇಳಿಕೆಯಲ್ಲಿ ವಿಶ್ವಾಸವುಳ್ಳ ವೇಮನ 'ಕಾಯಕವೇ ಈಶ್ವರಾರ್ಚನೆ' ಎಂದು ತನ್ನ ಭಾಷೆಯಲ್ಲಿ ತಿಳಿಸಿದ. ಇದು ಅವನ ಮುಖ್ಯ ತತ್ವಗಳಲ್ಲಿ ಒಂದು.

ಹೆಣ್ಣು ಒಬ್ಬ ಮಾಟಗಾತಿ, ಕೆಡಕಿನ ಕಿಡಿ, ಪುರುಷನ ಅವನತಿಗೆ ಅವಳೇ ಕಾರಣ, 'ಕಾಸು ಕಂಡು ಪತಿಯ ಕಾಮಿಸಿ ಬರುವಳು', 'ಕಾಡುವ ಹೆಂಡತಿ ಕಿವಿ ಹೊಕ್ಕ ಜೇನುನೊಣ, ಕಣ್ಣಿನಲ್ಲಿ ಬಿದ್ದ ಮರುಳು ಕಣ '....ವೇಮನ ಹೆಣ್ಣುಮಕ್ಕಳ

ಗೌರವಿಸುವ ಅತ್ತಿಗೆ, ತಾಯಿಯರು ಹೆಣ್ಣೆಂಬುದನ್ನು ಮರೆತು ಈ ರೀತಿ ಹೆಣ್ಣನ್ನು ದೂಷಿಸಿರುವಲ್ಲಿ ಅವನು ವೇಶ್ಯೆಯ ಸಂಗದಿಂದ ಪಡೆದ ಕಟು ಅನುಭವ, ದಾಂಪತ್ಯ ಜೀವನದಿಂದುಂಟಾದ ನಿರಾಶೆಗಳೇ ಕಾರಣವೆಂದು ನಿಸ್ಸಂದೇಹವಾಗಿ ಹೇಳ ಬಹುದು.

ವೇಮನನ ಆಧ್ಯಾತ್ಮಿಕ ವಿಚಾರಗಳು ತುಂಬ ಕ್ಲಿಷ್ಟ. 'ನಮ್ಮ ದೇಹ ನೀರು ಗುಳ್ಳೆಯಂತೆ; ಮಣ್ಣಿನ ಮಡಿಕೆಯಂತೆ' ಇಂದು ಇದ್ದು ನಾಳೆ ಅಳಿಯುವ ಈ ನಶ್ವರ ದೇಹಕ್ಕಾಗಿ ಮನುಷ್ಯನ ಹೋರಾಟ ಎಂತಹದು ! ಏಕಾಗ್ರತೆಯಿಂದ ಶುದ್ಧ ಮನಸ್ಸಿನಿಂದ ಧ್ಯಾನ ಮಾಡಿದಾಗ ಆತ್ಮ ಸಾಕ್ಷಾತ್ಕಾರ ಸಾಧ್ಯ. 'ಜ್ಞಾನಕ್ಕೆ ಮೀರಿದ ಜ್ಞಾನ', 'ಆಕಾಶದೊಳಗಣ ಆಕಾಶ', 'ದೇಹದೊಳಗಿನ ಆತ್ಮ, ಆತ್ಮ ದೊಳಗಿನ ದೇಹ', 'ಘಟದೊಳಗಿನ ಜ್ಯೋತಿ', 'ಚೇತನವಾದ ವ್ಯಕ್ತರೂಪವೇ ಪ್ರಾಣ', 'ನಾನು ನೀನೇ, ನೀನು ನಾನೇ— ಇವೆಲ್ಲ ಅವನ ಆಧ್ಯಾತ್ಮ ಭಾವನೆ ಗಳಲ್ಲಿಯ ಕೆಲವು ಬಿಂದುಗಳು ಮಾತ್ರ. ಮನುಷ್ಯನು ಇಂದ್ರಿಯಗಳಿಂದುಂಟಾಗುವ ಆವೇಶದ ಜ್ವಾಲೆಯನ್ನು ಆಧ್ಯಾತ್ಮಿಕ ಭಾವನೆಗಳಿಗೆ ಪರಿವರ್ತಿಸಬೇಕು. ಮೋಕ್ಷ ಸಾಧನೆಗೆ ಇದು ವೇಮನ ತೋರಿದ ಸನ್ಮಾರ್ಗ, ಸುಲಭಮಾರ್ಗ.

ವೇಮನ ಸಮಾಜದಲ್ಲಿಯ ಇನ್ನೂ ಕೆಲವು ವಿಷಯಗಳ ಬಗೆಗೆ ಲಕ್ಷ್ಯ ವಹಿಸಿ ದ್ದಾನೆ. 'ಲೋಭಿಯನ್ನು ಕೊಲ್ಲಬೇಕಾದರೆ ಅವನಿಗೆ ದಾನ ಮಾಡು' ಇದು ಅವನ ಹಾಸ್ಯ ಪ್ರವೃತ್ತಿಯನ್ನು ಎತ್ತಿ ತೋರಿಸಿದರೆ, 'ಗಂಗಾ ಸ್ನಾನದಿಂದ ಮೋಕ್ಷ ಸಾಧಿಸುವಿರಾದರೆ ಮೀನುಗಳೂ ಮೋಕ್ಷ ಸಂಪಾದಿಸುತ್ತವಲ್ಲವೆ ? ಇಲ್ಲಿ ಅವನ ಶೈಲಿಯಲ್ಲಿಯ ಅಣಕ ವ್ಯಕ್ತವಾಗುತ್ತದೆ. 'ಶೂದ್ರನ ಮಗ ವಶಿಷ್ಠ ಶ್ರೇಷ್ಠ ಬ್ರಾಹ್ಮಣ ಹೇಗಾದ?' 'ಗೋವಳಿಗರ ಮನೆಯ ಹಾಲು, ಬೆಣ್ಣೆ ಕದಿಯುವ ಬಾಲ ಕೃಷ್ಣ ಪರಮಾತ್ಮ ಹೇಗಾದ ?' ಇಂಥ ವಿಡಂಬನೆಯ ಆಸ್ಫೋಟನೆಗಳೇನಕವು ಅವನ ಮಹಾನ್ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಕೆಲ ಉದಾಹರಣೆಗಳು.

ವೇಮನನ ಗಂಭೀರವಾದ ನೀತಿಯ ವಚನಗಳು ಲೋಕದ ಜನತೆಗೆ ಮುಸು ಕಿರುವ ಗಾಢಾಂಧಕಾರವನ್ನು ಹೊಡೆದೋಡಿಸುವ ಪ್ರಜ್ವಲವಾದ ದಾರಿದೀಪಗಳಾಗಿವೆ ಪ್ರತಿಯೊಬ್ಬನೂ ಯೋಗಿಯಾಗುವುದು ಸಾಧ್ಯವಾಗದಿದ್ದರೆ ಒಳ್ಳೆಯ ನಾಗರಿಕ ನಾಗಬಹುದು. ವಿಧೇಯ ಶ್ರದ್ಧೆಯುಳ್ಳ ವಿದ್ಯಾರ್ಥಿಯಾಗಿ, ಒಳ್ಳೆಯ ಕಾಯಕದಲ್ಲಿ ತತ್ಪರನಾಗಿ, ಯಾವುದೇ ಸಂದರ್ಭದಲ್ಲಿಯೂ ಹಿಂಸಾಚರಣೆಗೆ ಮನಸ್ಸು ಹಾಕದೆ ಜೀವನ ಸಾಗಿಸಿದ್ದಾದರೆ ಅವನಿಗೆ ಸ್ವರ್ಗ ಸುಖವೇ ದೊರೆಯುತ್ತದೆಂದು ವೇಮನ ಉಚ್ಚ ಸ್ವರದಿಂದ ಹೇಳಿದ್ದಾನೆ.

ಅಂದಿನ ರಾಜಕೀಯ ಸ್ಥಿತಿಯಂತೂ ಅವನ ಮಾತಿನಲ್ಲಿಯೇ ಹೇಳಬೇಕೆಂದರೆ 'ಒಬ್ಬ ಪುಂಡ, ರಾಜನನ್ನು ಧಿಕ್ಕರಿಸಿ ದಕ್ಕಿಸಿಕೊಳ್ಳಬಹುದಾಗಿತ್ತು' ರಾಜರು ಸೋಮಾರಿಗಳೂ, ಸಿಡುಕರೂ ಆಗಿದ್ದರು. ದರೋಡೆಕೋರರಿಂದ ಆಸ್ತಿ ಪಾಸ್ತಿ

ಎಲ್ಲ ದೋಚಿಕೊಂಡೊಯ್ಯಲ್ಪಡುತ್ತಿತ್ತು. ಜೀವಕ್ಕಂತೂ ಯಾವ ರಕ್ಷಣೆಯೂ ಇರಲಿಲ್ಲ. ಕವಿಗಳಿಗೆ ಸ್ವಾತಂತ್ರ್ಯವಿರಲಿಲ್ಲ. ಹೊಟ್ಟೆಯ ಪಾಡಿಗಾಗಿ ರಾಜರನ್ನು ಹೊಗಳುವದೇ ಅವರ ಕಾಯಕವಾಗಿತ್ತು. ಇಂತಹ ಹದಗೆಟ್ಟ ಸಮಾಜದಲ್ಲಿ ವೇಮನ ಈ ಎಲ್ಲ ಹಿಂಸಾಕೃತಿಗಳನ್ನು ಬಲವಾಗಿ ಖಂಡಿಸಿದ. ಅವರಿಗಾಗಿ ಪದ್ಯಗಳನ್ನು ರಚಿಸಿ ಅವರಲ್ಲಿಯ ಅಜ್ಞಾನವನ್ನು ಹೋಗಲಾಡಿಸಲು ಬಹುವಾಗಿ ಪ್ರಯತ್ನಿಸಿದ. ಅವನಿಗೆ ಬದುಕು 'ಹೂವಿನ ಹಾಸಿಗೆ'ಯಾಗಿರಲಿಲ್ಲ. ಪ್ರತಿ ಹೆಜ್ಜೆ ಹೆಜ್ಜೆಗೂ ಕಲ್ಲು ಮುಳ್ಳುಗಳಿಂದ ತುಂಬಿದ ಅಂಕುಡೊಂಕಾದ ದಾರಿಯಲ್ಲೂ ಗುರಿ ತಲುಪಲೇಬೇಕೆಂಬ ಛಲ. ಕೊನೆಗೂ ಅವನು ಛಲ ಸಾಧಿಸಿಯೇ ಬಿಟ್ಟ. ಮಹಾಯೋಗಿಯಾದ. ಸಂಸಾರಿಕ ಜೀವನದಲ್ಲಿ ನೊಂದು, ಬಳಲಿ, ಕಣ್ದೆರೆದು ಜನತೆಯ ಏಳ್ಗೆಗಾಗಿ ಮನ ಮುಟ್ಟ ದುಡಿದ. ಆ ಪವಿತ್ರ ದೇಹ ಸುಮಾರು ೧೭ನೆಯ ಶತಮಾನದ ಕೊನೆಗೆ ಕಟಾರಪಲ್ಲಿಯಲ್ಲೋ ರಾಯಲ ಸೀಮೆಯ ಬೇರೊಂದು ಸ್ಥಳದಲ್ಲಿಯ ಬಯಲಿನಲ್ಲಿ ಬಯಲಾಯಿತು. ಆದರೆ ಇಂದಿಗೂ ಅವನ ಹೆಸರು ಜನತೆಯ ನಿರಂತರ ಸ್ಮರಣೆಗೆ ಪಾತ್ರವಾಗಿದೆ.

ವೇಮನ ಶುದ್ಧ ಶಿವಭಕ್ತ. ಯೋಗಿ ಮತ್ತು ಪ್ರವಾದಿ. ಕನ್ನಡದಲ್ಲಿ ಸರ್ವಜ್ಞನಂತೆ ತೆಲುಗಿನಲ್ಲಿ ವೇಮನನ ಸ್ಥಾನ ಉಜ್ವಲವಾದದ್ದು. ಜಿ. ಅಪ್ಪಾರಾವ್ ಅವರು ತಮ್ಮ ಮಹಾಪ್ರಬಂಧದಲ್ಲಿ ವೇಮನ ಮತ್ತು ಸರ್ವಜ್ಞರನ್ನು ಕುರಿತು ಈ ರೀತಿ ಹೇಳಿದ್ದಾರೆ.

**"Veman and Sarvajna have adorned the demands of Telugu and Kannada literature'with Jewelst instimable found fulfilment of their lines in their poetic creations and secured for themselves a permanent place in the history of Indian literature"**

"ತನುವುಯೆಂಬ ಗೃಹದಿ ದಾವಾಗ್ನಿ ಸುಡುತಿರಲ್ |
ಮೇಲೆ ಸುಡುವುದೇಕೆ ಮಿಥ್ಯವಲ್ಲೆ |
ದಾಸನ ತಪ್ಪಿಗೆ ದಂಡವಿದಲ್ತುರೆ |
ವಿಶ್ವತೋಭಿರಾಮ ಕೇಳೋ ವೇಮಾ |"

ಇಂತಹ ಒಡಪಿನ ವಚನಗಳನ್ನು ಬರೆಯುವಲ್ಲಿಯೂ ಪ್ರಭುತ್ವ ಸಂಪಾದಿಸಿದ, ಅತ್ಯಮೂಲ್ಯವಾದ ರತ್ನಗಳಂತೆ ಝುಗ ಝುಗಿಸುತ್ತಿರುವ ಆ ಮಹಾಪುರುಷನ ಸಂದೇಶಗಳನ್ನು ನಾವೆಲ್ಲ ಸದಾ ಮೆಲುಕು ಹಾಕುತ್ತಿರುವುದು ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಅತ್ಯಗತ್ಯವಾಗಿದೆ. ವೇಮನ ಯೋಗಿಯನ್ನೂ ಕುರಿತು ಅಭ್ಯಾಸ ಪೂರ್ಣ ದೃಷ್ಟಿಯಿಟ್ಟುಕೊಂಡರೆ ಅವನ ಬಗೆಗೆ ಇನ್ನೂ ಎಷ್ಟೋ ವಿವರಗಳು ಬೆಳಕು ಕಂಡಾವು ಎಂದು ನಿಶ್ಚಯವಾಗಿ ಹೇಳಬಹುದು.

"ಒಬ್ಬನು ಯೋಗಿಯಾದ ಮತ್ತೊಬ್ಬನು ದಿಕ್ಕಿನೋಳ್ತ್ಯಾಗಿಯಾದ ಬೇ
ರೊಬ್ಬನು ಭೋಗಿಯಾದ ಪಿರಿದೊಬ್ಬನು ಉತ್ತಮ ಯೋಗಿಯಾದ ತಾ
ನೊಬ್ಬನುರಾಗಿಯಾದ, ನಿನಪ್ಪೋಲ್ವ ಮಹಾತ್ಮನ ಕಾಣೆನೆಲ್ಲಿಯಂ
ನಿರ್ಭಯವೆಲ್ಲ ರೂಪಗಳು ನಿನಗೆ ಸಲ್ಪುದು ವೇಮನಯೋಗಿಯೆ ||

## — ಆಧಾರ ಗ್ರಂಥಗಳು —


೧) ವೇಮಣ್ಣ ಯೋಗಿಯ ವಚನಗಳು—ಫ. ಗು. ಹಳಕಟ್ಟಿ
ಶಿವಾನುಭವ ಗ್ರಂಥಮಾಲಾ ನಂ. ೭೨ (೧೯೫೧)

೨) ವೇಮನ—ವಿ. ಆರ್. ನಾರ್ಲ
ಸಾಹಿತ್ಯ ಅಕಾಡೆಮಿ (೧೯೭೨)

೩) ಸರ್ವಜ್ಞನು ವೀರಶೈವನೇ ?- ಒಂದು ಸಮೀಕ್ಷೆ
—ಎಸ್. ಎಸ್. ಭೂಸರಡ್ಡಿ,
ಸರ್ವಜ್ಞಕವಿ ಕನ್ನಡ ಸಾಹಿತ್ಯ ಸಂಘ ಮಾನ್ವಿ (ರಾಯಚೂರು)

೪) Camparative Study of Veman and Sarvajna
by G. Appa Row. Mss PP. No. 63
(Submitted to the K. U. D.)

೫) ಮಹಾದೇವಿಯಕ್ಕನ ವಚನಗಳು—ಸಂ. ಡಾ. ಆರ್. ಸಿ. ಹಿರೇಮಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

೬) ಸರ್ವಜ್ಞ ಕವಿ ಜೀವನ ಹಾಗೂ ಕಾವ್ಯ—ಆರು ಉಪನ್ಯಾಸಗಳು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-3

೭) ವೇಮನಗೀತೆ ಪೂರ್ವಾರ್ಧ ಭಾಗ-೧. ಅನು- ಎಸ್. ಆರ್. ಪಾಟೀಲ
ಹುಬ್ಬಳ್ಳಿ ವಿಶಾಲ ಕರ್ನಾಟಕ ಪ್ರಕಟನಾಲಯ (೧೯೬೭)

೮) ವೇಮನಗೀತೆ ಉತ್ತರಾರ್ಧ ಭಾಗ-೨. ಸಂ. ಕೆ. ಎಚ್. ಪಾಟೀಲ
ಹುಬ್ಬಳ್ಳಿ ವಿಶಾಲ ಕರ್ನಾಟಕ ಪ್ರಕಟನಾಲಯ (೧೯೬೮)

೯) ವೇಮನ ದರ್ಶನ ಆಂಧ್ರ ಮೂಲದಿಂದ ಸಂಕಲನ &
ಅನು. ಭೀ. ಭೀಮರಾಜು ಬೆಂಗಳೂರು.
ಎಲ್. ಭೀಮಕುಮಾರ (೧೯೬೬)




# ಕನ್ನಡ ನಾಡಿನ ಶಿವಶರಣೆಯರು

**—ಡಾ. ಎಂ. ಎಸ್. ಲಠ್ಠೆ**

ಸ್ತ್ರೀ ಮತ್ತು ಪುರುಷರು ಸಮಾಜದ ಎರಡು ಮುಖಗಳು. ಮಾನವನ ಪ್ರಪಂಚವನ್ನು ಒಂದು ರಥಕ್ಕೆ ಹೋಲಿಸಿ ಸ್ತ್ರೀ ಮತ್ತು ಪುರುಷರು ಅದರ ಚಕ್ರಗಳೆಂದು ಹೇಳುವ ವಾಡಿಕೆ. ರಥ ಸುರಳಿತವಾಗಿ ಸಾಗಬೇಕಾದರೆ ಈ ಚಕ್ರಗಳು ಸಮನಾಗಿರಬೇಕು. ಅವು ಒಗ್ಗಾಲಿಯಾಗಿರಬಾರದು, ಹೀಗಿದ್ದರೂ ಪುರುಷ ಮೇಲು ಸ್ತ್ರೀ ಕೀಳು ಎನ್ನುವ ಭಾವನೆ ಇತ್ತು. 'ಸ್ತ್ರೀ ಎಂದರೆ ಕಾಮುವಾಸನೆಯ ಗೊಂಬೆ' 'ನರಕದ ದಾರಿಗೆ ಮಾರ್ಗ ತೋರಿಸುವ ದೀಪದ ಕಂಬ' ಎಂದು ಕಡೆಗಣಿಸಿದ್ದೂ ಉಂಟು. ಇನ್ನೊಂಡೆಡೆ 'ಯತ್ರ ನಾರ್ಯಸ್ತು ಪೂಜ್ಯಂತೆ ತತ್ರ ರಮಂತೇ ದೇವಾಃ' ಎಂದು ಗೌರವಿಸಿದ್ದೂ ಉಂಟು.

ಬಹು ಪ್ರಾಚೀನ ಕಾಲದಿಂದ ನಮ್ಮ ಸ್ತ್ರೀ ಮತ್ತು ಪುರುಷರು ನಡೆದುಕೊಂಡು ಬಂದ ದಾರಿಯೆಂದರೆ—ಅವಳು ಮನೆಗೆಲಸ ಮಾಡಬೇಕು, ಈತ ಹೊರಗಿನ ಕೆಲಸ ನೋಡಿಕೊಳ್ಳಬೇಕು, ಇವನು ದುಡಿದು ತರಬೇಕು, ಆಕೆ ಅಡುಗೆ ಮಾಡಿ ಉಣಬಡಿಸಬೇಕು. ಅಲ್ಲದೆ ಹೆಣ್ಣು ಹುಟ್ಟಿದಂದಿನಿಂದ ವಯಸ್ಸಿಗೆ ಬರುವ ವರೆಗೆ ತಂದೆ ತಾಯಿಗಳಿಂದಲೂ, ಲಗ್ನವಾದ ಮೇಲೆ ಗಂಡನ ಆಶ್ರಯದಲ್ಲೂ, ಮುಪ್ಪು ಆವರಿಸಿದಾಗ ಮಕ್ಕಳಿಂದ ಪೋಷಣೆ ಪಡೆಯುತ್ತಿರುವುದರಿಂದ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಸಾರಿದರು. ಇದರಿಂದಾಗಿ ಸ್ತ್ರೀ ಇನ್ನೊಬ್ಬರ ಆಶ್ರಯದಲ್ಲಿಯೇ ಪರಾಧೀನಳಾಗಿ ಬಾಳಬೇಕಾಯಿತು. ಕೇವಲ ಅಡುಗೆ ಮನೆಯೇ ಅವಳಿಗೆ ಕಾರ್ಯಕ್ಷೇತ್ರವಾಯಿತು.

ಹೆಣ್ಣು ತಾಳ್ಮೆಯ ಮೂರುತಿ, ತನಗೊದಗಿದ ದುಃಖಗಳನ್ನೆಲ್ಲ ನುಂಗಿಕೊಂಡು ಒಳ್ಳೆಯದನ್ನೇ ಬಯಸುವ ಸ್ವಭಾವದವಳು. ಆದರೆ ಆಕೆ ಒಮ್ಮೆ ಸಿಡಿದೆದ್ದರೆ ತೀರಿತು—ಮಾರಿ. ಅಂತೆಯೆ 'ಒಲಿದರೆ ನಾರಿ, ಮುನಿದರೆ ಮಾರಿ' ಎಂದರು. ಅವಳ ಅಂತರಂಗದ ತಳಮಳ ಗೊತ್ತಾಗದ್ದಕ್ಕೊ ಮನಸಿನಲ್ಲಿ ಹಿಡಿದಿಟ್ಟದ್ದ ವಿಷಯಗಳನ್ನು ಹೊರಹಾಕಿ ವಿಷಕಾರಿಕೊಂಡಾಳು ಎಂಬ ಸಂಶಯಕ್ಕೊ— 'ಸ್ತ್ರೀಯರ್ಚರಿತ್ರಂ

ಮಹಾಮಹಿಮರ ನಾಮಸ್ಮರಣೆಯಿಂದ ಜೀವನ ಪಾವನ; ಅವರು ತೋರಿದ ಸತ್ಪಥದಲ್ಲಿ ನಡೆದರೆ ಬಾಳು ಬಂಗಾರ; ನಿತ್ಯವಿಕಸಿತ ಹೃದಯಮಂದಾರ.

**ಜೀವನ ಚರಿತೆ :—**

ನಿಜಗುಣ ಶಿವಯೋಗಿಗಳ ಜೀವನೇತಿಹಾಸ ನಮಗಿನ್ನೂ ಸ್ಪಷ್ಟವಾಗಿ ತಿಳಿದು ಬರದೆ ಅಜ್ಞಾತವಾಗಿದೆ. ಅವರಲ್ಲಿಯೂ, ತಮ್ಮ ಯಾವ ಕೃತಿಗಳಲ್ಲೂ ಸ್ವವಿಷಯವನ್ನು ಹೇಳಿಕೊಂಡಿಲ್ಲ. ಅಲ್ಲದೆ ಬೇರೆ ಐತಿಹ್ಯಗಳೂ ನಮಗೆ ಅವರ ಬಗೆಗೆ ಸಾಕಷ್ಟು ವಿಷಯ ಒದಗಿಸದೆ ಮೌನ ತಾಳಿವೆ. ಆದರೂ ಈಗ ದೊರೆತ ಕೆಲವು ಆಧಾರಗಳ ಮೇಲಿಂದ ಅವರ ಕಾಲ, ದೇಶ, ಮತ, ಕೃತಿಗಳ ವಿಷಯವಾಗಿ ಹೀಗೆ ಹೇಳಬಹುದು.

ಶಿವಯೋಗಿಗಳು ಜೀವಿಸಿದ್ದ ಕಾಲ ಸು. ೧೪ನೆಯ ಶತಮಾನ. ಅವರ ವಾಸಸ್ಥಾನ ಪವಿತ್ರ ಕಾವೇರಿ ತೀರದಲ್ಲಿರುವ ಶಂಭುಲಿಂಗನ ಬೆಟ್ಟ. ಮೊದಲು ನಿಜಗುಣರು ಆ ಬೆಟ್ಟದ ಸುತ್ತುಮುತ್ತಲ ಪ್ರದೇಶಕ್ಕೆ ಅರಸರಾಗಿದ್ದು, ಲೌಕಿಕ ಸುಖೋಪಭೋಗಗಳನ್ನು ಉಂಡು ಕಾರಣಾಂತರದಿಂದ ಕ್ಷಣಿಕ ಸುಖವನ್ನು ತೃಣವೆಂದೆಣಿಸಿ ತೊರೆದು ವಿರಕ್ತಿಯನ್ನು ತಾಳಿ, ಆ ಬೆಟ್ಟದಲ್ಲಿಯೇ ಸುದೀರ್ಘಕಾಲ ಉಗ್ರ ತಪಗೈದು ತನು ಮನದ ಮಲಿನತೆಯನ್ನು ತೊಳೆದುಕೊಂಡು ಶುಭ್ರವಾಗಿ, ತಪದ ಅಗ್ನಿಯಲ್ಲಿ ಭವದ ಬೀಜಗಳನ್ನು ಸುಟ್ಟು ಶುದ್ಧ ಬಂಗಾರವಾಗಿ ಪರಮ ಶಿವಯೋಗವನ್ನು ಸ್ವೀಕರಿಸಿ ಜ್ಞಾನಸಾಮ್ರಾಜ್ಯದ ಅಧಿಪತಿಗಳಾಗಿ, ಅನುಭಾವದರ ಮನೆಯ ಅಧಿದೈವವಾಗಿ, ಅನುಭವ ಜ್ಞಾನಾಮೃತವನ್ನು ಜಗಕ್ಕೆ ಹಂಚಿದರು. ಜ್ಞಾನಾನುಭವದ ತುತ್ತತುದಿಗೇರಿ ಮತ್ತೆ ಕೆಳಗಿಳಿದು ಬಂದು ಬೆಟ್ಟದ ಶಂಭುಲಿಂಗನನ್ನು ಅಧಿದೈವವನ್ನಾಗಿ ಮಾಡಿಕೊಂಡು ತಾವು ಕಂಡುಂಡ ಆಧ್ಯಾತ್ಮ ಜ್ಞಾನ ಕುಸುಮದ ಪರಾಗವನ್ನು ತಮ್ಮ ಕೃತಿ ಕುಸುಮಗಳ ಮೂಲಕ ನಾಡಿನಲ್ಲೆಲ್ಲ ಪಸರಿಸಿ ಲೋಕ ಕಲ್ಯಾಣ ಕಾರ್ಯದಲ್ಲಿ ನಿರತರಾಗಿ ಪುನೀತರಾದರು.

ನಿಜಗುಣರು ವಿರಕ್ತ ಸಂಪ್ರದಾಯಕ್ಕೆ ಸೇರಿದವರಾದ ಕಾರಣ ತಮ್ಮ ತಂದೆ ತಾಯಿಗಳ ವಿಷಯವನ್ನು ಹೇಳಿಕೊಂಡಿಲ್ಲ. ಗುರುವಿನ ಹೆಸರನ್ನಾದರೂ ಹೇಳಬೇಕಿತ್ತು. ಆದೂ ಸ್ಪಷ್ಟವಿಲ್ಲ. ಆ ಕೃತಿಗಳಲ್ಲಿ ಸ್ತುತಿಸಿದ ಇಷ್ಟದೈವ 'ಶಂಭುಲಿಂಗ'ನೇ ಅವರ ಗುರುವಾಗಿರಬೇಕೆಂದು ಕೆಲವರೂ; 'ಚನ್ನಸದಾಶಿವ' ಎಂಬವರು ಅವರ ಗುರು ಇರಬಹುದೆಂದು ಇನ್ನೂ ಕೆಲವರೂ ಊಹಿಸಿದ್ದಾರೆ. ಆದರೆ ಅವರ ಊಹೆಗಳಿಗೆ ಸಮರ್ಪಕವಾದ ಉತ್ತರ ಇನ್ನೂ ದೊರಕಿಲ್ಲ.

ನಿಜಗುಣರು ಮತದಿಂದ ವೀರಶೈವರು. ಎಂಬುದು ಅವರ ಕೃತಿಗಳಲ್ಲಿ ಪ್ರತಿಪಾದಿತವಾದ ವಿಷಯಗಳಿಂದ ಸ್ಪಷ್ಟವಾಗುತ್ತದೆ. ಆದರೂ ಅವರ ಸರ್ವಮತ ಸ್ವೀಕಾರಾರ್ಹ ಸಮನ್ವಯ ದೃಷ್ಟಿಯ ವಿಚಾರಸರಣಿ ಇವರು ಮತಾತೀತರೆಂದು ಸ್ಥಿರೀಕರಿಸುತ್ತದೆ. ಸರ್ವರ ಹೃದಯದಲ್ಲಡಗಿದ ದಿವ್ಯಾತ್ಮ ಒಬ್ಬನೇ ಆದಾಗ ಆ ಮತ

ಈ ಮತ ಎಂಬ ನಂಬಿಕೆಗಳಿಗೆಲ್ಲ ಸ್ಥಾನ; ವಾದವಿವಾದಗಳಿಗೆಲ್ಲ ಮಾನ. ಅವರು ಸರ್ವಮತ ಸಂಗಮವಾದ ಸರ್ವೇಶ್ವರರು, ಸರ್ವರೂ ಆರಾಧಿಸುವ ಈಶ್ವರರು.

**ಕೃತಿರತ್ನಗಳು :**

ನಿಜಗುಣರು ಕಾವ್ಯ, ಶಾಸ್ತ್ರ, ದರ್ಶನ, ಶಿವಯೋಗ, ಶಿವಾನುಭವ – ಇವೆಲ್ಲ ವುಗಳನ್ನು ಗರ್ಭೀಕರಿಸಿಕೊಂಡ ಮಹಾಸಮುದ್ರ. ಸಾಹಿತ್ಯ, ಸೌಂದರ್ಯ, ಸಂಗೀತ, ಕಲೆ ಇವುಗಳ ಸುಂದರ ಸಮನ್ವಯತೆ ಅವರ ವ್ಯಕ್ತಿತ್ವದಲ್ಲಿ ನೆಲೆನಿಂತು ಕೆನೆಗಟ್ಟಿತ್ತು. ಇಂಥ ಅದ್ಭುತ ವ್ಯಕ್ತಿತ್ವದಲ್ಲಡಗಿದ ಪ್ರತಿಭಾಕಾರಂಜಿಯಿಂದ ಮುತ್ತು ರತ್ನರಾಶಿಯೇ ಜ್ಞಾನಾಮೃತಭರಿತ ಕೃತಿ–ರತ್ನಗಳಾಗಿ ಹೊರಚಿಮ್ಮಿದವು. ಈ ಲೌಕಿಕ ಭೂಮಿಯ ಮಣ್ಣನ್ನು ಶಿವಸಂಸ್ಕಾರವಿತ್ತು ಹೊನ್ನಾಗಿಸಿ ಉತ್ತಿ–ಬಿತ್ತಿ ಬೆಳೆಸಿದ ಸುವರ್ಣಲತೆಯಲ್ಲಿ ಶಿವಯೋಗಿಗಳ ಶಿವಪ್ರೇರಿತ ಲೇಖನಿಯಿಂದ ಮೂಡಿ–ಬಂದಕೃತಿ–ಕುಸುಮರಾಶಿ ಇದು : ೧ ಪರಮಾನುಭವಬೋಧೆ ೨ ಅನುಭವಸಾರ ೩ ಕೈವಲ್ಯ ಪದ್ಧತಿ ೪ ವಿವೇಕಚಿಂತಾಮಣಿ ೫ ಪರಮಾರ್ಥಗೀತೆ ೬ ಪರ–ಮಾರ್ಥಪ್ರಕಾಶಿಕೆ ೭ ಅರವತ್ತು ಮೂವರ ತ್ರಿವಿಧಿ ಇವು ಏಳು ಕನ್ನಡದ ಚೆನ್ನುಡಿ–ಯಲ್ಲಿ ರಚಿತವಾಗಿದ್ದರೆ. ೧. ದರ್ಶನ ಸಾರಂ ೨ ತರ್ಕಚಿಂತಾಮಣಿ ಇವೆರಡು ಸಂಸ್ಕೃತದಲ್ಲಿ ಮೂಡಿಬಂದಿವೆ. ಇವು ಶಿವಯೋಗಿಗಳ ಅಗಾಧವಾದ ಪಾಂಡಿತ್ಯವನ್ನು ಉಭಯಭಾಷಾ ಪರಿಣತಿಯನ್ನು ಪ್ರಕಟ ಪಡಿಸುತ್ತವೆ; ಅವರು ಸರ್ವವಿದ್ಯಾ-ಪಾರಂಗತರು. ಲೌಕಿಕಾಧ್ಯಾತ್ಮಿಕ ಧೀರುಗಳಾಗಿದ್ದರು ಎಂಬುದನ್ನು ಸ್ಪಷ್ಟಪಡಿಸು ತ್ತವೆ.

ಶಿವಯೋಗಿಗಳು ಷಟ್‌ಶಾಸ್ತ್ರ ಸಾರ್ವಭೌಮರು. ಅವರು ಒಂದೊಂದೆ ಕೃತಿ ಗಳಲ್ಲಿ ಒಂದೊಂದು ಹೊಸವಿಷಯ ಜ್ಞಾನವನ್ನು ತುಂಬಿ ಕನ್ನಡ ಸಾಹಿತ್ಯ ದೇವಿಯ ಸಿರಿಮುಡಿಗರ್ಪಿಸಿದ್ದಾರೆ. ಅವರು ಪ್ರತಿಪಾದಿಸಿದ ವಿಷಯಗಳೆಲ್ಲ ಕನ್ನಡಕ್ಕೆ ಕೊಟ್ಟ ಪ್ರಥಮಕಾಣಿಕೆಗಳಾಗಿವೆ. ಸಾಹಿತ್ಯದ ವಿವಿಧಪ್ರಕಾರಗಳಾದ ಹಾಡುಗಬ್ಬ, ಸಾಂಗತ್ಯ ತ್ರಿಪದಿ, ಗದ್ಯ, ರಗಳೆ ಇತ್ಯಾದಿಗಳಲ್ಲಿ ತಮ್ಮ ಜ್ಞಾನ ಪ್ರವಾಹವನ್ನು ಹರಿಸಿ ಜನಮನ ವನ್ನು ಸೂರೆಗೊಳ್ಳುವಂತೆ, ಸೆರೆಹಿಡಿಯುವಂತೆ ಮಾಡಿದ್ದಾರೆ.

'ಕೈವಲ್ಯಪದ್ಧತಿ'ಯಲ್ಲಿ ತತ್ತ್ವೋಪದೇಶಪರವಾದ, ಮುಕ್ತಿಶ್ರೀಯನ್ನು ಪಡೆದು ಕೊಳ್ಳಲು ಅನುಸರಿಸಬೇಕಾದ ಮಾರ್ಗವನ್ನು ಸೂಚಿಸುವ ಶಿವಸ್ತುತಿಯಿಂದ ಕೂಡಿದ ಹಾಡುಗಳಿದ್ದರೆ, 'ಪರಮಾನುಭವ ಬೋಧೆ' ಯಲ್ಲಿ ಅದ್ವೈತ ತತ್ತ್ವವನ್ನು ಬಿತ್ತರಿಸುವ ಸಾಂಗತ್ಯಗಳಿವೆ. 'ಅನುಭವಸಾರ' ಸಕಲವೇದಾಂತ ಸಾರವನ್ನು ಒಳಗೊಂಡ ತ್ರಿಪದಿಕಾವ್ಯ. 'ಪರಮಾರ್ಥಗೀತೆ' ಗುರುಶಿಷ್ಯರ ಸಂವಾದರೂಪವಾದ ಲಲಿತ ರಗಳೆ ಕೃತಿ. 'ಅರವತ್ತು ಮೂವರು ಪುರಾತನರ ತ್ರಿವಿದಿ'ಅರವತ್ತುಮೂರು ಪುರಾತನ ಶರಣರ ಸ್ತುತಿರೂಪವಾದ ತ್ರಿಪದಿ ಕಾವ್ಯ. ಇವೆಲ್ಲ ಅಚ್ಚಗನ್ನಡ ಛಂದಸ್ಸಿನಲ್ಲಿ ತಿಳಿಯಾದ, ಮೃದುಮಧುರವಾದ ಸರಳ ಸುಂದರ ಲಲಿತ ಶೈಲಿಯಲ್ಲಿ ರೂಪಗೊಂಡ ಕೃತಿಗಳು.

ಶಿವಯೋಗಿಗಳ ಜ್ಞಾನಾನುಭವದ ವಿಸ್ತಾರವನ್ನೂ ಲೌಕಿಕ ಆಧ್ಯಾತ್ಮಿಕ ಪರಿಣತಿಯನ್ನೂ ಎತ್ತಿತೋರಿಸುವ ಮುತ್ತುರತ್ನ ವಜ್ರವೈಡೂರ್ಯವೆಲ್ಲವನ್ನೂ ಒಳಗೊಂಡ ಮೇರುಕೃತಿ 'ವಿವೇಕಚಿಂತಾಮಣಿ'. ಇದು ಸಕಲ ಶಾಸ್ತ್ರ, ವೇದ ವೇದಾಂತ ಆಗಮದರ್ಶನ, ಸ್ವರ್ಗ, ನರಕ, ಬ್ರಹ್ಮಾಂಡ ಇತ್ಯಾದಿ ಸರ್ವವಿಷಯ-ಗಳನ್ನೊಳಗೊಂಡು ಗದ್ಯದಲ್ಲಿ ರಚನೆಗೊಂಡ ಮೊಟ್ಟಮೊದಲ ಕನ್ನಡದ ವಿಶ್ವಕೋಶ. ಇದು ಶಿವಯೋಗಿಗಳ ಅನುಭವದ ಮಹತ್ತಿಗೆ, ಜ್ಞಾನದ ಬೃಹತ್ತಿಗೆ ಹಿಡಿದ ಕನ್ನಡಿ. ಎಲ್ಲ ಕೃತಿಗಳ ಶೈಲಿ ಸರಳವಾಗಿದ್ದು ಗಹನವಾದ ಶಾಸ್ತ್ರ ಹಾಗೂ ಆಧ್ಯಾತ್ಮ ತತ್ತ್ವ ವಿಷಯವನ್ನು ರಸಪೂರ್ಣವಾಗಿ ಮನಮುಟ್ಟುವಂತೆ ಪ್ರತಿಪಾದಿಸಲಾಗಿದೆ.

**ಘನತೆ ಗೌರವ :**

ನಿಜಗುಣ ಶಿವಯೋಗಿಗಳ ಪ್ರತಿಭೆ, ಪಾಂಡಿತ್ಯ ಲೋಕಾನುಭವ, ದರ್ಶನ, ಎತ್ತರದ ವ್ಯಕ್ತಿತ್ವವನ್ನು ಕಂಡು ಅನೇಕ ಕವಿಗಳು, ಪ್ರಾಚೀನ ಅರ್ವಾಚೀನ ವಿಮರ್ಶ-ಕರು ಹೃದಯದುಂಬಿ ಹಾಡಿದ್ದಾರೆ; ಕೊಂಡಾಡಿದ್ದಾರೆ. ಗೌರವಸಲ್ಲಿಸಿ ಋಣಿಯಾಗಿ-ದ್ದಾರೆ.

"ನಿಜಗುಣ ಶಿವಯೋಗಿಯು ಹಿಂದೂಧರ್ಮದ ವಿಶ್ವಕೋಶ ಕಾರನಾಗಿದ್ದಾನೆ. ಕರ್ನಾಟಕದಲ್ಲಿ ಯಾವನಾದರೂ ಗ್ರಂಥಕಾರನು ಧಾರ್ಮಿಕ ತೇಜಸ್ಸನ್ನು ಸ್ಥಿರಗೊಳಿಸ ಲಿಕ್ಕೆ ಕಾರಣನಾಗಿದ್ದರೆ ಅವನು ನಿಶ್ಚಯವಾಗಿ ನಿಜಗುಣಶಿವಯೋಗಿಯೇ ಇರುತ್ತಾನೆ ಇವನು ರಚಿಸಿದ ಪದ್ಯಗಳು, ನಿರೂಪಿಸಿದ ವೇದಾಂತಗ್ರಂಥಗಳು ಎಲ್ಲಸಮಾಜದವರ ಕೈಯಲ್ಲಿ ಓಡಾಡುತ್ತವೆ. ಸಂಸ್ಕೃತವನ್ನರಿಯದವರು ವೇದಾಂತದ ತತ್ವಗಳನ್ನು ತಿಳಿಯಲಿಚ್ಛಿಸಿದರೆ, ಅವರ ಆಕಾಂಕ್ಷೆಗಳು ಈತನ ಗ್ರಂಥಗಳಿಂದ ಪೂರ್ಣತೆಯನ್ನು ಹೊಂದುತ್ತವೆ. ಇವನಗ್ರಂಥಗಳು ಎಲ್ಲ ಧರ್ಮದವರ ಮಠಗಳಲ್ಲಿ ಪಠ್ಯಪುಸ್ತಕ ದಂತಿರುವವು. ಇವನು ರಚಿಸಿದ ಭಕ್ತಿಯ, ನೀತಿಯ, ಜ್ಞಾನದ ಪದಗಳು ಆಬಾಲ ವೃದ್ಧರಿಗೆಲ್ಲ ಪ್ರಿಯಕರವಾಗಿರುತ್ತವೆ. ಇವನ ಹಾಡುಗಳು ಏಕದಾರಿ ಅಯ್ಯನವರೂ ಹಾಗೂದಾಸರ ಬಾಯಲ್ಲಿ ಸದಾ ಇರುತ್ತವೆ. ಈತನ ಕೃತಿಗಳು ಅನೇಕ ಜನರನ್ನು ಪ್ರೇರೇಪಿಸಿ ಧಾರ್ಮಿಕ ವ್ಯಾಸಂಗಕ್ಕೆ ತೊಡಗಿಸಿರುವವು. ಇವನ ಗ್ರಂಥಗಳು ಸಂಸ್ಕೃತದಲ್ಲಿಸಹ ಭಾಷಾಂತರಿಸಲ್ಪಟ್ಟವೆ. ಇಂಥ ಲೋಕೋತ್ತರ ಪುರುಷನು ಕರ್ನಾಟಕದಲ್ಲಿ ಜನಿಸಿ ಧಾರ್ಮಿಕ ಸ್ಥಿತಿಗೆ ಪ್ರಾಚುರ್ಯವನ್ನು ತಂದುಕೊಟ್ಟನು"

—ಡಾ. ಫ. ಗು. ಹಳಕಟ್ಟಿ.

"ನಿಜಗುಣರ ಕೃತಿಗಳಿಗೆ ಸರಿಹೋಲುವಂಥ ಗ್ರಂಥಗಳು ಭರತಖಂಡದ ಇತರ ದೇಶೀಯ ಭಾಷೆಗಳಲ್ಲಿ ಇದುವರೆಗೂ ಉದ್ಭವಿಸಿಲ್ಲ. ಸಂಸ್ಕೃತದಲ್ಲಿ ಅನೇಕ ಗ್ರಂಥ-ಗಳನ್ನು ರಚಿಸಿರುವ ಪ್ರಸಿದ್ಧ ಅದ್ವೈತ ಮತಸ್ಥಾಪಕರಾದ ಭಗವಾನ್ ಶಂಕರಾಚಾರ್ಯ ರಿಗಿಂತಲೂ ಶ್ರೀನಿಜಗುಣರು ಯಾವರೀತಿಯಿಂದಲೂ ಕಡಿಮೆಯವರಾಗಿಲ್ಲವೆಂದು ಹೇಳುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆಯನ್ನುಂಟು ಮಾಡತಕ್ಕ ವಿಷಯವೇ ಸರಿ.

ಶ್ರೀ ಶಂಕರರ ಕೃತಿಗಳು ಪಂಡಿತ ಭಾಷೆಯಾದ ಸಂಸ್ಕೃತದಲ್ಲಿದ್ದರೆ, ನಿಜಗುಣರಕೃತಿಗಳು ನಮ್ಮ ತಾಯಿನುಡಿ ತಿಳಿಗನ್ನಡದ ಸವಿಗೊರಲಿನಲ್ಲಿವೆ. ಅದರಿಂದಲೇ ಕನ್ನಡನಾಡಿನ ತುಂಬ ಅವರ ಅಮೋಘ ಜ್ಞಾನಭಾಂಡಾರದ ಸೂರೆಯಾಗಿರುವದು." –ಅ.ನ.ಕೃ.

"ನಿಜಗುಣ ಶಿವಯೋಗಿ ಕನ್ನಡನಾಡಿನ ಅತ್ಯದ್ಭುತ ವ್ಯಕ್ತಿಗಳಲ್ಲಿ ಒಬ್ಬನು. ಅಗಾಧ ವಿದ್ವತ್ತೆಯಿಂದಲೂ ಜ್ಞಾನದ ತುತ್ತತುದಿಯನ್ನೇರಿ ಕೆಳಗಿಳಿದುಬಂದು ತರತರದ ಗದ್ಯಪದ್ಯಗಳಲ್ಲಿ ಕನ್ನಡಕ್ಕೆ ತನ್ನ ಅರಿವನ್ನು ಹಂಚಿ–ಕೊಟ್ಟನು"

–ಡಾ. ರಂ. ಶ್ರೀ. ಮುಗಳಿ.

ಇಂಥ ಜಗಜನವಂದಿತ, ಅಸದೃಶವ್ಯಕ್ತಿ ಕನ್ನಡನಾಡು, ನುಡಿ, ಸಾಹಿತ್ಯ, ಆಧ್ಯಾತ್ಮ ಪ್ರಪಂಚಕ್ಕಿತ್ತ ಕಾಣಿಕೆ ಅಪಾರ; ವಿಶ್ವದ ತಾತ್ವಿಕ, ದಾರ್ಶನಿಕ, ಅನುಭಾವ ಕ್ಷೇತ್ರಗಳಿಗೆ ಸಲ್ಲಿಸಿದಸೇವೆ ಅದ್ವಿತೀಯ. ಕನ್ನಡದಲ್ಲಿ ಪ್ರಥಮತಃ ಯೋಗಶಾಸ್ತ್ರ, ವೇದಾಂತ, ವಿಶ್ವಕೋಶಗಳನ್ನು ರಚಿಸಿದ, ಕರ್ನಾಟಕ ಸಂಗೀತಕ್ಕೆ ಒಂದು ಅಸ್ತಿತ್ವ ವನ್ನು ತಂದುಕೊಟ್ಟು, ಅದೂ ಒಂದು ಶಾಸ್ತ್ರವೆಂದು ಪರಿಗಣಿಸುವಂತೆ ಮಾಡಿದ ಕೀರ್ತಿ ನಿಜಗುಣರಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯದಲ್ಲಿ ನಿಜಗುಣರಸ್ಥಾನ ನಿಜಗುಣರದು. ಅಷ್ಟೇ ಅಲ್ಲ ವಿಶ್ವಸಾಹಿತ್ಯದಲ್ಲಿಯೂ ಈ ಕವಿ, ಯೋಗಿ, ಲೌಕಿಕ ಪಾರಮಾರ್ಥಿಕಜ್ಞಾನ, ಅನುಭಾವಿ ನಿಜಭಕ್ತನಿಗೆ ಪರಮಪೂಜ್ಯವಾದಸ್ಥಾನ ಇದ್ದೇ ಇದೆ.' ಇಂಥ ಮಹಾಮಹಿಮನ ಆದರ್ಶ ವ್ಯಕ್ತಿತ್ವವನ್ನು. ಹಿರಿತನವನ್ನು ನಮ್ಮಲ್ಲಿ ಅಳವಡಿಸಿಕೊಂಡು ಸಾಗಿದರೆ ಅದೇ ನಾವು ಅವರಿಗೆ ಸಲ್ಲಿಸಿದ ಸೇವೆ; ಅರ್ಪಿಸಿದ ಆರತಿ.



ಬೆಣ್ಣೆಯ ಕಂದಲ ಕರಗಲಿಟ್ಟರೆ, ಕಂದಲು ಕರಗಿತ್ತು, ಬೆಣ್ಣೆಯುಳಿಯಿತ್ತು|

ತುಂಬಯಿದ್ದಿತ್ತು ಪರಿಮಳವಿಲ್ಲ!
ಪರಿಮಳವಿದ್ದಿತ್ತು, ತುಂಬಿಯಿಲ್ಲ!
ತಾನಿದ್ದನು, ತನ್ನ ಸ್ವರೂಪವಿಲ್ಲ!
ಗುಹೇಶ್ವರನಿದ್ದನು, ಲಿಂಗವಿಲ್ಲ!

# ಜ್ಞಾನಭಂಡಾರಿ
# ನಿಜಗುಣ ಶಿವಯೋಗಿಗಳು

—ವೀರಣ್ಣ ರಾಜೂರ

ಕನ್ನಡ ನಾಡು ಭಾರತಾಂಬೆಯ ಹೃದಯ. ಭಾರತೀಯ ಸಂಸ್ಕೃತಿಯ ಕೀರ್ತಿ ಕಳಶ. ಅದರ ಮಣ್ಣು ಹೊನ್ನು, ಜಲ ಅಮೃತತೀರ್ಥ, ವೃಕ್ಷ ಕಲ್ಪವೃಕ್ಷ, ಕಲ್ಲು ಪರುಷ, ಸುಳಿವ ಗಾಳಿ ಸೌಗಂಧಭರಿತ ಶಿವನುಸಿರು.

ಈ ನಾಡಿನಲ್ಲಿ ಉದಿಸಿ ತಮ್ಮ ಅಂತರಂಗವನ್ನು ಬೆಳಗಿಸಿಕೊಂಡು ಅನ್ಯರ ಅಂತರಂಗದ ತಮವನ್ನೋಡಿಸುವ ಪ್ರಭೆಯನ್ನು ಬೀರಿ ಚಿರಂತನವಾಗಿ ಉಳಿಯುವ ಖ್ಯಾತಿ, ಕೀರ್ತಿಗಳನ್ನು ಪಡೆದು ಚಿರಂಜೀವಿಗಳಾಗಿರುವ ಮಹಾಜ್ಞಾನಿಗಳ ಮಣಿ ಮಾಲೆಯಲ್ಲಿ "ಜ್ಯೋತಿ ಬೆಳಗುತಿದೆ ವಿಮಲಪರಂಜ್ಯೋತಿ ಬೆಳಗುತಿದೆ" ಎಂದು ಹಾಡುತ್ತ ತಮ್ಮಾತ್ಮಜ್ಯೋತಿಯನ್ನು ಬೆಳಗಿಸಿಕೊಂಡು ಈ ಲೋಕವೆಂಬ ಪರುಷದ ಪಣತೆಯಲ್ಲಿ ಸದ್ಭಕ್ತಿಯ ಅಮೃತರಸ ತೈಲವನ್ನೆರೆದು ಆಧ್ಯಾತ್ಮದ ಸುವರ್ಣ ಬತ್ತಿ ಹಿಡಿದು ಸದ್ಧರ್ಮ ಜ್ಯೋತಿಯ ಹೊತ್ತಿಸಿ ಸತ್ಯ ಪ್ರಕಾಶವನ್ನು ವೃದ್ಧಿಗೊಳಿಸಿ ಜಗ ಜನಮನದ ಕತ್ತಲೆಯನ್ನು ಕಳೆದು ಸುಜ್ಞಾನ ಪ್ರಭೆಯನ್ನು ಬೆಳಗಿದ ಪರಂಜ್ಯೋತಿ ಸ್ವರೂಪ, ಪರಮ ಪಾವನ ಪರಮೇಶ್ವರನ ಪ್ರತಿರೂಪವಾದ ಶ್ರೀ ನಿಜಗುಣ ಶಿವಯೋಗಿಗಳ ಹೆಸರು ಚಿನ್ನದ ಹೆಸರು. ಅವರು ನಿಂದನೆಲ ಪಾವನ ಪುಣ್ಯಕ್ಷೇತ್ರ. ನಡೆದ ಮಾರ್ಗ ಶಿವಪಥ, ಆಡಿದ ನುಡಿ ಜ್ಯೋತಿರ್ಲಿಂಗ, ಗೈದ ಕಾರ್ಯ ಶಿವಕಾರ್ಯ, ಉಸಿರು ಅಮೃತ ಸರೋವರ, ರಚಿಸಿದ ಸಾಹಿತ್ಯ ಶಿವ ಸಾಹಿತ್ಯ. ಅವರ ವ್ಯಕ್ತಿತ್ವ ಬಹುಮುಖವಾದುದು; ವೈವಿಧ್ಯಮಯವಾದುದು. ಅದು ಭಕ್ತಿಯುಕ್ತಿ ಶಕ್ತಿ ವಿರಕ್ತಿಗಳ ಸುಂದರ ಸಂಗಮ. ಲೌಕಿಕ ಆಧ್ಯಾತ್ಮಿಕ ಜ್ಞಾನ ಅದರೊಡನೆ ಸಮಾಗಮ. ಅವರು ಮಹಾಜ್ಞಾನಿಗಳು, ದಾರ್ಶನಿಕರು, ತಾರ್ಕಿಕರು, ತತ್ತ್ವವೇತ್ತರು, ತಪಸ್ವಿಗಳು, ವರಕವಿಗಳು. ಅವರು ಒಬ್ಬ ವ್ಯಕ್ತಿಯಲ್ಲ ಹಲವು ವ್ಯಕ್ತಿತ್ವಗಳನ್ನು ಗರ್ಭೀಕರಿಸಿಕೊಂಡ ಮೇರುಗಿರಿ ಅವರು ಬರೀ ಭಕ್ತರಲ್ಲ ಭಕ್ತಿಯ ಬಂಗಾರದ ಖಣಿವೆ. ಜ್ಞಾನಾಮೃತಭರಿತ ಪೂರ್ಣ ಕುಂಭ. ಭರತ ಖಂಡಕ್ಕೆ, ಕನ್ನಡ ನಾಡಿಗೆ ಅವರಿತ್ತ ಕಾಣಿಕೆ ಅಪಾರ, ಅದ್ವಿತೀಯ. ಇಂಥ

ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ, ಕುತೋ ಮನುಷ್ಯಃ' ಎಂದು ಆಡಿಕೊಂಡರು. ನೀರಿನ ನೆಲೆ, ಕುದುರೆಯ ನೆಲೆ ಹೇಗೆ ತಿಳಿಯುವುದಿಲ್ಲವೋ ಹಾಗೆಯೆ ಹೆಣ್ಣಿನ ನೆಲೆಯೂ ತಿಳಿಯಲಾರದೆಂದು ಆಶ್ಚರ್ಯ ವ್ಯಕ್ತಪಡಿಸಿದರು. ಭವಭೂತಿ ಕವಿ ಹೇಳಿದಂತೆ 'ಯಥಾ ಸ್ತ್ರೀಣಾಂ ತಥಾವಾಚಾಂ ಸಾಧುತ್ವೆ ದುರ್ಜನೋ ಜನಃ' ಎಂದು ಸಮಾಧಾನಪಟ್ಟುಕೊಂಡಿರಬೇಕು.

ಸ್ತ್ರೀ ಹಾಗೆ, ಹೀಗೆ ಎಂದು ಹೇಳಿದವರೆಲ್ಲ ಪುರುಷರೆ. ಒಂದು ವೇಳೆ ಪುರುಷರಿಗೆ ದೊರಿತ ಸ್ಥಾನ ಅಂದೇ ಸ್ತ್ರೀಯರಿಗೂ ದೊರೆತು ಅವರೂ ಕಾವ್ಯಸೃಷ್ಟಿಸಿದ್ದರೆ ಪುರುಷರನ್ನು ಯಾವ ಸ್ಥಾನದಲ್ಲಿ ಇಡುತ್ತಿದ್ದರೊ – ಅರ್ಥವಾಗದ ಮಾತೇನಲ್ಲ. ಸಮಾಜದ ಹಲವಾರು ಕಟ್ಟಳೆಗಳ ಮಧ್ಯದಲ್ಲಿ ಬಾಳಿ, ಪುರುಷರನ್ನು ನೆರಳಿನಂತೆ ಹಿಂಬಾಲಿಸಿ, ವೇದನೆ ಆಗುತ್ತಿದ್ದರೂ ಸಹಿಸಿಕೊಂಡು, ಧೀರರಾಗಿ, ಅನುಭವಿಗಳಾಗಿ, ಕವಯಿತ್ರಿಯರಾಗಿ ಹಲವಾರು ಸ್ತ್ರೀಯರು–ಬೆಳಕು ಕಂಡಿದ್ದಾರೆ.

ವೇದ ಉಪನಿಷತ್ ಕಾಲದ ಸ್ತ್ರೀಯರೂ ಪದ್ಯ ಬರೆದಿದ್ದಾರೆ. ಶಾಸ್ತ್ರ ಕೇಳಿದ್ದಾರೆ, ಅಧ್ಯಾತ್ಮ ಓದಿದ್ದಾರೆ. ಇಂಥವರಲ್ಲಿ ಲೋಪಾಮುದ್ರೆ, ರೋಮಸಾ, ವಾಗ್ದೇವಿ ಮೊದಲಾದವರನ್ನು ಹೆಸರಿಸಬಹುದಾಗಿದೆ. ಮೈತ್ರೇಯಿ ಗಾರ್ಗಿ ಮೊದಲಾದವರು ಪಾರಮಾರ್ಥಿಕ ಜ್ಞಾನ ಪಡೆದು, ಮೋಕ್ಷ ಸಂಪಾದಿಸಿದ್ದಾರೆ. ಮೈತ್ರೇಯಿ ಘನ ವಿದ್ವಾಂಸಳಿದ್ದಂತೆ ಮಹಾವಿರಾಗಿಣಿಯೂ ಆಗಿದ್ದಳು. ಗಾರ್ಗಿ ಕೂಡ ಅಷ್ಟೇ ಪಾಂಡಿತ್ಯ ಪಡೆದವಳಾಗಿದ್ದಳು.

ರಾಮಾಯಣ ಮಹಾಭಾರತ ಕಾಲದಲ್ಲೂ ಸ್ತ್ರೀ ಪುರುಷನ ಸಹಚಾರಿಯಾಗಿ ಕಾಲಕಳೆಯಬೇಕಾಗಿತ್ತು. ಸೀತೆ ರಾಮನ ಜತೆ ಕಾಡಿಗೆ ಹೋಗಿ ಸಂಕಷ್ಟದಲ್ಲಿ ಸಿಲುಕಿದರೆ, ದ್ರೌಪದಿ ತುಂಬಿದ ಸಭೆಯಲ್ಲಿ ಅವಮಾನಿತಳಾದಳು. ಇಂಥ ಹಲವಾರು ದೃಶ್ಯಗಳು ಹೆಣ್ಣು ಪರಾಧೀನೆ, ಅಬಲೆ ಎಂಬುದಕ್ಕೆ ಸಾಕ್ಷಿ ನೀಡಿವೆ. ಜೈನ ಬೌದ್ಧ ಯುಗದಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ದೊರೇತರೂ ಅದನ್ನು ಕೊನೆಯ ವರೆಗೂ ಉಳಿಸಿಕೊಂಡು ಬರುವುದಾಗಲಿಲ್ಲ.

ಸ್ತ್ರೀಯರಿಗೆ ಅತ್ಯಂತ ಗೌರವ ಸಂದ ಕಾಲವೆಂದರೆ ಹನ್ನೆರಡನೆಯ ಶತಮಾನ. ಕರ್ನಾಟಕದ ಶಿವಶರಣರ ಸಾಮಾಜಿಕ ಕ್ರಾಂತಿಯಿಂದಾಗಿ ಸ್ತ್ರೀಯರಿಗೂ ಸಮಾನ ಸ್ಥಾನ ದೊರೆಯಿತು. ಹನ್ನೊಂದನೆಯ ಶತಮಾನದ ದೇವರದಾಸಿಮಯ್ಯನ ಕಾಲದಲ್ಲಿ ಆತನ ಸತಿ ದುಗ್ಗಳೆ–ಶಿಷ್ಯೆ ಸುಗ್ಗಲೆ ಮೊದಲಾದವರು ಧರ್ಮಪ್ರಚಾರ ಕಾರ್ಯವನ್ನೂ ಕೈಕೊಂಡರು. ನಡುವೆ ಸುಳಿವ ಆತ್ಮಕ್ಕೆ ಗಂಡು ಹೆಣ್ಣು ಎಂಬ ಭೇದವಲ್ಲದೆಂದ್ಹೇಳಿ–ದಾಸಿಮಯ್ಯ ಸ್ತ್ರೀಯರ ಅಂತಸ್ತನ್ನು ಹೆಚ್ಚಿಸಿದನು. ಬಸವ–ಅಲ್ಲಮ ಸಿದ್ಧರಾಮ–ಚೆನ್ನಬಸವಣ್ಣನವರಂತೂ ಸ್ತ್ರೀ ಎಂದರೆ ರಾಕ್ಷಸಿಯಲ್ಲ ದೇವರೆಂದೂ, ಪ್ರತ್ಯಕ್ಷ ಮಾದೇವಿ ಎಂದು ಸಾರಿದರು. ಸಾರಿದುದಷ್ಟೇ ಅಲ್ಲ, ಅಂಥ ಆಚರಣೆಯಲ್ಲಿ

ತೊಡಗಿ ಇನ್ನಿತರರನ್ನೂ ಹಾಗೆ ನಡೆಯಹಚ್ಚಿದರು. ಜ್ಞಾನ, ಕ್ರಿಯೆಗಳ ಸುಂದರ ಸಮನ್ವಯ ಸಾಧಿಸಿದರು.

ಶರಣರ ಒಳ್ಳೆಯ ಮಾರ್ಗದರ್ಶನದಲ್ಲಿ ನೂರಾರು ಜನ ಸ್ತ್ರೀಯರು ಲೋಕ ವಿಖ್ಯಾತರಾದುದನ್ನು ಕಾಣಬಹುದಾಗಿದೆ. ಅವರೆಲ್ಲರೂ ಸಮಾಜದ ಸರ್ವತೋ ಮುಖದೇಳ್ಗೆಗಾಗಿ ಪುರುಷರಂತೆಯೇ ನಡುಕಟ್ಟಿ ನಿಂತು ಹೋರಾಡಿದುದನ್ನೂ ಅರಿಯಬಹುದಾಗಿದೆ. ಇಲ್ಲಿಯ ಹೋರಾಟ ಆತ್ಮಜ್ಞಾನದ ಹೋರಾಟ, ಜೊತೆಗೆ ಧರ್ಮ ಸಂಸ್ಕೃತಿಗಳ ತಿಳುವಳಿಕೆಗಾಗಿ. ಅದಕ್ಕೆಂದೇ ಮಲತ್ರಯಗಳ ಬಂಧನದಿಂದ ಪಾರಾದರೂ ವ್ಯಸನಗಳನ್ನು ದಬ್ಬಿದರು. ಲಿಂಗ ಕಟ್ಟಿಕೊಂಡರು. ಲಿಂಗಾಂಗ ಸಾಮರಸ್ಯ ಸಿದ್ಧಿಗಾಗಿ ಸಾಧನೆ ಮುಂದುವರಿಸಿದರು. ತಡೆದಲ್ಲಿ ಬಲ್ಲವರಿಂದ ತಿಳಿಸಿ ಕೊಂಡರು. ತಮಗಾದ ಅನುಭವವನ್ನು ಹೊರಹಾಕಿದರು. ಇದರಿಂದಾಗಿ ಹಲವಾರು ಜನ ಸ್ತ್ರೀಯರು ಶಿವಶರಣೆಯರಾದರು, ವಚನಕಾರ್ತಿಯರಾದರು. ಇದೆಲ್ಲಕ್ಕೂ ಮೂಲ ಬೇರು–ಶಿವಯೋಗ. ಷಟ್‌ಸ್ಥಲ ಮಾರ್ಗ, ಶರಣಸತಿ, ಲಿಂಗಪತಿ ತತ್ತ್ವ ಇದುವೇ ವೀರಶೈವ ಧರ್ಮ. ಶರಣ ತಾನು ಸತಿ, ಲಿಂಗವೇ ಪತಿ ಎಂಬುದು ಮಂತ್ರವಾಯ್ತು. ಶಕ್ತಿ–ಶಿವ, ಸ್ತ್ರೀ–ಪುರುಷ ಶಬ್ದಗಳು ಸತಿ–ಪತಿಗಳಿಗಿರುವ ಪರ್ಯಾಯ ಪದಗಳು. ಶಕ್ತಿ ಬಿಟ್ಟು ಶಿವನಿಲ್ಲ, ಶಿವಬಿಟ್ಟು ಶಕ್ತಿಯಿಲ್ಲ. ಪ್ರಾಪಂ-ಚಿಕರಾಗಿ ಜೀವಿಸುವಾಗ ಲೋಕವ್ಯವಹಾರದ ರೀತಿಯಲ್ಲಿ ಸತಿಗೆ ಪತಿಯೆ ಪರದೈವ. ಆ ಪತಿಯಿಲ್ಲದಾಗ ಲಿಂಗವೇ ಪತಿ. ಹೀಗೆ ವೀರಶೈವ ಧರ್ಮದಂತೆ ಸ್ತ್ರೀಯರು ಲೌಕಿಕ ರೀತಿಯ ಪತಿಯನ್ನು ಬಯಸದೆ ಆಧ್ಯಾತ್ಮಿಕ ಪತಿ ಲಿಂಗದೇವನನ್ನು ವರಿಸ ಬಹುದು; ಲಿಂಗಸಂಗದಿಂದ ಸಂತಾನೋತ್ಪತ್ತಿ ಆಗುವುದು, ಲಿಂಗಸಂಗದಿಂದ ಪರಮಾನಂದೋತ್ಪತ್ತಿ ಆಗುವುದು, ಹೀಗೆ ಸ್ತ್ರೀಯೂ ಇಂಥ ಆನಂದವನ್ನು ಪಡೆದು ಅವಳೂ ದೇವರಾಗಬಲ್ಲಳು ಎಂಬ ಸಿದ್ಧಾಂತ ಕಂಡುಕೊಂಡು ಶಿವಶರಣೆಯರು ತಾವೇ ತಾವಾದ ಘಟನೆಗಳನ್ನು ತಿಳಿದುಕೊಳ್ಳುವಂತಾಯಿತು. ಆ ಮಾರ್ಗದತ್ತ ಅಂದು ಕೈಹಿಡಿದು ನಡೆಸಿದವರು–ಶಿವಶರಣರು. ಇಂಥ ಎತ್ತರಕ್ಕೆ ಏರಿದ ಮಹಿಳಾ ಮಣಿಯರಲ್ಲಿ ಮಹಾದೇವಿಯಕ್ಕ, ನೀಲಮ್ಮ, ಗಂಗಮ್ಮ, ಅಕ್ಕಮಹಾದೇವಿಯಮ್ಮ, ಸತ್ಯಕ್ಕ, ಲಿಂಗಮ್ಮ, ಗುಡ್ಡಮ್ಮ ಮೊದಲಾದವರು ಅಗ್ರಗಣ್ಯರೆಂದು ಹೇಳಬಹುದು.

## ಮಹಾದೇವಿಯಕ್ಕ

ಹನ್ನೆರಡನೆಯ ಶತಮಾನದ ಪೂರ್ವಾರ್ಧವದು. ಶಿವಮೊಗ್ಗಾ ಜಿಲ್ಲೆಯ ಉಡುತಡಿಯಲ್ಲಿ ಮಹಾದೇವಿಯಕ್ಕ ಹುಟ್ಟಿದಳು. ಸುಸಂಸ್ಕೃತ ತಂದೆತಾಯಿಗಳ ಪ್ರಭಾವದಿಂದಲೂ, ಯೋಗ್ಯಗುರುಗಳ ಮಾರ್ಗದರ್ಶನದಿಂದಲೂ ಈಕೆ ಮಹಾ ಶಿವಭಕ್ತೆಯಾದುದನ್ನು ಮರೆಯುವಂತಿಲ್ಲ. ಲಿಂಗಮಾರ್ಗದ ಅಪ್ಪಟ ತಿಳುವಳಿಕೆ ಮಾಡಿಕೊಂಡಳು. ಶರಣ ಸತಿ, ಲಿಂಗ ಪತಿ ಭಾವ ಮೆರೆದಳು. ಷಟಸ್ಥಲದ

ಮೆಟ್ಟಲುಗಳನ್ನು-ಒಂದೊಂದಾಗಿ ಏರುತ್ತ ಹೊರಟಳು. ಮಕ್ಕಳನ್ನು ಪಡೆಯುವ ಲೌಕಿಕ ಗಂಡನಿಗಾಗಿ ಪರಿತಪಿಸದೆ ಮೋಕ್ಷಕೊಡುವ ಚೆನ್ನಮಲ್ಲಿಕಾರ್ಜುನನನ್ನು ಪತಿಯೆಂದು ವರಿಸಿದಳು. 'ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' ಎಂದಳು. ದೇವರೆ ಗಂಡ ಎಂದು ನುಡಿಯುವುದು ಸುಲಭದ ಮಾತು. ಅದರಂತೆ ನಡೆಯುವುದು ಅತ್ಯಂತ ಕಠಿಣ ಮಾರ್ಗ. ಈಕೆ ಈ ಕಠಿಣ ಮಾರ್ಗವನ್ನೇ ಅನುಸರಿಸಿ ನುಡಿದಂತೆ ನಡೆದು ತೋರಿಸಿದಳು. ಮಹಾದೇವಿಯನ್ನು ಕೌಶಿಕ ರಾಜನು ಪ್ರೀತಿಸಬಂದಾಗ ಭಕ್ತನನ್ನಾಗಿ ಮಾಡಲು ಪ್ರಯತ್ನಿಸಿದಳು; ಕರಾರು ಹಾಕಿದಳು. ಹೂಂಗೊಟ್ಟ ರಾಜ ಅಭಿಮಾನದಲ್ಲಿ ಸೀಲಕಿಬಿದ್ದನು. ಸಂಯಮದ ಕಟ್ಟ ಸಡಿಲೀತು. ದಿಗಂಬರ ಸ್ವರೂಪ ಕಂಡು ಕಕ್ಕಾವಿಕ್ಕಿಯಾದನು. ತಾನುಟ್ಟ ಉಡುಗೆ ತೊಡಿಗೆಗಳನ್ನೆಲ್ಲ ಬೀಸ್ಹಾಕಿ ಮಹಾದೇವಿಯಕ್ಕ ಕಲ್ಯಾಣದತ್ತ ಹೊರಟು ಹೋದಳು. ಆಸೆ ಆಮಿಷಗಳನ್ನೆಲ್ಲ ತೊರೆದು ನಾನೆಂಬುದನ್ನು ಹರಿದ ಮಹಾದೇವಿ ಯಕ್ಕನನ್ನು ಕಿನ್ನರಿ ಬೊಮ್ಮಯ್ಯನು ಪರೀಕ್ಷಿಸ ಬರುತ್ತಾನೆ. ಅವಳ ವೈರಾಗ್ಯದ ಘನ ನಿಲವನ್ನರಿತ ಬೊಮ್ಮಯ್ಯನು 'ತಾಯಿ' ಎಂದು ಸಂಭೋಧಿಸಿ ಕಲ್ಯಾಣಕ್ಕೆ ಕರೆದೊಯ್ಯುತ್ತಾನೆ.

ಶೂನ್ಯ ಸಿಂಹಾಸನಾಧೀಶ್ವರನಾದ ಅಲ್ಲಮಪ್ರಭು ನವತಾರುಣ್ಯಾವಸ್ಥೆಯಲ್ಲಿದ್ದ ಈ ಅಕ್ಕನನ್ನು ಕಂಡು ನಿಬ್ಬೆರಗಾಗಿ 'ನಿನ್ನ ಪತಿಯ ಕುರುಹು ಹೇಳಿದರೆ ಕುಳ್ಳಿರು' ಎಂದು ಕೇಳಿದನು. 'ಹರನೇ ಗಂಡ' ಎಂದು ಉತ್ತರಿಸಿದಳು. 'ಶಿವಭಕ್ತನಾಗ-ಲೊಪ್ಪದ ಕೌಶಿಕನ ಮೇಲೆ ತಪ್ಪು ಹೊರಿಸಿ ದೇವರೆ ಗಂಡನೆನ್ನುವಿಯಾ? ಹಾಗಾದರೆ ಈ ಕೇಶರಾಶಿಯ ಮರೆಯೇಕೆ' ಎಂದನು. 'ಕಾಮನ ಮುದ್ರೆಯ ಕಂಡು ನಿಮ್ಮ ಶರಣರಿಗೆ ನೋವಾದೀತೆಂದು ಕೂದಲ ಮರೆ ಮಾಡಿರುವೆ' ಎಂದ್ಹೇಳುತ್ತ– 'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ನನಗಾವ ಭಯ?' ಎನ್ನುತ್ತಾಳೆ. ಮಿಂಚಿನ ಈ ಮಾತುಗಳನ್ನು ಕೇಳಿದ ಶರಣರೆಲ್ಲರೂ ಬೆರಗಾಗುತ್ತಾರೆ. ಅಕ್ಕನ ಉದಾತ್ತ ಅನುಭವಕ್ಕೆ ಶಿರಬಾಗುತ್ತಾರೆ. ಹೆಸರಿನಲಿ ಹೆಣ್ಣು ರೂಪವಾದರೂ ಭಾವದಲಿ ಗಂಡುರೂಪ ಎಂದು ಬಾಯಿತುಂಬಾ ಹೊಗಳುತ್ತಾರೆ. 'ಅಜಕೋಟಿ ವರುಷದವರೆಲ್ಲರೂ ಹಿರಿಯರೆ?' ಹುತ್ತೇರಿ ಛಿತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ಎಂದು ಚೆನ್ನಬಸವಣ್ಣ ಅವಳ ಹಿರಿಯತನಕ್ಕೆ ಮಾರುಹೋಗುತ್ತಾನೆ. ಶರಣರ ವಚನಗಳಿಗಿಂತಲೂ ಈಕೆಯ ವಚನದ ಮಹತಿಯನ್ನು ಎತ್ತಿ ಹೇಳುತ್ತಾನೆ. ಅನುಭವ ಮಂಟಪದ ಅಕ್ಕ ಎನಿಸಿ ಹಲವು ಕಾಲಇದ್ದು–ಪ್ರಭುವಿನ ಮಾರ್ಗದರ್ಶನದಂತೆ ಕಲ್ಯಾಣದಿಂದ ಶ್ರೀಶೈಲಕ್ಕೆ ತೆರಳುತ್ತಾಳೆ, ನಿಮ್ಮ ಮಂಡೆಗೆ ಹೂವತಾರೆನಲ್ಲದೆ ಹುಲ್ಲ ತಾರೆನೆಂದಂದ ಅಕ್ಕ ಚೆನ್ನಮಲ್ಲಿ-ಕಾರ್ಜುನನಲ್ಲಿ ಒಂದಾಗುತ್ತಾಳೆ.

ಮಹಾದೇವಿಯಕ್ಕನ ಜೀವನ ತಾತ್ವಿಕ ಜೀವನ, 'ಚೆನ್ನಮಲ್ಲಿಕಾರ್ಜುನ' ಎಂಬುದು ಇವಳ ವಚನಗಳ ಮುದ್ರಿಕೆ ಮುನ್ನೂರರ

ಮೇಲ್ಪಟ್ಟು ವಚನ ಹಾಗೂ ಪದಗಳನ್ನೂ 'ಯೋಗಾಂಗ ತ್ರಿವಿಧಿ' ಎಂಬ ಪುಸ್ತಿಕೆಯನ್ನು ರಚಿಸಿದ್ದಾಳೆ.

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ
ಮನವೇ ಬೀಜ ಎನಗುಳ್ಳದೊಂದು ಮನ, ಆ ಮನ
ನಿಮ್ಮಲ್ಲಿ ಒಡರೆವೆದ ಬಳಿಕ ಎನಗೆ ಭವವುಂಟೆ ಚೆನ್ನಮಲ್ಲಿಕಾರ್ಜುನಾ ? "

## ಮುಕ್ತಾಯಕ್ಕ

ಲಕ್ಕುಂಡಿ ಗ್ರಾಮದ ಮುಕ್ತಾಯಕ್ಕ ಗುಪ್ತಭಕ್ತನೆನಿಸಿದ ಅಜಗಣ್ಣ ಶರಣನ ತಂಗಿ. ಅಜಗಣ್ಣನು ಮಂತ್ರಪಠಿಸುತ್ತ ಲಿಂಗೈಕ್ಯನಾದಾಗ ಮುಕ್ತಾಯಕ್ಕನಿಗೆ ಅತೀವ ವೇದನೆಯಾಗುತ್ತದೆ. ತನ್ನ ಗುಪ್ತನಿಧಿ-ಗುರು ಇಲ್ಲವಾದನಲ್ಲಾ ಎಂದು ಮಮ್ಮಲನೆ ಮರಗುತ್ತಾಳೆ. ಆತನ ಶವಶಿರವನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅಳುತ್ತಾಳೆ. ಅದನ್ನರಿತ ಅಲ್ಲಮಪ್ರಭು ಮುಕ್ತಾಯಕ್ಕನನ್ನು ಕಂಡು ಅಂಗೈಯೊಳಗೊಂದು ಅರಳ್ದ ತಲೆಹಿಡಿದುಕೊಂಡು ಈ ಮುತ್ತು ಪವಣಿಸುವಾಕೆ ನೀನಾರು ? ' ಎಂದು, ಕೇಳುತ್ತಾನೆ. ಅರಿತು ಮರೆತ ಲಿಂಗಾಂಗ ಸಾಮರಸ್ಯದ ತಿಳುವಳಿಕೆಯನ್ನು ಮತ್ತೊಮ್ಮೆ ಮುಕ್ತಾಯಕ್ಕನಿಗೆ ತಿಳಿಸಿಕೊಡುತ್ತಾನೆ. ಅಜಗಣ್ಣನೀಗ ಲಿಂಗಸ್ವರೂಪಿ ನಿನ್ನ ಇಷ್ಟಲಿಂಗದಲ್ಲಿಯೇ ಅವನನ್ನು ಅರಸು, ಪೂಜಿಸು, ಪ್ರಾರ್ಥಿಸು, ಒಂದಾಗು ಎಂದು ಬೋಧಿಸುತ್ತಾನೆ. ಮಾತು ಜ್ಯೋತಿರ್ಲಿಂಗವಾಗಿ ಮುಕ್ತಾಯಕ್ಕನಿಗೆ ಮನವರಿಕೆಯಾಗುತ್ತದೆ. ಒಪ್ಪಿಕೊಂಡ ಮುಕ್ತಾಯಕ್ಕ ಪ್ರಭುವಿನ ಪಾದಕ್ಕೆ ನಮಸ್ಕರಿಸಿ ಇಷ್ಟಲಿಂಗದ ಅನುಸಂಧಾನ ಮಾರ್ಗವನ್ನು ಮುಂದುವರಿಸಿ ಸದ್ಗತಿ ಹೊಂದುತ್ತಾಳೆ.

"ಎನ್ನ ಅಜಗಣ್ಣ ತಂದೆ" ಎಂಬ ಅಂಕಿತದಲ್ಲಿ ಹಲವಾರು ವಚನಗಳನ್ನು ರಚಿಸಿದ್ದಾಳೆ. ಇವಳು ಮಹಾ ಜ್ಞಾನಿ, ಈಕೆಯ ದಿಟ್ಟತನ ಅವಳ ವಿಚಾರದ ಔನ್ನತ್ಯವನ್ನು ಸಾರುತ್ತದೆ. ಅಣ್ಣನೇ ಗುರು, ದೇವರು ಎಂದು ಬಗೆದ ಈಕೆ ಲಿಂಗದಲ್ಲಿಯೆ ಅಣ್ಣನನ್ನು, ಅಣ್ಣನಲ್ಲಿಯೆ ಲಿಂಗದೇವನನ್ನೂ ಸಮೀಕರಿಸಿಕೊಂಡ ಬಂಧುಪ್ರೇಮ ಇವಳದು.

" ತನ್ನ ತಾನಱಿದವಂಗೆ ಅಱಿವೆಗುರು |
ಅಱಿವಱಿತು ಮಱಹು ನಷ್ಟವಾದಲ್ಲಿ
ದೃಷ್ಟನಷ್ಟವೇ ಗುರು | ದೃಷ್ಟನಷ್ಟವೆ ಗುರು ತಾನಾದಲ್ಲಿ
ಮುಟ್ಟಿತೋಱಿದವರಿಲ್ಲಡಡೇನು ? ಸಹಜವ ನೆಲೆಗೊಳಿಸುವ
ನಿರ್ಣಯ ನಿಷ್ಪತ್ತಿಯು ಗುರುನೋಡಾ | ಗುರು ತಾನಾದಡೂ
ಗುರುವಿಡಿದಿರಬೇಕು ಎನ್ನ ಅಜಗಣ್ಣನಂತೆ"

## ಮಹಾದೇವಿಯಮ್ಮ

ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದು ಮೋಳಿಗೆ ಕಾಯಕ ಕೈಕೊಂಡ ಮಾರ-ಯ್ಯನ ಸತಿ ಈಕೆ. ರಾಣಿಯ ವೈಭವವನ್ನೆಲ್ಲಾ ಪತಿಯ ಜೊತೆಗೇ ತ್ಯಾಗ ಮಾಡಿ ಶಿವಪ್ರೇಮವನ್ನು ಬಲಪಡಿಸಿಕೊಂಡವಳು. ವಿಷಯಾಸಕ್ತಿಯಿಂದ ವಿರಕ್ತಿತಾಳಿದ ಈಕೆಗೆ ಪತಿಯೆ ದೈವ. ಇಷ್ಟಲಿಂಗದ ಅನುಸಂಧಾನ ಮಾರ್ಗವಿಡಿದು ವಿವೇಕವನ್ನು ಹೆಚ್ಚಿಸಿಕೊಂಡವಳಿವಳು. ಪತಿ ಮಾರಯ್ಯನಿಗೆ ಯಾವ ಸಂಕೋಚವೂ ಇಲ್ಲದೆ ಆಗಾಗ ಸಲಹೆಗಳನ್ನು ನೀಡುವ ಕಾಂತಾಸಮ್ಮಿತ ಉಪದೇಶ ಇವಳದು. ಕಾಯಕ-ವೆರಸಿ ಕೈಲಾಸಕ್ಕೆ ಹೋಗುವದು ತರವಲ್ಲ ಎಂದು ಖಂಡಿಸಿ ಇಷ್ಟಲಿಂಗದ ಪೂಜೆ ಬೇಕು ಎಂದು ಹಾಡಿಯೆ ಹಾಡಿದ್ದಾಳೆ. ದಾಂಪತ್ಯ ಪ್ರೇಮ, ಕಾಯ ನಿಷ್ಠೆ ಹಾಗೂ ಲಿಂಗಾನು ಸಂಧಾನ ಮಾರ್ಗ ಇವು ಅನುಕರಣೀಯವಾದವುಗಳು.

"ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ" ಎಂಬುದು ಇವಳ ವಚನಗಳಲ್ಲಿ ಬರುವ ಅಂಕಿತವಾಗಿದೆ. ನೂರಾರು ವಚನಗಳ್ನು ರಚಿಸಿದ ಶ್ರೇಯಸ್ಸು ಇವಳಿಗೆ, ರಾಣಿ ಮಹಾದೇವಿಯೆಂದೇ ಕರೆಯುವ ವಾಡಿಕೆಯಿದೆ.

> 'ಇಷ್ಟದಲ್ಲಿ ನೋಟ, ಜ್ಞಾನದಲ್ಲಿ ಕೂಟ
> ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯ ಬಿಟ್ಟುದು
> ಭಾವವೆಂಟ ಕುಱುಹ ಮಱೆದುದು
> ಇಂತೀ ಉಭಯ ನಿರ್ಭಾವವಾದಲ್ಲಿ
> ಇಹಪರವೆಂಬ ಹೊಲಬುಗೆಟ್ಟಿತ್ತು ' ಎನ್ನಯ್ಯಪ್ರಿಯ
> ಇಮ್ಮಡಿ ನಿಕಳಂಕ ಮಲ್ಲಿಕಾರ್ಜುನನು ಒಂದೆಂದಲ್ಲಿ'

## ನೀಲಾಂಬಿಕೆ

ಈಕೆ ಸಿದ್ಧರಸನ ಮಗಳು. ಇವಳನ್ನು ನೀಲಮ್ಮ ನೀಲಲೋಚನೆ ಎಂದೂ ಕರೆಯುವರು. ಬಸವಣ್ಣನ ಸತಿ, ಪತಿಯ ಪ್ರತಿಯೊಂದು ಕಾರ್ಯದಲ್ಲೂ ಸಹಭಾಗಿನಿ ಅದರಲ್ಲೂ ದಾಸೋಹ ನಡೆಸುವಲ್ಲಿ ಸಕ್ರಿಯ ಸಹಾಯ ಇಷ್ಟಲಿಂಗ ಪೂಜೆಯಲ್ಲಿ ನಿರತಳಾಗಿ ಈಕೆ ಷಟಸ್ಥಲ ಮಾರ್ಗವಿಡಿದು ಲಿಂಗೈಕ್ಯಳಾದುದನ್ನು ಕಾಣುತ್ತೇವೆ. ರಾಜಕೀಯ ದಾಹದಿಂದ ಬೇಸತ್ತ ಬಸವಣ್ಣನವರು ಕೂಡಲಸಂಗಮ ಕ್ಷೇತ್ರಕ್ಕೆ ತೆರಳುತ್ತಾರೆ. ಅಲ್ಲಿ ನಿಲಾಂಬಿಕೆಯ ನೆನಪಾಗಿ ಕರೆಯ ಕಳುಹುತ್ತಾರೆ. ನೀಲಮ್ಮ ಪತಿಯ ಇಂಗಿತವನ್ನರಿತು, "ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹ ಬಲ್ಲ ಮಹಾತ್ಮ ರಿಗಿದು ಗುಣವೇ" ಎಂದು ಹಾಡುತ್ತಾಳೆ.

"ನೋಡು ನೋಡು ನೋಡು ಲಿಂಗವೆ, ನೋಡು ಬಸವಯ್ಯನವರು ಮಾಡಿದಾಟವ.

ಅಲ್ಲಿಗೆ ಎನ್ನನು ಬರಹೇಳಿದರಂತೆ ಇಲ್ಲಿ ತಾನಿಲ್ಲವೆ ಸಂಗಯ್ಯನು'
ಎಂದು ಹಾಡಿ ಶಿವಯೋಗದ ಕೆಚ್ಚನ್ನು ನಿದರ್ಶನಕ್ಕೆ ತಂದುಕೊಡುತ್ತಾಳೆ. ನೀಲಾಂಬಿಕೆಯ ದಾಂಪತ್ಯ ಜೀವನ ಆದರ್ಶವಾದುದು, ಅವಳ ಭಕ್ತಿ ವಿನಯ, ಸೇವಾ ಭಾವ, ಪಾತಿವ್ರತ್ಯ ಗುಣಗಳಿಂದ ತನ್ನದೇ ಆದ ವ್ಯಕ್ತಿತ್ವ ರೂಪಿಸಿಕೊಂಡಿದ್ದಾಳೆ. ಆಧ್ಯಾತ್ಮ ಪ್ರಯೋಗಶಾಲೆಯೆನಿಸಿದ ಅನುಭವ ಮಂಟಪದಲ್ಲಿಯೂ ಇವಳದು ಅಗ್ರ ಸ್ಥಾನ. ಶಿವಾನುಭವ ಚರ್ಚೆಯಲ್ಲಿ ಭಾಗವಹಿಸುತ್ತಿದ್ದಳು.

ನೀಲಮ್ಮನೂ ವಚನ ರಚಿಸಿದ್ದಾಳೆ. ಹಾಡು ಕಟ್ಟಿದ್ದಾಳೆ, ವಚನಗಳಲ್ಲಿ ಬರುವ ಮುದ್ರಿಕೆ ಬಸವ ಪ್ರಿಯ ಕೂಡಲಸಂಗಮದೇವ ಎಂಬುದು. ಸಂಗೀತಪ್ರವೀಣೆಯೂ ಆಗಿದ್ದಳೆಂದು ತಿಳಿದು ಬರುವದು.

## ಗಂಗಾಂಬಿಕೆ

ಬಸವಣ್ಣನವರ ಇನ್ನೊಬ್ಬ ಸತಿ ಇವಳು. ಬಲದೇವ ಮಂತ್ರಿಯ ಮಗಳೀಕೆ. ವಿದ್ಯಾಪಾರಂಗತಳಿದ್ದಳು. ಯುದ್ಧ ಕಲೆಯಲ್ಲಿ ಆಸಕ್ತಿ ಐಶ್ವರ್ಯಕ್ಕಿಂತ ಪತಿಸೇವೆಯಲ್ಲಿ ಹೆಚ್ಚು ಆದರ, ಒಲವು, ಅಭಿಮಾನ, ಪತಿಯ ಹೊಸ ಸಮಾಜರಚನೆಯಲ್ಲಿ ಇವಳು ಅಂತಃಶಕ್ತಿಯಾಗಿ ದುಡಿದವಳು. ಚೆನ್ನಬಸವಣ್ಣನನ್ನು ಮಗನಿಗಿಂತಲೂ ಹೆಚ್ಚಿನ ವಾತ್ಸಲ್ಯದಿಂದ ಆಡಿಸಿ ಬೆಳಸಿದವಳು. ಕಾಯಕನಿರತೆಯೂ, ಜ್ಞಾನಿಯೂ ಆಗಿದ್ದಳು. ಕಲ್ಯಾಣ ಕ್ರಾಂತಿಯಲ್ಲಿ ಸಿಡಿದೆದ್ದ ಸೈನ್ಯಕ್ಕೆ ಈಕೆಯಿಂದ ಪುಷ್ಟಿ ದೊರೆತದ್ದು. ಆ ಸೈನ್ಯದ ಜೊತೆ ತಾನೂ ವೈರಿಗಳ ಕೂಡ ಕಾದಾಡುತ್ತ ಹೊರಟವಳು.

"ಗಂಗಾಪ್ರಿಯ ಕೂಡಲಸಂಗಮದೇವಾ" ಎಂಬುದು ಇವಳ ವಚನಗಳ ಅಂಕಿತವಾಗಿದೆ. ಹಲವಾರು ವಚನಗಳನ್ನು ರಚಿಸಿದ್ದಾಳೆ.

> 'ಅವಳ ಕಂದ ಬಾಲಸಂಗ, ನಿನ್ನ ಕಂದ ಚೆನ್ನಲಿಂಗ
> ಎಂದು ಹೇಳಿದರಮ್ಮಾ ಎನ್ನ ಒಡೆಯರು
> ಫಲವಿಲ್ಲದ ಕಂದನಿಪನನವಳಿಗೆ
> ಎನಗೆ ಫಲವಿಲ್ಲ, ಕಂದನಿಲ್ಲ
> ಇದೇನೊ ದುಃಖದಂದೊಳಗೆ
> ಗಂಗಾಪ್ರಿಯ ಕೂಡಲಸಂಗಮದೇವಾ "

## ಅಕ್ಕನಾಗಮ್ಮ

ನಾಗಮ್ಮ ಬಸವಣ್ಣನವರ ಅಕ್ಕ. ಮಾದರಸ ಮಾದಲಾಂಬಿಕೆಯರಿಗೆ ಬಾಗೇವಾಡಿಯಲ್ಲಿ ಹುಟ್ಟಿದವಳು. ಇಂಗಳೇಶ್ವರದ ಶಿವಸ್ವಾಮಿ ಈಕೆಯ ಪತಿ. ಚೆನ್ನಬಸ-

ವಣ್ಣನ ಮಹಾತಾಯಿ ಈಕೆ. ಚಿಕ್ಕಂದಿನಿಂದಲೂ ಬಸವಣ್ಣನವರಿಗೆ ಮಾರ್ಗದರ್ಶನ ನೀಡಿ—ಬೆಳೆಸಿದವಳು. ಹಲವಾರು ವರುಷ ಯೋಗಸಾಧನೆ ಮಾಡಿದ್ದಳೆಂದೂ ತಿಳಿದುಬರುತ್ತದೆ.

ಸ್ತ್ರೀಯರಿಗೆಲ್ಲ ಮುಂದಾಳಾಗಿ ಅವರ ಸರ್ವತೋಮುಖಿದೇಳ್ಗೆಗಾಗಿ ನಡುಕಟ್ಟಿ ದುಡಿದವಳು. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಯಲ್ಲಿ ಭಾಗವಹಿಸಿದವಳು ಕಲ್ಯಾಣ ಕಲಕಾದಾಗ ಸೈನ್ಯಕಟ್ಟಿಕೊಂಡು ಧರ್ಮದ ಉಳವಿಗೆ ಹೋರಾಡಿದಳು.

ಇವಳು ವಚನಕಾರ್ತಿ, 'ಬಸವಣ್ಣಪ್ರಿಯ ಚೆನ್ನಸಂಗಯ್ಯ ಎಂಬುದು ಇವಳ ವಚನಗಳ ಮುದ್ರಿಕೆ.

"ಅರಿಯದೆ ಭವಕ್ಕೆ ಬಂದೆನಲ್ಲದೆ
ಇನ್ನು ಅರಿದ ಬಳಿಕ ಬಳಲಲುಂಟೆ ?
ಹೃದಯಕಮಲದಲ್ಲಿ ನಿಜವು ನೆಲೆಗೊಂಡಬಳಿಕ
ಪುಣ್ಯ ಪಾಪವೆಂಬುದಕ್ಕೆ ಹೊರಗಾದೇನು
ಭುವನ ಹದಿನಾಲ್ಕರೊಳಗೆ ಪರಿಪೂರ್ಣನಿರಂಜನ ಜ್ಯೋತಿಗಯಾಗಿ
ಬೆಳಗುವ ಪ್ರಭುವ ಕಂಡು ಬದಕಿದೆನು ಕಾಣಾ
ಬಸವಣ್ಣಪ್ರಿಯ ಚೆನ್ನಸಂಗಯ್ಯ"

## ವರದಾನಿ ಗುಡ್ಡಮ್ಮ

ವರದಾನಿ ಗುಡ್ಡಮ್ಮ ಜತ್ತ ತಾಲೂಕಿನ ಉಮರಾಣಿ ಗ್ರಾಮದಲ್ಲಿ ಜನಿಸಿದಳು. ಲಿಂಗಮ್ಮ ಎಂದು ಈಕೆಯ ಹೆಸರು. ಅಕ್ಕಸಾಲಿಗ ಕಾಯಕದ ಅನಂತರಾಯ ತಂದೆ, ಸಿರಸಮ್ಮ ತಾಯಿ.

ಇಷ್ಟಲಿಂಗ ಪೂಜೆ ನೆರವೇರಿಸುತ್ತ, ಆ ಲಿಂಗದಲ್ಲಿ ಮನವ ನಿಲಿಸಿ, ಕಲ್ಯಾಣದ ಶರಣರನ್ನು ಕಾಣುವ ಹಂಬಲ ತಾಳಿದ್ದಳು. ಕೊನೆಗೊಂದು ದಿನ ಕಲ್ಯಾಣ ಕಂಡು ಬಸವಣ್ಣನವರಿಂದ 'ದಾನಮ್ಮ'ಎನ್ನುವ ಹೆಸರನ್ನು ಪಡೆದಳಂತೆ ಅನುಭವ ಮಂಟಪ ದಲ್ಲಿ ಇವಳಿಗೂ ಪ್ರವೇಶ ದೊರೆಯುತ್ತದೆ. ಕೆಲ ವರುಷ ಅಲ್ಲಿಯೇ ಇದ್ದು ಸಂಕ ಗ್ರಾಮದ ಸಂಗಮನ ಜೊತೆ ಲಗ್ನವಾಗುತ್ತಾಳೆ. ಸತಿಪತಿಗಳಿಬ್ಬರೂ ಜೊತೆಗೂಡಿ ಆಂಧ್ರ, ಮಹಾರಾಷ್ಟ್ರ, ಕರ್ನಾಟಕದಲ್ಲೆಲ್ಲಾ ವೀರಶೈವ ಧರ್ಮ ತತ್ವಗಳ ಪ್ರಸಾರ ಕೈಕೊಳ್ಳುತ್ತಾರೆ.

ದೇವಗಿರಿಯ ಯಾದವ ವಂಶದ ಮಹದೇವ ರಾಜನ ನದಿ ಮಾಂಡಲಿಕ ದೊರೆ ಸಾಯಿದೇವನು ಗುಡ್ಡಮ್ಮಳ ಭಕ್ತಿಗೆ ತಲೆಬಾಗಿ ಭೀಮಾ ತೀರದಲ್ಲಿ 'ವಾತಾಖ್ಯ ಪುರಿ' ಎಂಬ ಹೆಸರಿನ ನಗರವೊಂದನ್ನು ನಿರ್ಮಿಸಿ ಅಲ್ಲಿಯೆ ವರದಾನಿ ಗುಡ್ಡಮ್ಮಳ ದೇವಾಲಯವೊಂದನ್ನು ಕಟ್ಟಿಸುತ್ತಾನೆ. ಈ ವಾತಾಖ್ಯಪುರವೆ 'ವಾಡಪುರಿ' ಎಂದು ಹೆಸರುಗೊಂಡಿದೆ. ಈಗಲೂ ಸಾವಿರಾರು ಕುಟುಂಬದವರಿಗೆ ವರದಾನಿ ಗುಡ್ಡಮ್ಮ ಮನೆದೇವತೆ.

ಇದೇ ಕಾಲಾವಧಿಯಲ್ಲಿ ಗಂಡನ ಜೊತೆ ಜೊತೆಗೇ ಕಾಯಕ ನೆರವೇರಿಸುತ್ತ ಧರ್ಮತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ದಾರಿತಪ್ಪುವ ಗಂಡಂದಿರರಿಗೂ ನರ್ಮಿಕವಾಗಿ ಉಪದೇಶ ನೀಡಿದ ಮಹಿಳಾಮಣಿಯರನ್ನು ಕಾಣಬಹುದಾಗಿದೆ. ಅಂಥವರಲ್ಲಿ ಪ್ರಮುಖರಾದವರೆಂದರೆ ಆಯ್ದಕ್ಕಿ ಮಾರಯ್ಯನ ಹೆಂಡತಿ 'ಲಕ್ಕಮ್ಮ' ಎಂದೇ ಹೇಳಬೇಕಾಗುತ್ತದೆ. ಇಲ್ಲಿಯ ವರೆಗೆ ಮಾಡಿದ ತನ್ನ ಕಾಯಕವನ್ನೂ ದಾಸೋಹವನ್ನು ನೆನೆಸಿಕೊಂಡು ಇನ್ನು ಕೈಲಾಸಕ್ಕೆ ಹೋಗುತ್ತೇನೆ ಎಂದಾಗ ಉತ್ತರಿಸಿದ ಲಕ್ಕಮ್ಮನ ನುಡಿ ಎಂಥವರನ್ನೂ ಬೆರಗುಗೊಳಿಸುವಂತಿದೆ.

> "ಮಾಡಿ ನೀಡಿ ಹೋದೆನೆಂಬಾಗ ಕೈಲಾಸವೇನುಕ್ಕೈಕೂಲಿಯೆ ?
> ಮುಂದೊಂದ ಕಲ್ಪಿಸದೆ ಹಿಂದೊಂದ ಭಾವಿಸದೆ
> ಸಲೆಸಂದಿದ್ದಾಗಲೆ ಮಾರಯ್ಯಪ್ರಿಯ ಅಮಳೇಶ್ವರ ಲಿಂಗವಿದ್ದ
> ಠಾವೇ ಕೈಲಾಸ"

ನಿಂಪರಿಪು ನೀ ನಿದ್ದುದೇ ಕೈಲಾಸ, ಆ ಇರುವಿಕೆಯಲ್ಲಿ ಯಾವ ಆಸೆ ಆಮಿಷ ಗಳಿಗೂ ಸ್ಥಾನವಿರಬಾರದೆಂದು ಸ್ಪಷ್ಟಪಡಿಸಿದ್ದಾಳೆ. ಇಂಥ ನೂರಾರು ಜನ ಶಿವ-ಶರಣೆಯರು ಅಂದು ಕಂಗೊಳಿಸಿ ಸ್ತ್ರೀಯರ ಸ್ಥಾನಮಾನ ಹೆಚ್ಚಿಸಿ ಸಮಾಜದ ಸರ್ವ-ತೋಮುಖದೇಳ್ಗೆಗಾಗಿ ತನುಮನ-ಧನದಿಂದ ಸೇವೆಸಲ್ಲಿಸಿದುದನ್ನು ಕಾಣುತ್ತೇವೆ.

'ಸ್ತ್ರೀಯರ ಉನ್ನತಿಯೇ ರಾಷ್ಟ್ರದ ಉನ್ನತಿ' ಎಂಬ 'ಉಕ್ತಿಯಂತೆ ಅವರ ಉನ್ನತಿಯಲ್ಲಿ ಸಮಾಜದ, ದೇಶದ ಉನ್ನತಿ ಇದೆ ಎಂಬುದನ್ನರಿತು ಅವಳನ್ನು ಗೌರವಿಸುವ ಸದ್ಬುದ್ಧಿ ಸಮಾಜಕ್ಕೆ ಬರಬೇಕು ಇಂಥ ಗೌರವ ಪಡೆದ ಹನ್ನೆರಡನೇ ಶತಮಾನದ ಶಿವಶರಣರು ಷಟ್‌ಸ್ಥಲ ಮಾರ್ಗವಿಡಿದು ಲಿಂಗದಲ್ಲಿ ನಿಷ್ಠೆ ಶಿವಾರ್ಪಣ ಶಿವ ಭಾವ ಹಾಗೂ ಪಾತಿವ್ರತ್ಯ ಗುಣ ಮೆರೆದವರಾಗಿದ್ದಾರೆ. ಇವರು ಸೃಷ್ಟಿಸಿದ ಸಾಹಿತ್ಯ ಅಂತರಂಗದ ಆಧ್ಯಾತ್ಮಿಕ ಕೆಚ್ಚನ್ನು ಚಿತ್ತರಿಸಿದೆ. 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ' 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ' 'ಚಂದನವಕಡಿದು ಕೊರೆದು ತೇದಡೆ ನೊಂದೆನೆಂದು ಕಂಪಬಿಟ್ಟಿತ್ತೆ' ಬಿಟ್ಟೆನೆಂದರೆ ಬಿಡದೀ ಮಾಯೆ' 'ಭಕ್ತರಿಗೆ ಬಡತನ ಉಂಟೆ, ನಿತ್ಯರಿಗೆ ಮರಣ ಉಂಟೆ ?' 'ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನ ಮೊದಲಾದ ನೂರಾರು ನುಡಿಮುತ್ತುಗಳಲ್ಲಿ ಉನ್ನತಮಟ್ಟದ ಅನುಭವ ಸಾಹಿತ್ಯದ ಲಕ್ಷಣಗಳನ್ನು ಅರಿತುಕೊಳ್ಳಬಹುದಾಗಿದೆ. ಮಹಾದೇವಿಯಕ್ಕನ ವಚನಗಳಂತೂ ಸಾಹಿತ್ಯ ಶ್ರೀದೇವಿಗೆ ಮುಡಿದ ಸೌಗಂಧದ ಸುಂದರ ಪುಷ್ಪಗಳಾಗಿವೆ. ಜಾಗತಿಕ ಮಹಿಳಾಮಣಿಯರೆನಿಸಿದ ಮೀರಾ, ಅಂಡಾಳ್, ಲಲ್ಲೇಶ್ವರಿ, ರಾಬಿಯ ಮೊದಲಾದ ವರೊಂದಿಗೆ ತೌಲನಿಕ ಅಭ್ಯಾಸ ನಡೆಸಿದಾಗ ನಮ್ಮ ಶಿವಶರಣೆಯರು ನಿಂದ ನೆಲವು ನುಡಿದ ನುಡಿ ಇನ್ನೂ ಎತ್ತರಕ್ಕೆ ಏರಬಹುದಾಗಿದೆ.

# ಬಸವಣ್ಣನವರ ಒಂದು ವಚನದ ವಿಶ್ಲೇಷಣೆ

—ಶಾಂತರಸ

ಮನುಷ್ಯ ಜೀವನ ಸಂಕೀರ್ಣವಾದುದು; ನಮ್ಮ ಮತ ಧರ್ಮಗಳು, ಶಾಸ್ತ್ರಗಳು, ಸಂಪ್ರದಾಯಗಳು, ನಂಬುಗೆಗಳು, ದೈವಗಳು, ಪರಿಸರ, ಪ್ರಕೃತಿ, ಸಮಾಜ ಈ ಸಂಕೀರ್ಣತೆಯನ್ನು ಇನ್ನಷ್ಟು ಹೆಚ್ಚಿಸಿವೆ. ಈ ತಿರುಗಣಿ ಮಡುವಿನಿಂದ ಮನುಷ್ಯ ಪಾರಾಗಿ ಮೇಲೇಳಲು ಅವಕಾಶವಿಲ್ಲದಂತಾಗಿದೆ. ಅಂತೆಯೇ ಅವನು ಸ್ವಂತಿಕೆಯನ್ನು ಕಳೆದುಕೊಂಡು ಮತ, ಧರ್ಮ, ಶಾಸ್ತ್ರ, ಸಂಪ್ರದಾಯ, ದೈವ, ನಂಬುಗೆಗಳಲ್ಲಿ ಹರಿದುಹಂಚಿಹೋಗಿದ್ದಾನೆ. ಅಥವಾ ಹೀಗೆ ಹೇಳಬಹುದು: ಮಾನವನ ವ್ಯಕ್ತಿತ್ವವನ್ನು ವಿಕಾಸಗೊಳಿಸಿ ಅವನನ್ನು ದೈವತ್ವದ ಮಟ್ಟಕ್ಕೆ ಏರಿಸುವ ಸಾಧನೆಗಳಿಲ್ಲ, ಶಕ್ತಿಸಾಮರ್ಥ್ಯಗಳಿಲ್ಲ ಅವನನ್ನು ಕಾಲಕೆಳಗೆ ಹಾಕಿ ನುಚ್ಚುನೂರು ಮಾಡಿ ದೆವ್ವದ ಕುಣಿತ ಕುಣಿದಿವೆ; ಕುಣಿಯುತ್ತಿವೆ. ಇದು ಶತ ಶತಮಾನಗಳಿಂದ ನಡೆದು ಬಂದಿದೆ.

ಧರ್ಮ, ದೇವರು, ಶಾಸ್ತ್ರಗಳ ಹೆಸರು ಮುಂದೆ ಮಾಡಿ 'ಬುದ್ಧಿವಂತ' ಎನಿಸಿಕೊಳ್ಳುವ ಕೆಲವು ಜನ ತಮ್ಮ ಮೂಗಿನ ನೇರಕ್ಕೆ ಎಲ್ಲವನ್ನು ಅರ್ಥಯಿಸಿ ಸಮಾಜದ ಬಹುಭಾಗವನ್ನು ಅಜ್ಞಾನದಲ್ಲಿಟ್ಟು ಆಳಿಕೆ ನಡೆಸಿತು-ಎಂಬ ಮಾತನ್ನು ಈಗ ಎಲ್ಲರೂ ಒಪ್ಪುತ್ತಾರೆ. ಈ ಬುದ್ಧಿವಂತ ಜನರಿಂದ ದೇವರು ಧರ್ಮಶಾಸ್ತ್ರ ಸಂಪ್ರದಾಯ ಎಲ್ಲವು Currupt ಆದವು. 'ನಿಜವಾದುದು ಮರೆಯಾಯಿತು, 'ನಕಲಿ' ಮೆರೆಯತೊಡಗಿತು. ಜೀವನದ ಮೌಲ್ಯಗಳು ಹೆಸರಿಗೆ ಉಳಿದುಕೊಂಡವು. ಕೆಲವರ ಸೊತ್ತಾಗಿ ಈ ಬುದ್ಧಿವಂತ ಜನ ಪುಣ್ಯ, ಪಾಪ, ಕರ್ಮ, ಸ್ವರ್ಗ, ನರಕಗಳನ್ನು ಸೃಷ್ಟಿಸಿತು; ಬದುಕಿನ ಬೆಲೆ ತಾರದ ಸಂಪ್ರದಾಯಗಳನ್ನು ಜಾರಿಗೊಳಿಸಿತು. ಈ ಜನ ಹುಟ್ಟಿಸಿದ ದೇವರು ಜನರ ಸುಲಿಗೆಗಾರರಾದರು; ಇವರ ಧರ್ಮ ಶೋಷಣೆಗೆ ಅನುಕೂಲವೊದಗಿಸಿತು; ಇವರ ಜೋತಿಷ್ಯ ಜನರಲ್ಲಿ ಭಯವನ್ನುಂಟು ಮಾಡಿತು. ಒಟ್ಟಾರೆ, ಜನಾಂಗ ನಿಸ್ಸತ್ವವಾಯಿತು, ನಿರ್ವೀರ್ಯವಾಯಿತು. ಸ್ವಂತಿಕೆ ಅದಕ್ಕೆ ಉಳಿಯಲೇ ಇಲ್ಲ, ಸ್ವತಂತ್ರ ವಿಚಾರಕ್ಕೆ ಆಸ್ಪದವೇ ಇರಲಿಲ್ಲ. ಎಲ್ಲ ಕೆಲಸಕ್ಕೂ ಪರಾವಲಂಬನ. ತನ್ನ ಅನುಭವಕ್ಕೆ ಬೆಲೆಯಿಲ್ಲದಾಯಿತು. ಕುಳಿತರೆ ನಿಂತರೆ ಎದ್ದರೆ ಮಲಗಿದರೆ

ಉಂಡರೆ ತಿಂದರೆ ನಡೆದರೆ ಎಲ್ಲವನ್ನೂ Currupt ಆದ ದೇವರ ಧರ್ಮದ ಜ್ಯೋತಿ-ಷ್ಯದ ಸಂಪ್ರದಾಯದ ಮಾರ್ಗದರ್ಶನದಲ್ಲಿ ಮಾಡಿ ಸಮಾಜ ಅಂತಸ್ಸತ್ವವನ್ನು ಕಳೆದುಕೊಂಡಿತು.

ಹನ್ನೆರಡನೆಯ ಶತಮಾನದಲ್ಲಿ ಶರಣರು ಮಾನವ ಜೀವನಕ್ಕೆ ಹೊಸ ಮೌಲ್ಯಗಳನ್ನು ಬರಿಸಿದರು, ಆಗ ಸ್ವತಂತ್ರ ವಿಚಾರ ಮಾಡುವ ಶಕ್ತಿ ಜನರಿಗೆ ದೊರಕಿತು. ಜೊಳ್ಳು ಸಂಪ್ರದಾಯಗಳು ಮರೆಯಾದವು. ದೇವರು ಧರ್ಮದ ನಿಜವಾದ ಸ್ವರೂಪವನ್ನು ಶರಣರು ಜನರ ಮುಂದಿಟ್ಟರು. ಸ್ವರ್ಗ, ನರಕ, ಕರ್ಮ, ಪುಣ್ಯ, ಪಾಪ, ಕೈಲಾಸ, ವೈಕುಂಠ, ಮುಂತಾದವುಗಳ ಅಸಂಗತ ಕಲ್ಪನೆಗೆ ಶರಣರು ತೆರೆ ಎಳೆದರು. ಜನರಲ್ಲಿ ಹೊಸ ಶಕ್ತಿ ಸಂಚಾರವಾಯಿತು. ಹೊಸ ನಿಟ್ಟನಿಂದ ಅವರು ಚಿಂತನೆಗೈಯ ತೊಡಗಿದರು. ಅವರ ಚಿಂತನೆಯ ಫಲವೆಂಬಂತೆ ವಚನಗಳು ಮೂಡಿಬಂದವು. ಆ ವಚನಗಳಲ್ಲಿ ಮನುಷ್ಯ ಸಮರ್ಥವಾಗಿ ಬದುಕುವ ಸ್ಪಷ್ಟವಾದ ಚಿತ್ರಗಳಿವೆ. ಅಂಥ ಸ್ಪಷ್ಟ ಚಿತ್ರಗಳನ್ನು ಕೊಡುವ ವಚನಗಳಲ್ಲಿ ಬಸವಣ್ಣನವರ ಒಂದು ವಚನ ಅತ್ಯಂತ ಮಹತ್ವವುಳ್ಳದಾಗಿದೆ, ಆ ವಚನ ಹಿಗಿದೆ,

ಸುಖಬಂದರೆ ಪುಣ್ಯದ ಫಲವೆನ್ನೆನು,
ದುಃಖ ಬಂದರೆ ಪಾಪದ ಫಲವೆನ್ನೆನು,
ನೀ ಮಾಡಿದೊಡಾಯಿತ್ತೆಂದೆನ್ನೆನು,
ಕರ್ಮಕ್ಕೆ ಕರ್ತೃವ ಕಡೆಯೆಂದೆನ್ನೆನು,
ಉದಾಸೀನ ವಿಡಿದು ಶರಣೆನ್ನೆನು.
ಕೂಡಲಸಂಗಮದೇವಾ, ನೀ ಮಾಡಿದುಪದೇಶವು ಎನಗೀ ಪರಿಯಲಿ:
ಸಂಸಾರ ಸವೆಯೆ ಬಳಸುವೆನು.[1]

ಇಲ್ಲಿ ಚಿತ್ರಿತವಾದುದು ನಿಜವಾದ ಜೀವನ; ಮಾನವ ಹೀಗೆ ಬದುಕಬೇಕು. ಆದರೆ ಇಲ್ಲಿಯ ಗಟ್ಟಿತನ ಶರಣ ಜೀವನಕ್ಕೇನೇ ಸಾಧ್ಯವೇನೋ ಎನಿಸುತ್ತದೆ, ಹಾಗೇನೂ ಇಲ್ಲ. ಒಬ್ಬ ಸಾಮಾನ್ಯ ವ್ಯಕ್ತಿಯೂ ಈ ಜೀವನ ಬದುಕಬಲ್ಲ. ಇಷ್ಟೇ ಅವನು ಪೂರ್ವಾಶ್ರಮಗಳನ್ನು ಕಳಚಿಕೊಂಡು ಸ್ವತಂತ್ರ ವಿಚಾರದ ನೆಲೆಗಟ್ಟಿನ ಮೇಲೆ ನಿಲ್ಲಬೇಕು; ಪ್ರತಿಯೊಂದನ್ನು ಪರಾಮರ್ಶಿಸಿ ಒಪ್ಪುವ ಮನೋಭಾವವುಳ್ಳವನಾಗಿರಬೇಕು. ಶರಣರ 'ದಾರಿ'ಯಲ್ಲಿ ಬಂದರೆ ಇದೆಲ್ಲ ಸುಲಭ ಸಾಧ್ಯವಾಗುತ್ತದೆ.

'ಪುಣ್ಯ ಪಾಪ'–ಈ ವಿಚಾರಗಳು ಮನುಷ್ಯನನ್ನು ಬಹಳ ಗೊಂದಲಕ್ಕೀಡು ಮಾಡಿವೆ. ಇವುಗಳ ಹಿಂದೆ 'ಕರ್ಮ ಸಿದ್ಧಾಂತವೊಂದು ಭೂತಾಕಾರವಾಗಿ ನಿಂತಿದೆ. ಹೀಗೆ ಮಾಡಿದರೆ ಹೀಗೆ, ಹಾಗೆ ಮಾಡಿದರೆ ಹಾಗೆ, ಇದು ಹಿಂದಿನ

---

1. ಶಿ. ಶಿ. ಬಸವನಾಳ : ಬಸವಣ್ಣನವರ ವಚನಗಳು, ವಚನ ಸಂಖ್ಯೆ ೬೯೪.

ಜನ್ಮದ ಫಲ ಎಂಬ ವಿಚಾರ ದಾರಿತಪ್ಪಿಸುತ್ತದೆ. ನಿಮಿಷ ನಿಮಿಷಕ್ಕೆ ಈ ಪುಣ್ಯ-ಪಾಪಗಳ ಕಣ್ಮುಂದೆ ಸುಳಿದು ಭಯವನ್ನು ಹುಟ್ಟಿಸುತ್ತವೆ; ಸ್ವತಂತ್ರವಾಗಿ ಬದುಕಲು ಇವು ಆಸ್ಪದ ಕೊಡುವುದೇ ಇಲ್ಲ. ನಮ್ಮ ಎಲ್ಲ ಕೃತ್ಯಗಳೂ ಇವುಗಳ ಚಿಕ್ಕ ರಂಧ್ರಗಳಲ್ಲಿ ಹಾದುಹೋಗಲೇ ಬೇಕು. ಹೀಗೆ ಹೀಗೆ ಮಾಡು ಪುಣ್ಯ ಬರುತ್ತದೆ. ಎಂದು ಕರ್ಮಗಳನ್ನು ಜನರ ಮೇಲೆ ಹೊರುವ ಸಂಪ್ರದಾಯ ಎಂದಿನಿಂದಲೂ ಇದೆ. ಹೀಗೆ ಮಾಡದಿದ್ದರೆ ಪಾಪ ಬರುವದು ಖಂಡಿತ ಎಂಬ ಕತ್ತಿ ಆವಾಗಲ ತಲೆಯ ಮೇಲೆ ಅಲುಗಾಡುತ್ತಿರುತ್ತದೆ. ಆದರೆ ಈ ಪುಣ್ಯ-ಪಾಪಗಳು ನಿಜವಾಗಿಯೂ ಏನು ' ' ಪುಣ್ಯಪಾಪಂಗಳೆಂಬವು ತಮ್ಮ ಇಷ್ಟವು ಕಂಡಿರೊ, ಅಯ್ಯಾ ಎಂದಡೆ ಸ್ವರ್ಗ ಎಲವೊ ಎಂದಡೆ ನರಕ'[1] "ಮನಸಿನ ಕಾರ್ಯವೇ ಪುಣ್ಯ ಪಾಪ ನೋಡಯ್ಯಾ...."[2] ಎಂಬುದು ಶರಣರ ವಾಣಿ. ಮಾಡಿ ನೀಡಿ ಪುಣ್ಯಗಳಿಸುತ್ತೆನೆಂಬುದು ಹುಸಿ "ಮಣ್ಣ ಕೊಟ್ಟ ಪುಣ್ಯವ ಪಡೆದನೆಂಬವನ ಭಾಷೆ ಹೊಲ್ಲ ಹೊಲ್ಲ. ....ಜ್ಯೋತಿಯ ಬೆಳಗಿ ಪಾಪವ ಕಳೆವೆನೆಂಬವರ ಭಾಷೆ ಹೊಲ್ಲ ಹೊಲ್ಲ...."[3] ಎನ್ನುತ್ತಾರೆ ಸಿದ್ಧರಾಮದೇವರು. ಅವರ ಇನ್ನೊಂದು ವಚನದಲ್ಲಿ ಹೀಗೆ ಹೇಳುತ್ತಾರೆ : "ಸುಖಕ್ಕೆ ದೈವವೆಂದು, ದುಃಖಕ್ಕೆ ವಿಧಿಲಿಪಿಯೆಂದು, ಸುಖಕ್ಕೆ ಪುಣ್ಯವೆಂದು; ದುಃಖಕ್ಕೆ ಪ್ರಾರಬ್ಧವೆಂದು ನುಡಿವರಯ್ಯ ಸಿದ್ಧಾಂತಿಗಳು. ಸುಖವೇ ದೈವವೆನವಾಗಿ ಮಾಡುವ ಕ್ರಿಯೆಯಲರಿಯಬಂದಿತು. ಸುಖವು ದೈವವಲ್ಲ; ದೈವವದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಕೂಟ."[4]

ಪುಣ್ಯಪಾಪದ, ಸುಖದುಃಖದ ತಿಳವಳಿಕೆ ಹೀಗಿರಲು ಕರ್ಮಫಲದಿಂದ ಪುಣ್ಯ ಪಾಪ, ಸುಖದುಃಖ ಎಂದು ಹೇಳಿ, ಆ ಕರ್ಮಫಲವನ್ನು ಇಲ್ಲದಂತೆ ಮಾಡುತ್ತಿವೆ. ದುಃಖದೂರ ಮಾಡುತ್ತಿವೆ, ಪುಣ್ಯವನ್ನು ಬರಿಸುತ್ತೇವೆ ಎಂದು ಶೋಷಿಸುವ ಅನೇಕ ಉಪಾಯಗಳನ್ನು ಜನರ ಮುಂದಿಟ್ಟು ಹೆಜ್ಜೆಹೆಜ್ಜೆಗೆ ಅವರನ್ನು ಭಯಗೊಳ್ಳುವಂತೆ ಮಾಡಲಾಗಿದೆ.

ಪುಣ್ಯ-ಪಾಪಗಳ ಸರಿಯಾದ ಕಲ್ಪನೆಯಿದ್ದವನು ಜೀವನ ಹೇಗೆ ಬರುವುದೋ ಹಾಗೆಯೇ ಅದನ್ನು ಸ್ವೀಕರಿಸುತ್ತಾನೆ. ಇದು ಸುಖ, ಪುಣ್ಯದ ಫಲ ಎಂದು ಹಿಗ್ಗುವುದಿಲ್ಲ, ಇದು ದುಃಖ ಪಾಪದ ಫಲ ಎಂದು ಅಳುವದಿಲ್ಲ. ಧೀರನಾಗಿ ಜೀವನವನ್ನು ಇದ್ದುದಿದ್ದಂತೆ ಸ್ವೀಕರಿಸಿ ತನ್ನ ಸದಾಚಾರದಿಂದ, ಸುವಿಚಾರದಿಂದ ಅದನ್ನು ಸಿಂಗರಿಸುತ್ತಾನೆ.

---

1. ಶಿ. ಶಿ. ಬಸವನಾಳ : ಬಸವಣ್ಣನವರ ವಚನಗಳು ವಚನ ಸಂಖ್ಯೆ ೨೪೦.
2. ಹಳಕಟ್ಟಿ : ವಚನಶಾಸ್ತ್ರಸಾರ ಭಾಗ ೩, ಪುಟ ೬ ವಚನ ೨೭.
3. ಅದೇ " " ೨೭
4. ಅದೇ " " ಪುಟ ೭ ವಚನ ೩೦

ಭಾರತೀಯ ಸಂಪ್ರದಾಯಗಳು ದೈವವಾದವನ್ನು ಹರಡಿ ಜನರ ಗಂಡಸುತನವನ್ನೇ ಕಳೆದುಬಿಟ್ಟಿವೆ. ಎಲ್ಲವನ್ನೂ ದೈವದ ಹೆಸರಿಗೆ ಸೇರಿಸುವದು ಏನಾದರೂ ದೇವರಿಂದಲೇ ಆಯಿತು ಎನ್ನುವ ಭಾವನೆ ಶುದ್ಧ ಅಪಾಯದ್ದು; ಮನುಷ್ಯನ ಶಕ್ತಿ ಸಾಮರ್ಥ್ಯಕ್ಕೆ ಇಲ್ಲಿ ಕೊಡಲಿ ಪೆಟ್ಟು ಬೀಳುತ್ತದೆ. ದೈವವಾದಿ ಎಂದೆಂದಿಗೂ ಹೇಡಿ; ಅವನು ವೀರನಾಗಿ ಮೆರೆಯಲಾರ; ಜೀವನವನ್ನು ಭೋಗಿಸಲಾರ. ಅವನೇ ನಿಷ್ಕ್ರಿಯ, ನಿರ್ವೀರ್ಯ. "ಕೂಡಲಸಂಗ ಬರೆದ ಬರಹವ ತಪ್ಪಿಸಲಾಗದು" ಎಂಬ ತಿಳವಳಿಕೆಯಿದೆ. ಆದರೆ ಈ ಮಾತು ಹೇಡಿತನದ ಲಕ್ಷಣವಲ್ಲ. ದೇವರು ಸರ್ವಶಕ್ತ, ಸರ್ವಜ್ಞ ನಿಜ. ಆದರೆ ಭಕ್ತ ಕಡಿಮೆ ಏನಲ್ಲ ದೇವನಲ್ಲಿ 'ಶಕ್ತಿ' ಇದ್ದರೆ, ಇವನಲ್ಲಿ 'ಹೋರಾಟ'ವಿದೆ. "ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಎರಡಾಳಿನ ಭಾಷೆಯ ಕೇಳಿರಣ್ಣಾ, ಕೊಲುವೆನೆಂಬ ಭಾಷೆ ದೇವನದಾದರೆ' ಗೆಲುವೆನೆಂಬ ಭಾಷೆ ಭಕ್ತನದು."[1] ಇಂಥ 'ಫಲ'ವಿದ್ದವನು ಎಂದೂ "ನೀ ಮಾಡಿದೊಡೆ ಆಯಿತ್ತು" ಎನ್ನನು. ಜೀವನ ಸಹಜ; ಇಲ್ಲಿಯ ಆಗು-ಹೋಗುಗಳು ಸಹಜ ಕಾಲಕ್ಕೆ ತಕ್ಕಂತೆ ಅವು ನಡೆಯುತ್ತವೆ; ನಡೆಯಲೇಬೇಕು. ಅವನೆಲ್ಲ ದೇವರಿಗೆ ಆರೋಪಿಸುತ್ತ ಹೋಗುವುದು ಸಲ್ಲ. ಹಾಗೆ ಮಾಡುತ್ತ ಹೋದರೆ ಮನುಷ್ಯ ಸ್ವಂತಿಕೆ ಕಳೆದುಕೊಂಡು ಸಂಪ್ರದಾಯಗಳಿಗೆ ದಾಸನಾಗಿ ಹೇಡಿಯಾಗುತ್ತಾನೆ. ಹೇಡಿಗೆ ದೇವರೆಂದೂ ಒಲಿಯುವುದಿಲ್ಲ. ಸಹಜವಾಗಿ ನಡೆಯುವ ಜೀವನವನ್ನು ಸಹಜವಾಗಿ ಒಪ್ಪಿಕೊಳ್ಳಬೇಕು; ಇಲ್ಲಿ ದೇವರು ಧರ್ಮದ ಮಾತು ಸಲ್ಲ.

ಎಲ್ಲಕ್ಕೂ-ಕರ್ಮಕ್ಕೂ-ದೇವರೇ ಕಡೆ; ಅವನಿಂದಲೇ ಕರ್ಮ ನೀಗುವುದು, ಅವನು ಮಾಡಿದರೆ ಎಲ್ಲ ಆಗುವದು ಎಂಬುದೂ ಹೇಡಿತನದ ಲಕ್ಷಣ. "ನೀನೊಲಿದರೆ ಕೊರಡು ಕೊನರುವುದಯ್ಯ" ಎಂಬ ಮಾತು ನಿಜ. ಆದರೆ ಆ ಮಾತಿನಲ್ಲಿ ವಿವೇಕವಿದೆ, ಎಚ್ಚರವಿದೆ; ಅದು ಹೇಡಿಯಾಗಿ "ನೀನೇಗತಿ" ಎಂದು ಅಂದ ಮಾತಲ್ಲ ಭಕ್ತಿಯ ಕಾವಿನಲ್ಲಿ ದೇವರ ಒಲುಮೆ ಅರಳುತ್ತದೆ. ಈ ಭಕ್ತಿಯ ಕಾವು ಇರುವವನು ಎಂದೂ ಕರ್ಮಕ್ಕೆ ಕರ್ತೃವೇ ಕಡೆ ಎನ್ನುವದಿಲ್ಲ. "ಕರ್ಮ ಫಲಗೂಡಿ ಕೂಡಲಸಂಗಯ್ಯಂಗೆ ಆತ್ಮ ನೈವೇದ್ಯ"[2] ಮಾಡುವ ಭಕ್ತನ ಭಕ್ತಿ ತನ್ನತನ ಇಲ್ಲದ್ದಲ್ಲ. ಆದರೆ ಈ ತನ್ನತನದಲ್ಲೇ 'ದೇವ' ಒಡಮೂಡಿ ನಿಲ್ಲುತ್ತಾನೆ; ಈ ತನ್ನತನವೆ 'ದೇವ'ನಾಗಿ ಅರಳುತ್ತದೆ ಎಂದೂ ಅನ್ನಬಹುದು.

"ಉದಾಸೀನವಿಡಿದು ಶರಣೆನ್ನೆನು" ಎನ್ನುವ ಮಾತು ಒಂದು ಮಾತೆನ್ನಬಹುದೇ ? ಬಹಳ ಅರ್ಥ ಅದರಲ್ಲಿ ಹುದುಗಿದೆ. ತಿಳುವಳಿಕೆ, ಎಚ್ಚರಿಕೆ, ಕೆಚ್ಚು, ವಿವೇಕ-ಎಲ್ಲ ಈ ಮಾತಿನಲ್ಲಿ ಸಮಾವೇಶಗೊಂಡಿವೆ; ಅಲ್ಲದೆ ಶರಣನ ಜೀವನದ ನಿಜ ಚಿತ್ರ ಇಲ್ಲಿದೆ.

---

1. ಶಿ. ಶಿ. ಬಸವನಾಳ : ಬಸವಣ್ಣನವರ ವಚನಗಳು ವಚನ ಸಂಖ್ಯೆ ೬೭೭.
2. ಅದೇ „ „ ೭೭೩.

ಎಲ್ಲವೂ ದೇವರಿಂದಲೇ, ನಮ್ಮ ಕೈಯಲ್ಲೇನಿದೆ, ನಮ್ಮ ಕರ್ಮಕ್ಕೆ ತಕ್ಕ ಫಲ ಮುಂತಾಗಿ ವಿಚಾರವಿದ್ದಾಗ ಏನು ಮಾಡಿದರೆ ಏನಿದೆ? ಅವನು ಮಾಡಿದ್ದೇ ಆಗುವದಲ್ಲಾ ಎಂಬ ಭಾವ ಮನುಷ್ಯನನ್ನು ಉದಾಸೀನನನ್ನಾಗಿ ಮಾಡುವುದು; ಈ ಔದಾಸಿನ್ಯ ಅವನ ಪತನ. ಉದಾಸೀನದಿಂದ ದೇವರನ್ನು ನೆನೆವುದು ಮಹಾಘಾತುಕ ಕೆಲಸ; ಇಂಥ ಆತ್ಮ ವಂಚನೆ ಮತ್ತೆಲ್ಲಿಯೂ ಇಲ್ಲ. ಶರಣೆನ್ನದಿದ್ದರೆ ನಡೆಯುವುದಿಲ್ಲವಲ್ಲ, ಯಾಕಂದರೆ ಎಲ್ಲವೂ ಅವನ ಕೈಯಲ್ಲಿದೆ! ನಮಗೆ ಶರಣೆನ್ನದೆ ಬೇರೆ ಯಾವ ದಾರಿಯಿದೆ ಎಂಬುದೂ ಉದಾಸೀನವೇ ಇಂತಹ ಭಾವವಿರುವಲ್ಲಿ ಭಕ್ತಿಯಿಲ್ಲ, ಕಾಯಕವಿಲ್ಲ, ವಿಚಾರವಿಲ್ಲ; ಧೈರ್ಯವಂತೂ ಮೊದಲೇ ಇಲ್ಲ. ಸುಖ ಬಂದರೆ ಪುಣ್ಯದ ಫಲವೆನ್ನದ, ದುಃಖ ಬಂದರೆ ಪಾಪದ ಫಲವೆನ್ನದ, ಭಕ್ತಿಯ ಕೂರಲಗನೆತ್ತಿ ಹೋರಾಟಕ್ಕೆ ನಿಂತ ಭಕ್ತ ಶರಣೆನ್ನುತ್ತಾನೆ—ಸಂತೋಷದಿಂದ: ಉದಾಸೀನದಿಂದಲ್ಲ. ಈ ಭಕ್ತನಿಗೆ ಆಸೆ ಆಮಿಷಗಳಿಲ್ಲ, ದೇವರೇ ಸರ್ವಕ್ಕೆ ಕಡೆ ಎಂಬ ದುರ್ಬಲ ಮನೋ ಭಾವವಿಲ್ಲ. ಈತನದು ವೀರತನದ ಶರಣು.

ಈ ಉಪದೇಶ ಯಾರು ಮಾಡಿದ್ದು? ದೇವರೇ ಮಾಡಿದ್ದಂತೆ "ನೀಮಾಡಿದುಪದೇಶವು ಎನಗೀಪರಿಯಲಿ'' ಎನ್ನುತ್ತಾರೆ ಬಸವಣ್ಣನವರು. ಇಂಥ ಉಪದೇಶ ಮಾಡಿದ ದೇವರು ನಿಜವಾದ ದೇವರು'' ಆವಾಗಲೂ ಲೋಗರಮನೆಯ ಕಾಯ್ದುಕೊಂಡಿಪ್ಪ' ದೈವದಂತಲ್ಲ ಈ ದೈವ. ''ಹೋಗೆಂದರು ಹೋಗದ ಕರಕನಿಷ್ಠದ ದೈವ''ವಿದಲ್ಲ. ಭಕ್ತರನಾಶ್ರಯಿಸಿಕೊಂಡು ಅವರನ್ನು ಪೀಡಿಸುವ, ಶೋಷಿಸುವ, ಶೋಷಕರ ಕೈಗೊಂಬೆಯಾಗಿರುವ ದೈವವಿದಲ್ಲ. ಭಕ್ತನಿಗೆ ಸ್ವಂತಿಕೆಯನ್ನಿತ್ತು, ವೀರತನದಿಂದ ಅವನನ್ನು ಹೋರಾಟಕ್ಕೆ ಹಚ್ಚುವ ದೈವವಿದು.

ಈ ಉಪದೇಶದಂತೆ "ಸಂಸಾರ ಸವೆಯೆ ಬಳಸುವನು'' ಎನ್ನುತ್ತಾರೆ ಬಸವಣ್ಣನವರು. ಅವರ ಬಳಕೆಯಿಂದ ಸಂಸಾರ ಸವೆಯುತ್ತದೆ; ಕೊನೆಗದು ಇಲ್ಲವಾಗುತ್ತದೆ; ಸಾಮರಸ್ಯವಾಗುತ್ತದೆ.



ವಿಶ್ರಾಂತಿ, ಊಟ, ವಸತಿಗಳು ದೊರಕೊಂಡಾಗ ವಿಚಾರವು ಹಣಿಕಿಕ್ಕಿ ತನ್ನ ಕಾರ್ಯ ಕ್ಷೇತ್ರವನ್ನು ನಿರ್ಮಾಣ ಮಾಡಿಕೊಳ್ಳುತ್ತದೆ.

"ಅನ್ನಬ್ರಹ್ಮ", 'ಮಧುವಾತಾಋತಾಯತೆ' ಎಂಬ ವೇದ ಮಂತ್ರಗಳಾಗಲಿ, 'ಸಹನಾವವತು ಸಹನೌಭುನಕ್ತು' ಎಂಬ ಮಂತ್ರಗಳಾಗಲಿ ಸಮೃದ್ಧಿಯ ಅಪೇಕ್ಷೆಯನ್ನು ಶಾಂತಿ ನೆಮ್ಮದಿಯ ಅಪೇಕ್ಷೆಗಳನ್ನು ಎತ್ತಿ ತೋರಿಸುವಂತೆ 'ಅಸತೋಮಾ ಸದ್ಗಮಯ', 'ಆನಂದೋ ಬ್ರಹ್ಮೇತಿ ವ್ಯಜಾನಾತೆ...." ಮುಂತಾದ ಮಂತ್ರಗಳು ತಾತ್ವಿಕ ಅಭಿಕ್ಷೆ, ಜಿಜ್ಞಾಸೆಯನ್ನು ಸ್ಫುಟವಾಗಿ ವ್ಯಕ್ತಗೊಳಿಸುತ್ತವೆ. ಈ ಎರಡೂ ಬಗೆಯ ಮಂತ್ರಗಳು ಮಾನವನ ಭೌತಿಕ ಸಾಮಾಜಿಕ ಆಧ್ಯಾತ್ಮಿಕ ಮುಖಗಳನ್ನು ತೋರಿಸುತ್ತವೆ. ಇದು ಜೀವನದ ಅವಶ್ಯಕತೆಯೇ ವಿನಃ ಆಶ್ಚರ್ಯದ ಸಮಾಧಾನವಲ್ಲ. ಅರಿಸ್ಟಾಟಲನೆಂಬ ಗ್ರೀಕ ತತ್ವಜ್ಞಾನಿಯು ಕೂಡ ಇಂಥ ಪರಿಸರದ ಮಹತ್ವ ಹಾಗೂ ಅವಶ್ಯಕತೆಗಳ ಅರಿವುಳ್ಳವನಾಗಿದ್ದುದನ್ನು ಅವನ ಕೃತಿ (Meta 1.2. p982. b. 18) ಯಲ್ಲಿ ನೋಡಬಹುದು. ಮಾನವ ಸಮಾಜವು ನಾಗರಿಕ ಜೀವನ ಪಥದಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿರುವದು ಮತ್ತು ಆ ಸಮಾಜ ಘಟಕಗಳಾದ ವ್ಯಕ್ತಿಗಳು ಆತ್ಮ ವಿಮರ್ಶಾ ಸಾಮರ್ಥ್ಯವನ್ನು ಪಡೆದಿರುವುದು ದಾರ್ಶನಿಕ ದೃಷ್ಟಿಯೊಡಮೂಡುವುದರ ಪೂರ್ವಾವಸ್ಥೆಯಾಗಿರುತ್ತವೆಯೆಂಬುದನ್ನು ಎಲ್ಲ ಪಂಡಿತರು ತಿಳಿದುಕೊಂಡಿದ್ದಾರೆ. ದರ್ಶನವು ಮಾನವತೆಯ ಬಾಲ್ಯಾವಸ್ಥೆಯ ಲಕ್ಷಣವಾಗಿರದೆ ಪ್ರಬುದ್ಧತೆಯ ದ್ಯೋತಕನಾಗಿರುತ್ತದೆ. ಹೆಗಲ್ ಎಂಬ ತತ್ವಜ್ಞಾನಿಯು ಇದರ ವಿಚಾರವನ್ನು ಸ್ಫುಟವಾಗಿ ಹಾಗೂ ಆಕರ್ಷಕವಾಗಿ ತಿಳಿಸುವುದು ಹೀಗೆ : As the thought of the world, it makes its first appearance at a time when the actual fact has cousumeted its process of formation and is now fully natured... The owl of Minerva does not start upon its flight till the evening twilight has begun to fall."

ತಾತ್ವಿಕ ಭಾವವು ಸ್ವಪ್ರೇರಣೆಯಿಂದ ಕಾರ್ಯೋನ್ಮುಖವಾದಾಗ ಅದರ ವಿಷಯವು ಸಿದ್ಧಿಗೊಂಡಿರುತ್ತದೆ. ತಾತ್ವಿಕ ಪ್ರಶ್ನೆಗಳು ಉತ್ತರಗಳನ್ನು ನಿತ್ಯವೂ ಅಪೇಕ್ಷಿಸುತ್ತವೆ. ತತ್ವಾಲೋಚನೆಯು ಸ್ವಯಂ ಸ್ಫೂರ್ತಿಜನ್ಯವಾಗುವದೂ, ನಾಗರಿಕ ಜೀವನದ ಪ್ರಗತಿಯೂ ಒಂದಕ್ಕೊಂದು ಪೋಷಕವಾಗಿವೆ. ನಾಗರಿಕ ಜೀವನದ ಕಣ್ಣು ತತ್ವಜಿಜ್ಞಾಸೆ. ಇವೆರಡರ ಪಕ್ವತೆಯ ಫಲವನ್ನು ಸಂಸ್ಕೃತಿಯಲ್ಲಿ ಕಾಣಬಹುದು. ಸಂಸ್ಕೃತಿಯಲ್ಲಿ ಮಾನವನ ಅನುಭವ ಸುವ್ಯವಸ್ಥೆಗೊಳ್ಳುವುದು ನಡೆದೇ ಇರುತ್ತದೆ. ಇವುಗಳು ಸುವ್ಯವಸ್ಥೆಗೊಂಡಾಗ ರಾಜತಂತ್ರ, ಕಲೆ, ಕಾನೂನ್ನು, ಧರ್ಮ ಮುಂತಾದವುಗಳು ರೂಪಗೊಳ್ಳುತ್ತವೆ. ಇವು ಮಾನವನಲ್ಲಿಯ ಪ್ರಜ್ಞೆಯ ದ್ಯೋತಕಗಳಾಗಿವೆ. ಜೀವನವನ್ನು ಶಾಂತಿಯೆಡೆ, ಸಮೃದ್ಧಿಯೆಡೆ ನಡೆಸಿಕೊಂಡು ತುಂಬು ಜೀವನವನ್ನು ಸಾಗಿಸುವದರಲ್ಲಿ ಪ್ರಜ್ಞೆಯ ಪಾತ್ರ ಹಿರಿದಾಗಿರುವದು. ಮಾನವನು ಉಳಿದ ಪ್ರಾಣಿಗಳಿಂದ ಪ್ರತ್ಯೇಕಗೊಂಡಿರುವದಕ್ಕೂ, ಪ್ರಭುತ್ವವನು

ಪಡೆದಿರುವದಕ್ಕೂ ಈ ಪ್ರಜ್ಞೆಯೇ ಕಾರಣವಾಗಿದೆ. ಈ ಪ್ರಜ್ಞೆಯು ಕಲೆ, ಕಾನೂನು, ರಾಜತಂತ್ರಗಳಿಗಿಂತ ಧರ್ಮದಲ್ಲಿ ವೈಶಿಷ್ಟ್ಯಪೂರ್ಣವಾಗಿ ವ್ಯಕ್ತವಾಗಿರುವದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಧರ್ಮವು ಮಾನವನ ನಾಗರಿಕ ಮತ್ತು ಸಾಂಸ್ಕೃತಿಕ ಸೃಷ್ಟಿಯಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿದೆ. ಮಾನವನ ಪ್ರಾಚೀನ ಚರಿತ್ರೆಯ ಆರಂಭವು ಧರ್ಮಬುದ್ಧಿಯಿಂದಲೇ ಆಗಿರುವದನ್ನೂ, ಕಲೆ ಮುಂತಾದವುಗಳು ಈ ಭಾವನೆಯಿಂದ ಪ್ರೇರಿತ, ಪೋಷಿತವಾಗಿರುವುದನ್ನೂ ಆತನ ಚಾರಿತ್ರ ದೂದ್ದಕ್ಕೂ ನೋಡ ಬಹುದಾಗಿದೆ. ಧರ್ಮ ಭಾವನೆಯಷ್ಟು ಪುರಾತನ ಸ್ಫೂರ್ತಿಯ ಕೇಂದ್ರವು ಮಾನವ ಸ್ವಭಾವದಲ್ಲಿ ಬೇರೊಂದು ಕಂಡುಬರುವದಿಲ್ಲ. ಆತನ ಪ್ರಾಚೀನ ಚರಿತ್ರೆಯ ಅಧ್ಯಯನವು ಈ ಮಾತಿಗೆ ಸಾಕ್ಷಿಯಾಗಿದೆ. ಧರ್ಮಭವದ ಪ್ರಬುದ್ಧಾವಸ್ಥೆಯ ಚಟುವಟಿಕೆಗಳು ಮಾನವ ಹಾಗೂ ಜಗತ್ತುಗಳ ಕುರಿತ ಚಿಂತನೆಯಾಗಿದ್ದು ಇವುಗಳ ಬಾಂಧವ್ಯವನ್ನು ದೇವರಲ್ಲಿ ಹುಡುಕುವವರಲ್ಲಿ ಶಾಂತಿ ಮತ್ತು ತೃಪ್ತಿಗಳ ಸಿದ್ಧಿಯಲ್ಲಿ ಸಾಫಲ್ಯವನ್ನು ಪಡೆದಿದೆ. ತತ್ವಜ್ಞಾನವೆಂದು ಹೇಳಲಾದ ಮಾನವನ ಪ್ರಜ್ಞೆಯ ಕ್ರಿಯೆಯು ಇದನ್ನೇ ಬೇರೆ ರೀತಿಯಿಂದ ಮಾಡಿದೆಯೆಂದು ಕಂಡು ಬರುತ್ತದೆ. ಒಟ್ಟಿನಲ್ಲಿ ಇವೆರಡೂ ಮಾನವನ ವೈಶಿಷ್ಟ್ಯಗಳು. ಇವೆರಡೂ ಜೀವ, ಜಗತ್ತು ಮತ್ತು ಪರವಸ್ತುವಿನ ದರ್ಶನವನ್ನು ಪಡೆದಿವೆ. ಧರ್ಮದ ಆಸಕ್ತಿಯನ್ನು ವ್ಯಾವಹಾರಿಕತೆ ಮತ್ತು ಅಧ್ಯಾತ್ಮಿಕತೆಗಳಲ್ಲಿ ಕಾಣಬೇಕೇ ವಿನಃ ಬೌದ್ಧಿಕ ಮತ್ತು ತಾರ್ಕಿಕತೆಗಳಲ್ಲಿ ಕಾಣಲಾಗದು. ಸುಪ್ರಬುದ್ಧ ಹಾಗೂ ಜೀವಂತಧರ್ಮವು ತತ್ವಜ್ಞಾನದಂತೆ ವೈಚಾರಿಕ ಸ್ವರೂಪವನ್ನು ತಾಳಿ ದೈವಶಾಸ್ತ್ರವಾಗಿಬಿಡುತ್ತದೆ. ಧಾರ್ಮಿಕ ಸಿದ್ಧಾಂತಗಳ ಪರಿಶುದ್ಧಗೊಂಡು ರಹಸ್ಯವಾದುದನ್ನು ಬೋಧಿಸುವಾಗ ತತ್ವಜ್ಞಾನಕ್ಕೆ ಸರಿದೊರೆಯಾಗಿ ವಿಶ್ವವನ್ನು ಕುರಿತು ತನ್ನದೇ ಆಗಿರುವ ತಾರ್ಕಿಕ ಸಿದ್ಧಾಂತಗಳನ್ನು ನಿವೇದಿಸುತ್ತದೆ. ಅಂದರೆ, ಧಾರ್ಮಿಕ–ಪ್ರಜ್ಞೆಯು ವೈಚಾರಿಕ ರೂಪವನ್ನು ಒಳಗೊಳಗೇ ತಾಳುತ್ತ ತನ್ನನ್ನು ತಾನು ದಾರ್ಶನಿಕ ಬುದ್ಧಿಯತ್ತರಕ್ಕೆ ಎತ್ತರಿಸಿಕೊಳ್ಳುತ್ತದೆ. ಈ ಬೆಳವಣಿಗೆಯು ಆಧುನಿಕ ಅರ್ಥದಲ್ಲಿ ಧರ್ಮಸಿದ್ಧಾಂತವಾಗಿರದೆ ಮಾನವ ಚರಿತ್ರೆಯ ಬೆಳವಣಿಗೆಯಲ್ಲಿ ಅದರ ಪ್ರಗತಿಯು ಹೇಗೆ ಆಯಿತು ಎಂಬುದಾಗಿರುತ್ತದೆ. ಇದನ್ನು ಉದಾಹರಣಪೂರ್ವಕವಾಗಿ ವಿವರಿಸುವದು ನಮ್ಮ ತಿಳವಳಿಕೆಗೆ ತುಂಬಾ ಅನುಕೂಲವಾಗಿರುವುದರಿಂದದನ್ನಿಲ್ಲಿ ಮಾಡಲಾಗುವುದು. ಈ ಕಾರ್ಯ ಮಾಡಲು ಮೊದಲು ವೈದಿಕ ಧರ್ಮವನ್ನು ನಂತರ ಕ್ರೈಸ್ತ ಧರ್ಮವನ್ನು ಎತ್ತಿಕೊಳ್ಳಲಾಗುವುದು.

ಭಾರತೀಯರ ಅದೇಕೆ ಪ್ರಪಂಚದ ಪುರಾತನ ಗ್ರಂಥಗಳಾದ ವೇದಗಳು ಬಹುದೇವತಾ ಇಲ್ಲವೆ ಅನೇಕತಾವಾದವನ್ನು ಪ್ರತಿಪಾದಿಸುವ ಧಾರ್ಮಿಕ ಗ್ರಂಥಗಳೆಂದ ಪ್ರಸಿದ್ಧವಿದೆ. ಬಹುದೇವತಾವಾದವು ವೇದಗಳ ವಿಷಯವೆಂದು ಕೆಲವರು ಹೇಳಿದರೆ ಇನ್ನು ಕೆಲವುಪ್ರಾಚ್ಯ ಪಂಡಿತರೆಂದು ಹೆಸರಾದ ಪಾಶ್ಚಿಮಾತ್ಯರು ಆ ದೇವತೆಗಳೆಲ್ಲ ದೇವತೆಗಳಾಗಿರದೆ ನಿಸರ್ಗಶಕ್ತಿಗಳ ಮೂರ್ತರೂಪಗಳೆಂದು ತಿಳಿಸುವುದೂ ಉಂಟು. ಇವೆರಡೂ ಮಹತ್ವದ ವಿಚಾರಗಳಾಗಿವೆ. ಯಾಕಂದರೆ ಇವು ತಜ್ಞರ ವಿಚಾರ– ಗಳಾಗಿರುತ್ತವೆ. ಇವುಗಳ ಗುಣದೋಷಗಳ ವಿಚಾರವನ್ನು ಬದಿಗಿರಿಸಿ ಪ್ರಾಜ್ಞರೂ

ಇಲ್ಲದಿಲ್ಲ. ಅದೇ ರೀತಿ ಈ ವಿಚಾರಗಳ ಪರಾಮರ್ಶೆಯನ್ನು ಮಾಡಿದವರು ಇದ್ದಾರೆ. ವೈದಿಕ ದೇವತೆಗಳ ಅಧ್ಯಯನವನ್ನು ಮಾಡಿದವರಲ್ಲಿ ಕೆಲವರು ತಮ್ಮ ಸಂತೃಪ್ತಿಯನ್ನು ಹೀಗೆ ವ್ಯಕ್ತಗೊಳಿಸುತ್ತಾರೆ. ವೈದಿಕ ದೇವತೆಗಳು ನಿಸರ್ಗಶಕ್ತಿ ಪ್ರಭೇದಗಳ ಮೂರ್ತ ರೂಪಗಳಾಗಿವೆಯೆಂದು ನಾವು ಒಪ್ಪಿಕೊಂಡರೂ ಸಹ ಆ ದೇವತೆಗಳ ಸೃಷ್ಟಿಯನ್ನು ಮಾಡಿದ್ದು ಅವುಗಳ ಉದಾತ್ತ ಸ್ವಭಾವವನ್ನು ತೋರಿಸ-ಲೊಸುಗವೇ ವಿನ : ಅನುದಾತ್ತತೆಯನ್ನು ಚಿತ್ರಿಸಲಿಕ್ಕಲ್ಲ. ಅವುಗಳಲ್ಲಿ ಪ್ರಗತಿಪರತೆಯನ್ನು ಕಾಣುವೆವೇ ವಿನ : ವಿಗತಿಯನ್ನಲ್ಲ. ಅವರು ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ ಹೀಗೆ ವಿಚಾರಿಸುತ್ತಾರೆ. ವೈದಿಕ ದೇವತೆಗಳನ್ನು ಕುರಿತು ವೈದಿಕ ದೇವತೆಗಳಿಗೆ ಸ್ವತಂತ್ರವಾದ ವ್ಯಕ್ತಿತ್ವಗಳಿಲ್ಲ. ಯಾಕಂದರೆ ಅವೆಲ್ಲ ಒಂದರಲ್ಲಿ ಬಂದು ಬೆರೆತುಕೊಂಡು ಹೊಗುತ್ತವೆ. ಅರ್ಚಕನ ಪೂಜೆಯ ಕಾರ್ಯದಲ್ಲಿ. ಹೀಗೆ ಕಂಡುಬರುವಲ್ಲಿ ಅವುಗಳ ನೈಸರ್ಗಿಕ ವ್ಯಕ್ತಿಮತ್ತತೆಯನ್ನು ಒಪ್ಪಿಕೊಳ್ಳುವ-ದನ್ನು ತಿರಸ್ಕರಿಸದಿರುವುದನ್ನು ನೋಡುತ್ತೇವೆ. ಇನ್ನು ಕೆಲವುಸಲ ಆ ದೇವತೆಗಳು ಅರೆನೈಸರ್ಗಿಕವೆಂದೂ ಹೇಳುವರು. ಹೀಗೆ ಅವುಗಳಿಗಿರುವ ಅರೆನೈಸರ್ಗಿಕತೆಯು ಅವುಗಳು ನೈಸರ್ಗಿಕತೆಯಿಂದ ಮುಕ್ತತೆಯ ಸಾಧ್ಯತೆಯನ್ನು ತೋರಿಸುವವೆಂದೂ ಊಹಿಸುವರು. ಅದನ್ನು ಸಿದ್ಧಾಂತಗೊಳಿಸಲು ಆ ದೇವತೆಗಳ ಚಾರಿತ್ರಿಕ ಬೆಳವಣಿಗೆಯನ್ನು ರೂಪಿಸುವರು. ಇದರ ಜೊತೆಯಲ್ಲಿ ಮಾನವನ ಪ್ರಬುದ್ಧಾವಸ್ಥೆಯು ವ್ಯಕ್ತವಾಗುತ್ತಿದೆಯೆಂದು ಗುರುತಿಸುವರು. ಹೀಗೆ ವೈದಿಕ ದೇವತೆಗಳನ್ನು ಕುರಿತ ವೈಚಾರಿಕ ಪ್ರತಿಕ್ರಿಯೆಯ ನಾನಾ ಬಗೆಗಳನ್ನು ನಾವು ಪಾಶ್ಚಿಮಾತ್ಯರಲ್ಲಿ, ಅವರ ವಿಚಾರಧಾರೆಯನ್ನು ಅಧ್ಯಯನಮಾಡಿದ ಪೌರ್ವಾತ್ಯರಲ್ಲಿ ನೋಡಬಹುದು.

ವೈದಿಕ ಮಾನವನ ಧಾರ್ಮಿಕ ಪ್ರಜ್ಞೆಯ ಅಧ್ಯಯನದ ಇನ್ನೊಂದು ಮುಖವನ್ನೂ ನಾವು ಈ ದೇವತಾಪ್ರಜ್ಞೆಯಲ್ಲಿ ನೋಡಬಹುದಾಗಿದೆ. ಈ ದೃಷ್ಟಿಯು ಅವನ ಅಂದರೆ ವೈದಿಕಮಾನವನ ಧರ್ಮಪ್ರಜ್ಞೆಯ ಪ್ರಬುದ್ಧಾವಸ್ಥೆಯನ್ನು ತೋರಿಸುವದು. ಋಗ್ವೇದವು "ಏಕಂ ಸತ್ ವಿಪ್ರಾ ಬಹುಧಾವದಂತಿ" ಎಂದು ಘೋಷಿಸುತ್ತದೆ. ಈ ಮಂತ್ರ ಭಾರತೀಯ ತರ್ಕಶಾಸ್ತ್ರದ ವೈವಿಧ್ಯಮಾನವಾದ ಬೆಳವಣಿಗೆಯ ಅಸ್ತಿಭಾರವಾಗಿದೆ. ಆಸ್ತಿಕ ದರ್ಶನಗಳ 'ನೇತಿ' ಮತ್ತು 'ಇತಿ' ವಾದಗಳಿಗೂ ಅದೇ ರೀತಿ ನಾಸ್ತಿಕ ದರ್ಶನಗಳ 'ಶೂನ್ಯ' ಮತ್ತು ಅನೇಕಾಂತ ವಾದಗಳಿಗೂ ಮೇಲಿನಮಂತ್ರವು ಮೂಲಮಾತೃಕೆಯಾಗಿದೆ. ವೈದಿಕ ಧಾರ್ಮಿಕ ಕೃತಿಗಳ ಆಕರ ಸಾಹಿತ್ಯವಾದ ವೇದವು ಈ ಮಹತ್ವದ ವಸ್ತುವಿಚಾರವನ್ನು ಪ್ರತಿಪಾದಿಸಿ ವೇದಾಂತದ ಅದ್ವೈತ ಪ್ರಣಾಲಿಯಂಥ ಪರಿಪಕ್ವ ಪ್ರಣಾಲಿಗೆ ಪ್ರೇರಕವಾಯಿತು. ವೇದದಲ್ಲಿ ಬ್ರಹ್ಮ ಮತ್ತು ಆತ್ಮಗಳು ಮೊದಮೊದಲು ಪ್ರಾರ್ಥನೆ ಮತ್ತು ಪ್ರಾಣಗಳೆಂಬ ಅರ್ಥವನ್ನು ಕೊಡುತ್ತಿದ್ದವು. ನಂತರ ಅವುಗಳು ತಮ್ಮಲ್ಲಿಯ ಸತ್ವದಿಂದ ವಿಶ್ವತತ್ವಗಳಾದವು. ಉಪನಿಷತ್ತುಗಳಲ್ಲಿ ಎರಡೂ ತತ್ವಗಳ ಅರ್ಥಗಳು ಹೊಸ ಸ್ವರೂಪವನ್ನು ಪಡೆದವು. ಇದರಿಂದ ಅವುಗಳ ಅದ್ವೈತತೆಯೂ ದ್ದಿಸಿತ್ತು. ಈ ರೀತಿಯ ಅದ್ವೈತಸಿದ್ಧಿಗೆ ವಿಚಾರದ ಮೂಲವು ಋಗ್ವೇದದ

ನಾಸದೀಯ ಸೂಕ್ತದಲ್ಲಿ ಇದೆಯೆಂದು ಪ್ರಾಚ್ಯಪಂಡಿತರು ತೋರಿಸುತ್ತಾರೆ. 'ಆತ್ಮ' ತತ್ವ ಹಾಗೂ 'ಇರುವು' ತತ್ವಗಳು ಅಭಿನ್ನವೆಂಬ ಸಿದ್ಧಾಂತದಿಂದ ವೇದಾಂತವೆಂದು ಉಪನಿಷತ್ತುಗಳು ಪ್ರಸಿದ್ಧಿಯನ್ನು ಪಡೆದವು. ಧರ್ಮಗ್ರಂಥವೆಂದು ಪ್ರಸಿದ್ಧವಾದ ವೇದದಲ್ಲಿಯ ಪ್ರಜ್ಞೆಯ ಸುಳುಹು ಹೀಗಿದೆ. ಇದು ವೈದಿಕ ಧರ್ಮ ಪ್ರಜ್ಞೆಯಾಗಿರುವುದನ್ನು ನಾವು ತಾತ್ವಿಕ ಪ್ರಜ್ಞೆಯೆಂದು ಕರೆಯುತ್ತೇವೆ. ಅಭ್ಯಾಸದ ಅನುಕೂಲಕ್ಕಾಗಿ, ಈ ಒಂದು ಪ್ರಣಾಲಿ ವೇದ ಪ್ರಣಾಲಿಯ ಅಸ್ತಿತ್ವ ಪ್ರತಿಪಾದಿಸಬಹುದು. ಯಾಕಂದರೆ 'ಆತ್ಮ' ಮತ್ತು 'ಬ್ರಹ್ಮಗಳ' ವಿಚಾರ ಧಾರ್ಮಿಕ ವಿಚಾರ ಪ್ರಣಾಲಿಗೆ ಸೇರದ ವಿಷಯವೆಂದು ಪ್ರಾಜ್ಞರು ತೀರ್ಮಾನಿಸಿದ್ದಾರೆ. ಆದರೆ ಉಪನಿಷತ್ತುಗಳು ನಾವು ತಿಳಿದುಕೊಂಡಂತೆ 'ದೇವ' ಹಾಗೂ 'ಭಕ್ತ'ನ ವಿಚಾರವನ್ನು ಪ್ರತಿಪಾದಿಸಿವೆಯೇ ? ನಮ್ಮ ಅರ್ಥವು ಅಲ್ಲಿ ಇಲ್ಲವಾಗಿ ದೇವ ಹಾಗೂ ಭಕ್ತ ಮತ್ತು ಭಕ್ತನು ದೇವನನ್ನು ಒಲಿಸಿಕೊಳ್ಳಲು ಮಾಡಿದ ವಿಧಿಗಳು ಧಾರ್ಮಿಕ ಸಾಹಿತ್ಯವಲ್ಲವೆ ಹಾಗಾದರೆ ವೇದಗಳಿಗೆ–ಮಂತ್ರ, ಬ್ರಾಹ್ಮಣ, ಅರಣ್ಯಕ ಹಾಗೂ ಉಪನಿಷತ್ತುಗಳು ವೈದಿಕಧರ್ಮಗ್ರಂಥಗಳೆಂದು ಹೆಸರಿಸುವಾಗ ಇಲ್ಲಿಯ ಪ್ರಜ್ಞೆ ಪೂರ್ಣಪ್ರಜ್ಞೆಯಾಗಿ ತಾತ್ವಿಕ, ಧಾರ್ಮಿಕ, ಅನುಭಾವಿಕ, ನೈತಿಕ ಮುಂತಾದ ಪ್ರಜ್ಞೆಗಳ ಸಮಗ್ರತೆಯ ದ್ಯೋತಕವೆ? ಮುಂತಾದ ವಿಚಾರಗಳು ಹುಟ್ಟಿಕೊಳ್ಳುವವು. ಇವೆಲ್ಲವುಗಳ ಸಮಗ್ರತೆಯನ್ನು ವೈದಿಕ ಪ್ರಜ್ಞೆಯಲ್ಲಿ ನೋಡುತ್ತೇವೆ. ಅವರ ಈ ಸಮಗ್ರತಾ ಪ್ರಜ್ಞೆಗೆ ಧಾರ್ಮಿಕ ಪ್ರಜ್ಞೆಯೆಂದು ಕರೆದರು.

'ದೇವ' ಹಾಗೂ 'ಭಕ್ತ' ವೆಂಬುವುಗಳು ವೈದಿಕ ಸಾಹಿತ್ಯ ವಿಚಾರದಲ್ಲಿ ಆತ್ಮ ಹಾಗೂ ಬ್ರಹ್ಮಗಳ ವೈದಿಕಸಾಹಿತ್ಯ ವಿಚಾರದಲ್ಲಿಯಂತೆ ಅಭಿನ್ನವಾಗಿರುತ್ತವೆ. ಈ ಮಾತನ್ನು ಅವು ಒತ್ತಿ ಹೇಳುತ್ತವೆ. ಭಾರತೀಯರ ಈ ಪ್ರಣಾಲಿಯ ಅತ್ಯಂತ ಉದ್ಬೋಧಕ; ನವ್ಯ 'ದೇವ' ಹಾಗೂ 'ಬ್ರಹ್ಮ' ಪದಗಳು ಪರ್ಯಾಯ ಪದಗಳಾಗಿರುವಂತೆ, 'ಭಕ್ತ' ಹಾಗೂ 'ಆತ್ಮ' ಪದಗಳು ಪರ್ಯಾಯ ಪದಗಳು ವೈದಿಕ ಸಾಹಿತ್ಯದಲ್ಲಿ. ದೇವ ಹಾಗೂ ಭಕ್ತರ ಸಂಬಂಧವನ್ನು, ಆಚಾರವನ್ನು ಬೋಧಿಸುವುದು ಧರ್ಮದ ಗುರಿಯೆಂದು ಪಾಶ್ಚಿಮಾತ್ಯರು ತಿಳಿದುಕೊಂಡಿದ್ದು ಈ ವಿಷಯವನ್ನು ಪ್ರತಿವಾದಿಸುವ ಸಾಹಿತ್ಯ ಧಾರ್ಮಿಕ ಸಾಹಿತ್ಯವೆಂದವರು ನಿರ್ಧರಿಸುತ್ತಾರೆ. ಹಾಗಾದರೆ ಉಪನಿಷತ್ತಿನಲ್ಲಿ ಬರುವ ದೇವ ಮತ್ತು ಭಕ್ತರ ಸಂಬಂಧ ಹಾಗೂ ದೇವರ ಪೂಜಾ ವಿಧಾನ ಮುಂತಾದವುಗಳು ಪಾಶ್ಚಿಮಾತ್ಯರು ತಿಳಿದುಕೊಂಡರ್ಥದಲ್ಲೆ ಧಾರ್ಮಿಕ ಸಾಹಿತ್ಯವಲ್ಲ. ಆದರೆ ಭಾರತೀಯರು ಇದು ಧಾರ್ಮಿಕ ಸಾಹಿತ್ಯವಲ್ಲವೆಂಬ ವಿಚಾರವನ್ನು ಒಪ್ಪಲಾರರು. ಇದು ಅವರಿಗೆ ಅಪ್ಪಟ ಧಾರ್ಮಿಕ ಸಾಹಿತ್ಯ.

'ದೇವ' ಎಂಬ ಪದವನ್ನು ಅವರು ಬಳಿಸುವರು. ಅದು ಅವರಿಗೆ ಪ್ರಕಾಶ ಬೋಧಕ ಧಾತು ಜನ್ಯ. ಆದ್ದರಿಂದ ಜ್ಞಾನಬೋಧಕ, ಜ್ಞಾನಲಕ್ಷಣಾತ್ಮಕ 'ವಸ್ತು', ದೇವರು. ವೈದಿಕ ಸಾಹಿತ್ಯದಲ್ಲೆ ದೇವತೆಗಳು. ಈ ಮೂಲಾರ್ಥವನ್ನು ಸ್ವಭಾವವಾಗಿ ಪಡೆದುಕೊಂಡಿವೆ. ಅವು ಪು, ಸ್ತ್ರೀ ಮತ್ತು ನಪುಸಕಲಿಂಗ

ಲಕ್ಷಣಾತ್ಮಕ ನಾಮಾಂಕಿತವಾಗಿರುತ್ತವೆ. ಇವೆಲ್ಲ ವಿಚಾರಗಳು ವೈದಿಕ ದೇವತಾ ಕಲ್ಪನೆಯ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಗಮನಾರ್ಹವಾಗಿರುವವು.

ವೇದದಲ್ಲಿ ದೇವತೆಗಳು ಅನೇಕವಾಗಿರುತ್ತವೆ. ಯಾಕೆಂದರೆ ಋಗ್ವೇದವು 'ಯಾವ ದೇವರಿಗೆ ಹವಿಸ್ಸನ್ನು ಕೊಡಲಿ?' ಎಂದು ಪ್ರಶ್ನಿಸುತ್ತದೆ. ಈ ಅನೇಕ ದೇವರ ಅಸ್ತಿತ್ವವು ಅನೇಕ ತಾವಾದವೇನು ಎಂಬುದು ಕೂಡ ವೇದದ ಅರ್ಥದಲ್ಲಿಯೇ ವಿಚಾರಾರ್ಹವಾಗಿದೆ. ಅನೇಕರನ್ನು ದೇವರುಗಳು ಎಂದು ಹೇಳುವುದು ಮಾನವರು ಅನೇಕರು ಎಂದು ಹೇಳುವದರಿಂದ ಭಿನ್ನವಾಗಿರುವುದೆಂದು ಹೇಳ-ಬಹುದೆ? ಅನೇಕ ಮಾನವರು ಎಂಬುದು ಬಹುವಚನವಿದ್ದರೂ 'ಮಾನವ' ಎಂಬ ಅರ್ಥವನ್ನು ಆ ಅನೇಕತೆಯು ಸೂಚಿಸುವುದು ಏಕತೆಯೋ ಅಥವಾ ಅನೇಕ-ತೆಯೋ ಎಂಬ ಪ್ರಶ್ನೆಗೆ ಉತ್ತರವು ಏಕವಚನಾತ್ಮಕವೋ ಬಹುವಚನಾತ್ಮಕವೋ ಎಂಬುದರ ಉತ್ತರವಾಗಿರುವಂತೆ ದೇವತೆಗಳ ಸ್ತ್ರೀ ಪುರುಷ ಮತ್ತು ನಪುಸಕ ಲಿಂಗಬೋಧಕ ವಾಗಿದ್ದರೂ ಅವೆಲ್ಲ ವ್ಯಾಕರಣ ದೃಷ್ಟಿಯಲ್ಲಿ ಬೇರೆ ಬೇರೆಯಾಗಿದ್ದರೂ ದೇವರಬಗ್ಗೆ ಪರ್ಯಾಯಪದಗಳಾಗಿ ಬಳಸಲಾಗಿರುವದನ್ನು ನೋಡಿದರೆ ಏಕತ್ವವೇ ಬೋಧ ವಾಗುವದು. ಇದು ಸಹಿತ ಮೇಲೆ ವಿವರಿಸಿಲು ಉದ್ದೇಶಿಸಿದುದನ್ನೇ ಸೂಚಿಸುವದು. ಯಾರು ಯಾರು ದೇವತ್ವವುಳ್ಳವರೋ ಅವರೆಲ್ಲರು ದೇವತೆಗಳಾದ್ದರಿಂದ ಅದು ಜಾತಿ ವಾಚಕ ಪದವೇ ವಿನಃ ಬಹುತ್ವ ಅಥವಾ ವಿವಿಧತ್ವ ವಾಚಕಪದವಲ್ಲ. ಅದರ ಅರ್ಥವು ಒಂದು. ಅದನ್ನು ಸೂಚಿಸುವ ಪದಗಳು ಅನೇಕ; ಅದೇ ಪ್ರಕಾರ ಅವರ ರೀತಿ ಅಥವಾ ಉಪಾಯಗಳೂ ಅನೇಕ. ದೇವರುಗಳು ಅನೇಕವಿರುವಂತೆ ಆ ದೇವರುಗಳ ಶಕ್ತಿಗಳು ಬೇರೆ ಬೇರೆ. ಈ ಎಲ್ಲ ಶಕ್ತಿಗಳು ಅಥವಾ ವಿಭೂತಿಗಳು ದೇವರಾಗಿರುವದರಿಂದ ಈ ಎಲ್ಲ ವಿಭೂತಿ ಅಥವಾ ಶಕ್ತಿ ಸಂಕುಲವು ದೇವತ್ವ ಬೋಧಕ. ವೇದದಲ್ಲಿ ಬರುವ ಇಂದ್ರ, ವರುಣ, ಪೂಷನ, ಮೊದಲಾದವರು ಆ ವಿಭೂತಿಗಳಲ್ಲಿಯ ಒಂದೊಂದನ್ನು ಪ್ರತಿನಿಧಿಸುವವು. ಇದು ದೇವರುಗಳು ಮತ್ತು ದೇವ ಎಂಬುದರ ಭೇದವನ್ನು ಬಹಿರ್ಪಡಿಸುವವು. ಇದರ ಪೂರ್ಣ ಪ್ರಜೆ ಇಂದ್ರ, ವರುಣ ಮುಂತಾದ ದೇವತೆಗಳನ್ನು ಪೂಜಿಸುವಲ್ಲಿ ಕಂಡುಬಂದಿದೆ ವಿಬೂತಿಗಳ ಅರಿವು, ಅದರ ಕೃಪೆಯ ಅಪೇಕ್ಷೆಗಳು ಕಂಡುಬರುವವು. ಇದಕ್ಕಿಂತಲೂ ಒಂದು ಹೆಜ್ಜೆ ವೈದಿಕ ದೈವೀಯ ಪ್ರಜ್ಞೆಯಲ್ಲಿ ಕಾಣುತ್ತೇವೆ. ಅವು ಹೇಗೆಂದರೆ—ಅನೇಕ ವಿಭೂತಿ ಗಳ ಸಾಕಾರ ರೂಪವೆಂದು ನಂಬಿದ ಅಸಂಖ್ಯಾತ ದೇವತೆಗಳನ್ನು ಭಿನ್ನಭಿನ್ನವಾಗಿ ಪೂಜಿಸುವ ಈ ಪ್ರವೃತ್ತಿಯು ಆ ಎಲ್ಲ ವಿಭೂತಿಗಳ ಗುಂಪನ್ನು ಒಂದೆಡೆ ಪೂಜಿಸು ವದು "ವಿಶ್ವದೇವಾಃ" ಎಂಬುದರಲ್ಲಿ ಕಂಡುಬರುತ್ತದೆ. ಈ ರೀತಿ ಎಲ್ಲ ವಿಭೂತಿಗಳ ಸಾಕಾರರೂಪಗಳು ಒಂದೆಡೆ ತರುವ, ಕಾಣುವ ಚಿತ್ತವೃತ್ತಿಯಲ್ಲಿ ಏಕೈಕದೇವರ ಅರಿವಿನ ಮುಂಬೆಳಕು ಕಾಣುವದೆಂದು ಹೇಳಿದರೆ ಮೂಲವೈಚಾರಿಕ ಪ್ರಣಾಲಿಗೆ ಭಂಗಬಾರದು. ಹೀಗೆ ಗ್ರಹಿಸುವುದೇ ಅತ್ಯಂತ ವೈಜ್ಞಾನಿಕ ವಿಚಾರವಂತೆಯಾಗಿದೆ. ವೈದಿಕ ಋಷಿಗಳ ಘನಮನದ ದಿವ್ಯದರ್ಶನ ಸರಿಯಾದ ಗ್ರಹಿಕೆಯು ಇದಾಗುವುದೇ ವಿನಃ ಇದಕ್ಕೆ ವ್ಯತಿರಿಕ್ತವಾಗಿ ಕಾಣುವದು. ನಮ್ಮ ವಿಚಾರಗಳನ್ನು ಅವರ

ಮಂತ್ರಗಳಲ್ಲಿ ಕಂಡಂತೆ, ಇದು ಭಾರತೀಯ ದೃಷ್ಟಿಕೋನ. ಪಾಶ್ಚಿಮಾತ್ಯ ದೃಷ್ಟಿಕೋನವು ಹೀಗೆ ವಿಚಾರಮಾಡಲರಿಯದು. ಯಾಕೆಂದರೆ ಅದಕ್ಕೆ ಪೋಷಕ-ವಾದ ಪರಿಸರವೇ ಬೇರೆ. ಆ ಪರಿಸರದಿಂದ ಜನಿಸಿದ ತರ್ಕದ ರೀತಿಯೇ ಬೇರೆ. ಪಾಶ್ಚಾತ್ಯರಾದ ಪ್ರಾಚ್ಯಪಂಡಿತರು ವೇದದಲ್ಲಿ ಅನೇಕತಾವಾದವನ್ನೂ; ಅನೇಕ ದೇವತಾವಾದದ ಮುಂದಿನ ಬೆಳವಣಿಗೆಯ ಹಂತವೆಂದು ಹೆಸರಿಟ್ಟ ಹಿನೋಥಿಯಿಜಂ ವನ್ನೂ ಇದರ ಕೊನೆಯ ಹಂತವಾದ ಏಕದೇವತಾವಾದಗಳೆಂಬ ಮೂರು ಹಂತ ಗಳನ್ನು ದೇವತಾಪ್ರಜ್ಞೆಯಲ್ಲಿ ಗುರುತಿಸುವರು. ಆದರೆ ಇವು ಮೇಲಿನ ವೈಚಾರಿಕ ವಿಧಾನದಿಂದ ಸರಿಯಾದ ಅಥವಾ ವೈಜ್ಞಾನಿಕವಾದ ಘಟ್ಟಗಳಾಗಲಾರವೆಂದು ಕಂಡು ಬರುತ್ತದೆ. ಈಗ 'ಹಿನೋಥಿಯಿಜಂ' ವೆಂಬ ದೇವತಾ ಪ್ರಜ್ಞೆಯ ವಿಚಾರವನ್ನು ತೆಗೆದುಕೊಂಡರೆ ಇದರಲ್ಲಿ ಇಷ್ಟದೇವತಾ-ತನಗೆ ಪ್ರಿಯವಾದ ವಿಭೂತಿಯ ಸಾಕಾರವು ಇನ್ನುಳಿದ ದೇವತೆಗಳಿಗಿಂತ ಇನ್ನುಳಿದ ವಿಭೂತಿಗಳ ಸಾಕಾರರೂಪುಗಳಿಗಿಂತ-ಶ್ರೇಷ್ಠ ವೆಂಬ ಪ್ರಣಾಲಿಯು ಇರುವುದು. ಇದು ಆಯಾ ವ್ಯಕ್ತಿಗಳಿಗೆ ಪ್ರಿಯವಾದ ಬೇರೆ ಬೇರೆ ವಿಭೂತಿಗಳನ್ನು ಎತ್ತಿ ತೋರಿಸುವುದೇ ವಿನಃ ವಿಭೂತಿಗಳಲ್ಲಿ ಒಂದು ಶ್ರೇಷ್ಠ ಇನ್ನೊಂದು ಕನಿಷ್ಠವೆಂದು ವಿಚಾರವನ್ನು ಅಥವ ವಿಭೂತಿಗಳಲ್ಲಿ ಆ ರೀತಿಯ ವ್ಯವಸ್ಥೆ ಇರುವುದನ್ನು ತೋರಿಸುವುದಿಲ್ಲ. ಆದುದರಿಂದ ಪಾಶ್ಚಾತ್ಯ ಪ್ರಾಚ್ಯ ಪಂಡಿತರು ಅರ್ಥೈಸಿದಂತೆ ಅರ್ಥೈಸಿದರೆ ವಿಭೂತಿಗಳಲ್ಲಿ ತಾರತಮ್ಯ ಮಾಡಿದ ದೋಷಪೂರಿತ ವಿಚಾರವು ವ್ಯಕ್ತವಾಗುವದು. ಆದುದರಿಂದ ಈ ಹೆಜ್ಜೆಯು ಏಕೇಶ್ವರದತ್ತ ಸಾಗು ವಲ್ಲಿ ಕಂಡುಬಂದ ಹೊಸ ಹೆಜ್ಜೆಯಾಗಿರಲಾರದೆಂದು ಕಂಡುಬರುವದು. ದೇವರಲ್ಲಿ ಕಂಡುಬರುವ ಅನೇಕತೆಯಲ್ಲಿ, ಇಷ್ಟದೇವತಾ ಸರ್ವೋತ್ತಮತೆಯಲ್ಲಿ ಏಕೇಶ್ವರ ವಾದವೆ ಮೂಲಭೂತ ವೈಚಾರಿಕ ಹಿನ್ನೆಲೆಯನ್ನು ಕಾಣುವುದೇ ವಿನ: ಪಾಶ್ಚಿ-ಮಾತ್ಯರು ಕಂಡ ರೀತಿಯಲ್ಲಿ ನಮಗೆ ಕಂಡುಬರುವುದಿಲ್ಲ. ಈ ವಿಚಾರವನ್ನು ನಾವು ಶಬ್ದಗಳ ಯೋಗರಿತ್ಯಾರ್ಥವನ್ನು ಮಾಡುವದರಿಂದಾಗಲಿ, ರೂಢಿರೀತ್ಯಾರ್ಥವನ್ನು ಮಾಡುವದರಿಂದಾಗಲಿ ಇಲ್ಲವೆ ಯೋಗರೂಢಾತ್ಮಕ ರೀತ್ಯಾರ್ಥವನ್ನು ಮಾಡುವದ ರಿಂದಾಗಲಿ ಕಂಡುಕೊಳ್ಳಬಹುದು. ಕೊನೆಯ ಹಂತವೆಂದು ಪಾಶ್ಚಿಮಾತ್ಯರು ಹೇಳುವ ಏಕೇಶ್ವರವಾದ ಆದಿಯಿಂದ ಅಂತ್ಯದವರೆಗೆ ಎಲ್ಲ ಬಗೆಯ ಆಚಾರ ವಿಚಾರ ಗಳಲ್ಲಿ ಏಕೈಕ ಸೂತ್ರರೂಪದಲ್ಲಿ ವ್ಯಾಪಿಸಿಕೊಂಡು ಬಂದಿರುತ್ತದೆ.

ಪಾಶ್ಚಿಮಾತ್ಯರು ಕಂಡ ಅನೇಕತೆ, ಇಷ್ಟದೇವತಾ ಸರ್ವೋತ್ತಮತೆ, ಏಕೇಶ್ವರತೆ ಗಳು ಅವರ ಧಾರ್ಮಿಕ ಪ್ರಜ್ಞೆಯ ಬೆಳವಣಿಗೆಯ ದ್ಯೋತಕಗಳೇ ವಿನ: ಭಾರತೀಯ ಧಾರ್ಮಿಕ ಪ್ರಜ್ಞೆಯಲ್ಲಿ ಅವು ಇರವುದಿಲ್ಲ, ಆದರೆ ಅಭ್ಯಾಸ ದೃಷ್ಟಿಯಿಂದ ಈ ಪ್ರಣಾಲಿಗಳನ್ನು ಅರಿತುಕೊಳ್ಳಬಹುದು.

ಬಹುದೇವತಾವಾದ : ಜನರು ಬೇರೆ ಬೇರೆ ದೇವರುಗಳಲ್ಲಿ ನಂಬಿಗೆಯಿಡು ವುದು ಬಹುದೇವರ ಅಸ್ತಿತ್ವವನ್ನು ತೋರಿಸುವುದು. ಹೀಗೆ ಬಹುದೇವರುಗಳ ಅಸ್ತಿತ್ವ ಒಪ್ಪಿಕೊಂಡು ಪೂಜೆ ಮಾಡುವುದು, ವಿಚಾರ ಮಾಡುವುದು ಬಹುದೇವತಾ

ವಾದವಾಗಿರುತ್ತದೆ. ಈ ದೇವರುಗಳು ವಿಭೂತಿಗಳ ಸಾಕಾರರೂಪಗಳೆಂಬ ವಿಚಾರವು ಇಲ್ಲಿ ಇರುವುದಿಲ್ಲ. ಇದು ಮಾನವ ಜನಾಂಗದ ಪ್ರಜ್ಞೆಯ ಶೈಶವಾವಸ್ಥೆಯ ಫಲ ವಾಗಿರುತ್ತದೆ. ವೇದಗಳಲ್ಲಿಯ ಅನೇಕ ಮಂತ್ರಗಳು ಶೈಶವಾವಸ್ಥೆಯ ದ್ಯೋತಕಗಳಾ ಗಿಲ್ಲ. ದೇವರ ಅಥವಾ ಪರತತ್ವದ ವಿಚಾರ ಪ್ರತಿಪಾದಿಸುವಂಥವುಗಳು.

ಇಷ್ಟದೇವತಾ ಸರ್ವೋತ್ತಮವಾದ : ದೇವತೆಗಳು ಅನೇಕರಿರುವರು. ಅವ ರಲ್ಲಿ ತನಗೆ ಪ್ರಿಯವಾದ ದೇವರು ಉಳಿದ ದೇವರುಗಳಲ್ಲಿ ಶ್ರೇಷ್ಠರು. ರೀತಿಯ ಭಾವನೆಯಿಂದ ಎಲ್ಲ ದೇವರುಗಳ ಜೊತೆಯಲ್ಲಿ ತನಗೆ ಪ್ರೀಯವಾದ ದೇವರನ್ನಿಟ್ಟು ಪೂಜಿಸುವದು, ಭಕ್ತಿಯನ್ನು ಅಭಿವ್ಯಕ್ತಗೊಳಿಸುವದು ಆಗಿರುತ್ತದೆ. ಇದರಲ್ಲಿ ಬಹುದೇವತೆಗಳ ಅಸ್ತಿತ್ವವನ್ನು ಒಪ್ಪಿಕೊಳ್ಳುವುದರ ಜೊತೆಗೆ ತನ್ನಿಷ್ಟದೇವರ ಅಧಿ ಕ್ಯದ ಸೂಚನೆಯಿದೆ. ಈ ಆಧಿಕ್ಯ ಸೂಚನೆಯು ಏಕೇಶ್ವರದತ್ತ ಇಟ್ಟ ಹೆಜ್ಜೆ ಯೆಂದು ಗುರುತಿಸುವರು. ಉದಾಹರಣೆಗಾಗಿ ಇಂದ್ರನು ಒಬ್ಬನಿಗೆ ಇಷ್ಟದೇವತೆ ಯಾದರೆ ಉಳಿದ ವರುಣ ಮುಂತಾದವರು ಆತನಿಗಿಂತ ಕನಿಷ್ಠರು. ಅವರಲ್ಲಿ ಇಂದ್ರನು ಶ್ರೇಷ್ಠನು. ಇದರಲ್ಲಿ ಕಂಡು ಬರುವ ವೈಚಾರಿಕತೆಯು ಏಕೇಶ್ವರತ್ವದ ಸಿದ್ಧಿಯಾಗಿರದೆ ಏಕದೇವ ಶ್ರೇಷ್ಠತೆಯ ವಿಚಾರವಷ್ಟೆ. ಇದು ಬಹುದೇವತಾವಾದ ದಿಂದ ಭಿನ್ನವೆಂದು ಗ್ರಹಿಸಬೇಕಾದ ಅವಶ್ಯಕತೆ ಕಂಡುಬರುವದಿಲ್ಲ. ಇದು ಏಕೇಶ್ವರದ ಅಂದರೆ ದೇವತ್ವ ಎಕೈಕವೆಂಬುದೆಂಬುದರ ನೆರಳಿನಲ್ಲಿ ಬೆಳೆದ ಭಾವನಾ- ತ್ಮಕತೆಯಾಗಿದೆ, ಇಲ್ಲವೆ ಉತ್ಕಟತೆಯಾಗಿದೆಯಷ್ಟೆ.

ಏಕೇಶ್ವರವಾದ : ಇದು ಮಾನವ ಸ್ವಭಾವದ "ಏಕತ್ವವನ್ನು ಸೂಚಿಸುತ್ತದೆ. ಮೂಲಭೂತದಲ್ಲಿ 'ದೇವರು' ಎಂಬ ಪದವು ಈ ಮೂಲ ಅನಿಸಿಕೆಯಲ್ಲಿ ಏಕತ್ವ ಸಿದ್ಧಿಯ ದ್ಯೋತಕವಾಗಿದೆ. ಈತ ದೇವರು, ಇವಳು ದೇವತೆ, ಇದು ದೇವರು ಎಂದು ಮಾನವನು ಅರಸಿ ವಿಶ್ವಾಸವಿಡುವಲ್ಲಿ ದೇವತ್ವ ನಂಬಿಗೆಯನ್ನು ವ್ಯಕ್ತ ಗೊಳಿಸುವನೇ ವಿನ: ಅನೇಕತ್ವದಲ್ಲಲ್ಲ. ಇವರೆಲ್ಲರು ದೇವರು, ಇವರೆಲ್ಲರು ದೇವತೆ ಗಳು ಅಥವ ಇವೆಲ್ಲ ದೇವತೆಗಳು ಎಂದು ನಂಬುವಲ್ಲಿ ಕೂಡ ಆ ದೇವತ್ವದರುವಿನ ದ್ಯೋತಕವೇ ಹೊರತು ಅನೇಕತ್ವದ ಅರಿವಲ್ಲ. ಇದೇ ವಿಚಾರವನ್ನು ನಾವು ಹೀಗೆಯೂ ವಿವರಿಸಬಹುದು. ಮಾವಿನಲ್ಲಿ ನಾನಾ ಪ್ರಕಾರಗಳಿವೆ ; ನಾನಾ ರುಚಿ ಗಳಿವೆ. ಇವೆಲ್ಲ 'ಮಾವು, ಎಂಬುದನ್ನೇ ಪ್ರತಿನಿಧಿಸುವದೇ ವಿನಃ ಅನೇಕ ಮಾವು ಉಂಟೆಂಬುದನ್ನು ಪ್ರತಿನಿಧಿಸಲಾರವು. ಯಾಕಂದರೆ ಮಾವು ಎಂಬುದು ಎಕೈಕ ವಾಗಿದೆ, ಆದುದರಿಂದ ಮಾನವನು ಭಕ್ತಿಯುತನಾಗಿ ಒಬ್ಬನನ್ನು, ಇಬ್ಬರನ್ನು ಇಲ್ಲವೇ ಇದಕ್ಕೂ ಹೆಚ್ಚು ಸಂಖ್ಯೆಯಲ್ಲಿ ಪೂಜಿಸಲಿ, ನಂಬಲಿ, ಇದೆಲ್ಲ 'ದೇವತ್ವ ವನ್ನು ಪೂಜಿಸುವನು, ನಂಬುವನು ಎಂದೇ ಅರ್ಥ. ಒಂದೇ ವಸ್ತುವಿನ ಅನೇಕ ಪ್ರಕಾರಗಳಿದ್ದಂತೆ ಈ ಅನೇಕ ದೇವರುಗಳು : ಬಂಗಾರದ ನಾನಾ ಒಡವೆಗಳಿದ್ದರೂ ಅವುಗಳನ್ನು ನಾನಾ ಬಂಗಾರವೆನ್ನಲಾರೆವು. ಆದರೂ ಉಂಗುರು, ಜೈನ, ಮುರಗಿ ವಂಕಿ, ಪುತ್ಥಳಿಯ ಸರ, ಮೂಗುಬಟ್ಟು ಎಂದು ಹೆಸರಿಸುವದನ್ನು ಮಾತ್ರ ಬಿಡಲಾ-

ರೆವು. ಅದೇ ರೀತಿ ರುದ್ರ, ವಿಷ್ಣು ಹಾಗೂ ಬ್ರಹ್ಮ ಮೊದಲಾದ ಹೆಸರುಗಳಿಂದ ಒಬ್ಬ ದೇವರನ್ನು ಕರೆಯುತ್ತೇವೆ. ಕಾರಣ ಏಕತ್ವವು ಈ ಬಹುತ್ವ ಅಥವ ಅನೇಕತ್ವದ ವಿಚಾರ ತಲೆದೋರಲು ಕಾರಣವಾಗಿದೆ. ಶಬ್ದಗಳು ಅನೇಕತ್ವವನ್ನು ಬೋಧಿಸುವವೆಂಬುದು ಎಷ್ಟು ಸ್ಪಷ್ಟವಿದೆಯೋ ಅದಕ್ಕಿಂತಲೂ ಹೆಚ್ಚಿಗೆ ಸ್ಪಷ್ಟವಾಗಿದೆ. ಆ ಶಬ್ದಗಳ ವಿಚಾರವು ಏಕೈಕತೆಯನ್ನು ಬೋಧಿಸುವಲ್ಲಿ ಇದು ವೈಚಾರಿಕ ವಿವರಣೆಯು.

ಇನ್ನು ರೂಢಿ ಅಥವ ಸಂಪ್ರದಾಯದ ದೃಷ್ಟಿಯಿಂದ ವಿಚಾರಿಸುವದು ಕೂಡ ಅವಶ್ಯವುಂಟು. ಭಾರತೀಯರಲ್ಲಿ ವೇದಕಾಲದಿಂದಲೂ ಬೇರೆ ಬೇರೆ ಸಂಗಡಗಳು ಅಂದರೆ ಕುಲಗಳು ಬೇರೆ ಬೇರೆ ಹೆಸರುಳ್ಳ ದೇವರುಗಳನ್ನು ಪೂಜಿಸುತ್ತಾರೆ. ಇದು ಆಯಾ ಸಂಗಡಗಳವರ ಏಕದೇವತ್ವ ನಿಷ್ಠೆಯ ದ್ಯೋತಕವೇ ಸೈ. ಈ ಕುಲಗಳು ತಮ್ಮ ತಮ್ಮ ದೇವರುಗಳ ಹಿರಿಮೆಯನ್ನು ತೋರಿಸಲು ಹೋರಾಟಗಳೂ ನಡೆದಿವೆ. ಇವು ಕೂಡ ಆಯಾ ಕುಲಗಳವರು ಪೂಜಿಸುವ ದೇವರೇ ಶ್ರೇಷ್ಠ ದೇವರು, ಉಳಿದ ದೇವರುಗಳು ದೇವರೇ ಅಲ್ಲ ಎಂಬ ವಿಶ್ವಾಸದ ಹಿರಿಮೆ ಮೆರೆಯುವ ಒಂದು ವಿಧಾನವೇ ವಿನಃ ಬಹುದೇವತೆಗಳಲ್ಲಿಯ ವಿಶ್ವಾಸವೇನಲ್ಲ. ಅನೇಕ ಮಹಾಪುರುಷರು ಕಬೀರ, ರಾಮ, ಕೃಷ್ಣ, ಗಾಂಧೀಜಿ ಮುಂತಾದವರು ಈ ಕುಲಪದ್ಧತಿಗಳ ಮಾತ್ಸರ್ಯದ ದ್ಯೋತಕವಾಗಿ ಉಳಿದು ಬಂದಿರುವ ಸ್ವಭಾವ (Instinct) ವನ್ನು ಹೋಗಲಾಡಿಸಲು ಮಾಡಿದ ಪ್ರಯತ್ನಗಳೂ ಸಹ ಅನೇಕತ್ವ ಸ್ಥಾಪಿಸುವ ವಿಚಾರವಾಗಿರದೆ ಏಕತ್ವ ಸಿದ್ಧಿಸುವವೇ ಆಗಿವೆ. ವೇದೋಪನಿಷತ್ತುಗಳ ಕಾಲದಿಂದಲೂ ಈ ವಿಭೂತಿ-ವಿಚಾರವಿಧಾನವು ಈ ಏಕೇಶ್ವರವಾದವನ್ನೇ ಪ್ರತಿಪಾದಿಸಿವೆ. ಕೇನೋಪನಿಷತ್ತಿನಲ್ಲಿ ಬರುವ ಉಮಾಹೈಮವತಿಯ ಅಖ್ಯಾಯಿಕೆಯು ಇದಕ್ಕೆ ಉತ್ತಮ ಉದಾಹರಣೆ-ಯಾಗಿದೆ.

> ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್ ದೇವಾನ್
> ಯದಗ್ನಿರ್ವಾಯುರಿಂದ್ರಸ್ತೇ ಹೇನನ್ನೇದಿಷ್ಠ ಪಸ್ಪೃಶುಸ್ತೇಹ್ಯೇನತೆ
> ಪ್ರಥಮೋ ವಿದಾಂಚಕಾರ ಬ್ರಹ್ಮೇತಿ.

ಇದೇ ವಿಚಾರದ ಮೂಲಮಾತೃಕೆಯಲ್ಲವೇ ಋಗ್ವೇದದ ಮಂತ್ರ ವಾ "ಏಕಂ ಸತ್ ವಿಪ್ರಾ ಬಹುಧಾವದಂತಿ" ಎಂಬುದು ? ವೇದದಷ್ಟು ಪುರಾತನ ಕಾಲದಲ್ಲಿ ದೇವತಾ ಪ್ರಜ್ಞೆಯ ಅಭಿವ್ಯಕ್ತಿ ಬೇರೆ ಬೇರೆ ಹೆಸರುಗಳಿಂದ, ಅನೇಕ ರೂಪಗಳಿಂದ ಪೂಜೆಗೊಂಡವರನ್ನೆಲ್ಲರನ್ನೂ ಒಂದೆಡೆಗೆ ಪೂಜೆ ಮಾಡುವ ರೂಢಿಯು ಕೂಡ ಆಯಾ ದೇವರುಗಳ ವಿಶಿಷ್ಟ ಗುಣಗಳು ಪ್ರತ್ಯೇಕವಾಗಲಿ, ಫಲದಾಯಕವಾಗಲಿ ಎಂಬುದರಲ್ಲಿ ಆಯಾ ಗುಣಗಳನ್ನು ಒತ್ತಟ್ಟಿಗೆ ತರುವ ಅಭೀಪ್ಸೆಯಾಗಿರುವಂತೆ ಏಕತ್ವಸಿದ್ಧಿಯಾಗಲೆಂಬುವರ ರಹಸ್ಯವೇ ಇದೆ. ಈ ಪ್ರಯೋಜನಾತ್ಮಕ ಪೂಜಾವಸ್ಥೆಯು ಕೂಡ ಬಹುತ್ವದ ಹಿಂದಿರುವ ಏಕತ್ವದ ಸೂಚಕವಾಗಿದೆ. ಈ ರೀತಿ

ಆಳವಾದ ವಿಚಾರವನ್ನು ಬಿಟ್ಟು ಹೊರಹೊರಗೆ ತೋರುವಂತೆ ಅಂದರೆ ವೃತ್ತಿಜ್ಞಾನಕ್ಕೆ ನಮ್ಮ ವಿಚಾರವನ್ನು ನೀಮಿತಗೊಳಿಸಿದಾಗ ಮಾತ್ರ ಅನೇಕ ದೇವತಾವಾದ, ಇಷ್ಟ ದೇವತಾ ಸರ್ವೋತ್ತಮತಾವಾದ, ಏಕೇಶ್ವರಪಾದಗಳು ತೋರುತ್ತವೆ.

ಈ ವೈಚರಿಕ ಬೆಳವಣಿಗೆಯನ್ನು ಪಾಶ್ಚಿಮಾತ್ಯ ಪ್ರಾಚ್ಯಪಂಡಿತರು ಗುರುತಿಸು ವಲ್ಲಿ ವಿಫಲರಾಗಿದ್ದಾರೆಂಬುದಕ್ಕೆ ಅವರು ಕಂಡುಹಿಡಿದ ದೈವೀಯ ಪ್ರಜ್ಞೆಯ ಸಿದ್ಧಾಂತ ಗಳೇ ಉತ್ತಮವಾದ ಸಾಕ್ಷ್ಯಗಳಾಗಿವೆ.

ಮಾನವಕುಲದ ಅನೇಕ ಬುಡಕಟ್ಟಿನ ಜನಾಂಗಗಳ ಅಧ್ಯಯನವನ್ನು ನಾವು ಈ ದೃಷ್ಟಿಯಿಂದ ಮಾಡಬಹುದು. ಇತ್ತೀತ್ತಲಾಗಿ ಪಾಶ್ಚಿಮಾತ್ಯ ಮಾನವಶಾಸ್ತ್ರ ಪರಿಣತರು, ಸಮಾಜ ವಿಜ್ಞಾನಕೋವಿದರು ಮಾಡತೊಡಗಿದ್ದಾರೆ. ಅವರೆಲ್ಲರು ಬೇರೆ ಬೇರೆ ದೇಶಗಳ, ಖಂಡಗಳ ಬುಡಕಟ್ಟಿನ ಜನಾಂಗಗಳ ಅಧ್ಯಯನ ಮಾಡಿದು- ದರ ಪರಿಣಾಮವಾಗಿ ಆದಿಮಾನವನ ಕುಲಗಳ ವಾಸ್ತವಿಕವಾದ ಸಾಮಾಜಿಕಮಾನ- ಸಿಕ, ಧರ್ಮಮಾನಸಿಕ ಅವಸ್ಥೆಗಳನ್ನು ಊಸಿದ್ದಾರೆ. ಧರ್ಮಪ್ರಜ್ಞೆಯ ಪ್ರಭಾವ ಅಂದು ವಿಶೇಷವಾಗಿರುವಂತೆ ಕಂಡುಬರುತ್ತದೆ. ನೂರಾರು ಶಕ್ತಿಗಳನ್ನು ಪೂಜಿಸುತ್ತಿದ್ದರು ಎಂದು ಅವರೆಲ್ಲರು ಒಪ್ಪಿಕೊಳ್ಳುವರು. ಆದರೆ ಈ ನೂರಾರು ಶಕ್ತಿಗಳು ಅವರಿಗೆ ದೇವರುಗಳು ಎಂದು ಗುರುತಿಸಿದ್ದಾರೆ. ಈ ನೂರಾರು ಶಕ್ತಿಗಳ ಪ್ರಮೇಯವನ್ನು ಭಾರತೀಯ ದೃಷ್ಟಾರರು ಪುರಾತನಕಾಲದಲ್ಲಿ ಅಧ್ಯಯನವನ್ನು ಮಾಡದಿಲ್ಲ. ಯಾಕಂದರೆ ಇದಕ್ಕೆ ಸಾಹಿತ್ಯಕ ಪುರಾವೆಗಳಿವೆ. ಆದುದರಿಂದ ಇಂದು ಪಾಶ್ಚಿ ಮಾತ್ಯರಲ್ಲಿಯ ಮಾನವ ಶಾಸ್ತ್ರಜ್ಞರು (Anthropologists), ಸಮಾಜಶಾಸ್ತ್ರಜ್ಞರು (Sociologists) ಬುಡಕಟ್ಟಿನ ಜನಾಂಗಗಳ ಅಧ್ಯಯನ ಮಾಡಿ ಆದಿಮಾನವಕುಲ ಗಳು ಅಥವ ಬುಡಕಟ್ಟಿನ ಕುಲಗಳು ಅನೇಕ ದೇವರುಗಳಲ್ಲಿ ವಿಶ್ವಾಸವುಳ್ಳವರಾಗಿದ್ದ ಲೆಂದು ತಿಳಿಸುವರು. ಈ ಅನೇಕ ದೇವರುಗಳು ನೈಸರ್ಗಿಕ ಘಟನೆಗಳು, ಶಕ್ತಿಗಳು ಆಗಿದವೆನ್ನುವರು. ಆದರೆ ಭಾರತೀಯ ಮಹರ್ಷಿಗಳು ಇವೆಲ್ಲ ದೇವತೆಗಳು–ಇಂದ್ರ, ವರುಣ, ಪೂಷಣ ಮುಂತಾದವರು ದೇವರ ವಿವಿಧ ರೂಪಗಳು ಎಂಬುದನ್ನು 'ಇಂದ್ರನು ಮಾಯಾವಿ' ಎಂಬ ಒಂದು ಸಿದ್ಧಾಂತದಲ್ಲಿ ಬಹು ಮನೋಜ್ಞವಾಗಿ ಹೇಳಿ ದ್ದಾರೆ. ಇದು ದೇವತಾ ಪ್ರಜ್ಞೆಯ ವಿಕಾಸದ ವಿಶಿಷ್ಟಮುಖವನ್ನು ತೋರಿಸುತ್ತದೆ- ಯೆಂಬುದನ್ನು ಈ ಕಾಲದ ಮಾನವಕುಲದ ಇಂಥ ಸಜೀವ ಸಾಹಿತ್ಯಾತ್ಮಕ ಪುರಾವೆ ಗಳು ಇಂದಿನ ಬುಡಕಟ್ಟಿನ ಜನಾಂಗದ ಅಧ್ಯಯನಮಾಡಿ ಸಾವಿರಾರುವರುಷಗಳ ಪೂರ್ವದ ನಮ್ಮ ಪೂರ್ವಜರೆಲ್ಲರ ಸ್ವಭಾವ ಇದೇ ರೀತಿ ಇರಲಿಕ್ಕೆ ಸಾಕು ಎಂದು ಹೇಳುವ ಧೈರ್ಯಪಡುತ್ತಿರುವವರು ವಾಸ್ತವಾಂಶಕ್ಕೆ ಅನೇಕ ಮುಖಗಳಿವೆಯೆಂಬುದನ್ನು ಮರೆತಿದ್ದಾರೆ. ಈ ವಿಜ್ಞಾನಿಗಳು ಎಂಬುದನ್ನದು ತೋರಿಸುತ್ತದೆ. ಯಾಕಂದರೆ ಇಂದು ಬುಡಕಟ್ಟಿನ ಜನಾಂಗದ ಹೊರವಲಯಗಳಲ್ಲಿ ನಾಗರಿಕಜನಾಂಗಗಳು ವಾಸಿ- ಸಿರುತ್ತಿರುವಂತೆ ಅಂದುಕೂಡ ಇಂಥ ಬುಡಕಟ್ಟಿನ ಜನಾಂಗ ಹಾಗೂ ಇಂದಿನಂತೆ

ನಾಗರಿಕರೆನಿಸಿಕೊಳ್ಳುವ ಅಂದಿನ ಜನಾಂಗವೂ ಈ ಬುಡಕಟ್ಟಿನ ಜನಾಂಗಗಳ ಹೊರವಲಯುಗಳಲ್ಲಿ ವಾಸಿಸುತ್ತಿರುವುದು ಐತಿಹಾಸಿಕ ಸತ್ಯವಾಗಿದೆ. ಇಂದು ಅನೇಕ ದೈವೀಯ ಶಕ್ತಿಗಳಲ್ಲಿ ನಂಬುಗೆಯಿರುವ ಜನವಿದ್ದು ಪ್ರಾಜ್ಞರು ಆ ಎಲ್ಲ ದೈವರುಗಳು ಒಂದು ದೈವದ ವಿಭೂತಿಗಳು ಮಾತ್ರ ಎಂದು ವಿಚಾರಮಾಡುವಂತೆ ಅಂದೂ ಕೂಡ ಇದ್ದರು. ಭಾರತೀಯ ಪುರಾತನ ಸಾಹಿತ್ಯವು ಈ ವಿಚಾರವನ್ನು ಪೋಷಿಸುತ್ತದೆ; ಹಾಗೂ ಇದು ವಾಸ್ತವಾಂಶವೆಂಬುದನ್ನು ಎತ್ತಿ ತೋರಿಸುತ್ತದೆ. ವೇದಗಳು ಅಂದು "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬುದನ್ನು ಹೇಳಿದ ವಿಚಾರವನ್ನು ಗಾಂಧೀಜಿಯವರು ಮಾನವಕೋಟಿಗೆ "ಈಶ್ವರ ಅಲ್ಲಾ ತೇರೇನಾಂ" ಎಂಬ ನರಸಿಂಹ ಮೆಹತಾನ ಹಾಡನ್ನು ತುಂಬಾ ಆಧುನಿಕ ನಾಗರಿಕತೆಯ ಯುಗದ ಜನರಿಗೆ ಹೇಳಿಲ್ಲವೆ ? ಹಾಗಾದರೆ 'ಭಾರತೀಯರಿಗೆ ಈ ಪ್ರಜ್ಞಾನಪ್ರಾಪ್ತಿ ಇಂದು ಆಯಿತು. ವೇದದ ಕಾಲಕ್ಕೆ ಆಗಿರಲಿಲ್ಲ ಎಂದು ಹೇಳಲಿಕ್ಕಾಗುತ್ತದೆಯೇ ? ಎಂಬ ಅನೇಕ ಪ್ರಶ್ನೆಗಳು ಪಾಶ್ಚಿಮಾತ್ಯರ ಬಹುದೇವತಾವಾದ, ಇಷ್ಟದೇವತಾಸರ್ವೋತ್ತಮವಾದ, ಏಕೇಶ್ವರವಾದಗಳ ಪ್ರತಿಪಾದನೆಯ ವಿಚಾರದಲ್ಲಿ ಹುದುಗಿಕೊಂಡಿವೆ.

ವೈದಿಕ ಸಾಹಿತ್ಯದಲ್ಲಿ ಕಂಡುಬರುವ ದೇವತೆಗಳು ಒಂದು ಸತ್ಯದ ಅನೇಕ ಹೆಸರುಗಳು ಹಾಗೂ ರೂಪುಗಳು ಆಗಿವೆ ಎಂದು ಹೇಳಬಹುದು. ಪಾಶ್ಚಿಮಾತ್ಯ ಧರ್ಮತತ್ವಜ್ಞಾನ ಪ್ರಾಜ್ಞರು ಹೇಳುವಂತೆ ದೇವತಾಶಾಸ್ತ್ರ (Theology) ದ ವಿಕಾಸದ ಒಂದು ಮಾದರಿ ಎಂದು ಹೇಳಿ ಈ ಶಾಸ್ತ್ರದ ಬೆಳವಣಿಗೆಯನ್ನು ತಮ್ಮ ಅಂದರೆ ಪಾಶ್ಚಿಮಾತ್ಯ ಜನಾಂಗದಲ್ಲಿ ಹೇಗೆ ಆಗಿರುವದು ಎಂಬುದರ ಅಳತೆಗೋಲಿನಿಂದ ಅಳೆದುದು ವಸ್ತುಸ್ಥಿತಿಯ ವಾಸ್ತವತೆಗನುಗುಣವಾಗಿರುವುದೇ ಎಂದು ಮರುವಿಚಾರ ಮಾಡಬೇಕಾಗುವದು ಎಂದು ಸೂಚಿಸದಿರಲಾಗದು. ಅವರ ವೈಚಾರಿಕ ಹಿನ್ನೆಲೆಯ ಪರಿಸರ ಹಾಗೂ ಭಾರತೀಯರ ವೈಚಾರಿಕ ಹಿನ್ನೆಲೆಯ ಪರಿಸರಗಳಲ್ಲಿ ವೈಚಾರಿಕ ಪ್ರಣಾಲೆಗಳನ್ನು ತಿಳಿದು ಅವುಗಳ ಮೂಲ್ಯಮಾಪನದ ಕಾಲ ಈಗ ಪ್ರಾಪ್ತವಾಗಿದೆ.

ಪಾಶ್ಚಿಮಾತ್ಯ ಧರ್ಮತತ್ವವೇತ್ತರು ತಮ್ಮ ಜನಾಂಗಗಳಲ್ಲಿ ದೈವೀಪ್ರಜ್ಞೆಯ ಬೆಳವಣಿಗೆ ಹೇಗೆ ಆಗಿದೆಯೆಂದು ಹೇಳುತ್ತಾರೆಂಬುದನ್ನು ನೋಡಬೇಕು ಇದು ಅವರ ಸಿದ್ಧಾಂತಗಳ ಚಾರಿತ್ರಿಕ ಪ್ರಜ್ಞೆಯನ್ನು ನಮ್ಮಲ್ಲಿ ಹುಟ್ಟಿಸುವದರಿಂದ ಭಾರತೀಯರ ಬಗ್ಗೆ ಈವರೆಗೆ ಹೇಳಿರುವುದು ವಾಸ್ತವವೇ ಎಂಬುದರ ನಿರ್ಣಯ ಕೈಕೊಳ್ಳಲು ನಮಗೆ ಸಹಾಯವೂ ಆಗುವದು.

2) ವೈದಿಕ ಧರ್ಮವು ಧರ್ಮಸಿದ್ಧಾಂತದ ವಿಶಿಷ್ಟವಾದ ಬೆಳವಣಿಗೆಯನ್ನು ತೋರಿಸುವಲ್ಲಿ ಅದು ತತ್ವಜ್ಞಾನ ಹಾಗೂ ಧರ್ಮಸಿದ್ಧಾಂತಗಳೆರಡೂ ಭಿನ್ನ ಭಿನ್ನವಾಗಿರುವವೆಂದು ಅಭಿವ್ಯಕ್ತ ಮಾಡಿರುವದಿಲ್ಲ. ಆದರೆ ಪಾಶ್ಚಿಮಾತ್ಯರಲ್ಲಿ ತತ್ವಜ್ಞಾನವೇ ಬೇರೆ ಧರ್ಮ ಸಿದ್ಧಾಂತವೇ ಬೇರೆ. ಅವರ ಧರ್ಮದ ಮತ್ತು ತಾತ್ವಿಕ

ಪ್ರಣಾಲಿಗಳ ಬೆಳವಣಿಗೆಗಳು ಆದರೀತಿಯು ಅವರ ವೈಚಾರಿಕ ಎಳೆಯ ಪ್ರಾಯಚಿ ಯನ್ನು ತೋರಿಸಿಕೊಡುವವು. ಪಾಶ್ಚಿಮಾತ್ಯರಲ್ಲಿ ಮೊದಲು ಒಂಪುನಿಟ್ಟನಲ್ಲಿ ತತ್ವ ಪ್ರಣಾಲಿಗಳು ಹುಟ್ಟಿಕೊಂಡವು. ಈ ತತ್ವಪ್ರಣಾಲಿಗಳ ಪ್ರಭಾವವು ಒಂದೆಡೆಯಿತ್ತು. ಇನ್ನೊಂಡೆಡೆಯಲ್ಲಿ ಧರ್ಮವು ಹುಲುಸಾಗಿ ಬೆಳೆದುಕೊಂಡು ಬಂದಿತ್ತು. ಅವರೆ ಜನಪ್ರಿಯವಾದ ಧರ್ಮವು ಬಾಹ್ಯಾಚರಣೆಯಿಂದ ತುಂಬಿಕೊಂಡಿತ್ತು. ಹೀಗೆ ಕ್ರೈಸ್ತ ಧರ್ಮದ ಹೊರವಲಯದಲ್ಲಿ ಆಗಲೇ ಗ್ರೀಕ್ ತತ್ವಜ್ಞಾನವು ಅನೇಕ ತತ್ವಜ್ಞಾನಿ ಗಳಿಂದ ಬೆಳೆದು ಪ್ರಭಾವಯುತವಾಗಿತ್ತು. ಇದರಮುಂದೆ ಕ್ರೈಸ್ತಧರ್ಮವು ಕೇವಲ ಮೂಢನಂಬಿಕೆಗಳಿಂದ ಕೂಡಿದಂತೆ ಕಂಡು ಬರುತ್ತಿತ್ತು. ಕ್ರೈಸ್ತಧರ್ಮದ ಪ್ರಸರಣ ವಾಗುತ್ತ ನಡೆದಂತೆ ಅದು ತತ್ವಜ್ಞಾನದ ವಲಯವನ್ನು ಮುಟ್ಟಲೇಬೇಕಾಯಿತು. ಏಸುಕ್ರಿಸ್ತನಿಂದ ಜನ್ಮತಾಳಿದ ಕ್ರೈಸ್ತಧರ್ಮವು ಕೇವಲ ಜೀವನ ಮಾರ್ಗವಾಗಿತ್ತು. ಕೇವಲ ಜೀವನ ವಿಧಾನವಾಗಿ, ತಾತ್ವಿಕ ಚಿಂತನೆಯ ಹಾಗೂ ವಿವರಣೆಯ ಅಂಶಗಳ ಅಭಾವವಿದ್ದಕಾರಣ ಅದು ಅಜ್ಞಜನರನ್ನು ಆಕರ್ಷಿಸಿದಂತೆ ಕಂಡುಬರುವ ಹಾಗೆ ಸೂಜ್ಞರನ್ನು ಮೊದ ಮೊದಲು ಆಕರ್ಷಿಸಿರಲಿಲ್ಲ. ಹೀಗಾಗಿ ಅದರಲ್ಲಿ ತತ್ವವಿಚಾರದ ಆವಿರ್ಭಾವವು ನಿಧಾನವಾಗಿ ಬೆಳೆಯತೊಡಗಿತು. ಅದೇ ರೀತಿ ಅದರಲ್ಲಿ ತಾತ್ವಿಕ ಅಂಶದ ಉತ್ಪತ್ತಿಯೂ ಬಹಳ ತಡವಾಗಿಯೇ ಆಯಿತು. ಕ್ರೈಸ್ತಧರ್ಮದಲ್ಲಿ ತತ್ವ ಚಿಂತನೆಯ ಕಾರ್ಯವು ಪ್ರಾರಂಭವಾದುದು ಒಂದು ಚಾರಿತ್ರಿಕ ಘಟನೆಯಾಗಿದೆ. ಈ ಮೊದಲು ತಿಳಿಸಿದಂತೆ ಕ್ರೈಸ್ತಧರ್ಮವು ಪ್ರಸಾರಗೊಳ್ಳುತ್ತ ತತ್ವಜ್ಞಾನದ ವಲಯ ವನ್ನು ತಲುಪಿದಾಗ ತತ್ವಜಿಜ್ಞಾಸುಗಳು ಕ್ರೈಸ್ತಧರ್ಮದ ಅನೇಕ ನಂಬಿಕೆಗಳನ್ನು ಆಚಾರಗಳನ್ನು ಶಂಕಿಸತೊಡಗಿದರು. ಈ ಶಂಕೆಯು ಒಂದು ರೀತಿಯಲ್ಲಿ ಅನಾಹ ವಾಗಿದ್ದರೆ ಇನ್ನೊಂದು ರೀತಿಯಲ್ಲಿ ಅದರಲ್ಲಿ ಸತ್ವವು ಬೆಳೆದು ಬರಲು ಕಾರಣ ವಾಯಿತು. ಅದರ ಪರಿಣಾಮವು ದೈವಜ್ಞಾನದ ವಿಚಾರ, ಅನುಭವಗಳ ಪರಿಶೀಲನೆ ಯಾಯಿತು. ಇದರ ಅಂದರೆ ತತ್ವಜಿಜ್ಞಾಸೆಯ ಪ್ರಭಾವವು ಬೈಬಲಮೇಲೆ ಆಗಲಿಕ್ಕು ವಾಯಿತು. ಈ ಪ್ರಭಾವವನ್ನು ಜೋಹನ್ನೈನಯ (Jahonine) ನ ಧರ್ಮಬೋಧ ಯಲ್ಲಿ ಕಾಣದಿರಲಾರೆವು. ಕ್ರೈಸ್ತಧರ್ಮವು ತಡವಾಗಿಯಾದರೂ ತತ್ವಜ್ಞಾನದ ದೃಷ್ಟಿಕೋನವನ್ನು ಅಳವಡಿಸಿಕೊಳ್ಳಬೇಕಾಯಿತು. ಮೊದಮೊದಲು ಕ್ರೈಸ್ತ ಧರ್ಮ ಪ್ರಚಾರಕರು ತತ್ವಜ್ಞಾನದ ಜೊತೆಯಲ್ಲಿ ಧರ್ಮ ಸೇರಿಕೊಳ್ಳಬಾರದೆಂಬ ಮಡಿವಂತಿಕೆಯನ್ನು ಪಾಲಿಸದಿರಲಿಲ್ಲ ಯಾಕೆಂದರೆ ತತ್ವಜ್ಞಾನವು ಮಾನವಬುದ್ಧಿಯ ಕಾರ್ಯ ಹಾಗೂ ಅದು ಅಜ್ಞಾನದ ಮಾರ್ಗವೆಂದು ಹೇಳಿಕೊಳ್ಳುತ್ತಲೂ ಇದ್ದರು. ಅದರಿಂದ ದೂರಿರುವಂತೆ ಜನರನ್ನು ಎಚ್ಚರಿಸುತ್ತಿದ್ದರು.



# ಯೋಗ ಮತ್ತು ಜೈನಧರ್ಮ

ಎಸ್. ಪಿ. ಪಾಟೀಲ

ಮಾನವನ ಮಾನಸಿಕ ಬೌದ್ಧಿಕ ಸ್ವಾಸ್ಥ್ಯಕ್ಕೂ, ದೇಹಕ್ಕೂ ನೇರವಾದ ಸಂಬಂಧ ವಿದೆ. ಅವುಗಳ ಒಂದರಲ್ಲಿ ಏನಾದರೂ ವ್ಯತ್ಯಾಸ ಕಂಡುಬಂದರೆ ಅದರ ಪರಿಣಾಮ ಇನ್ನುಳಿದುದರ ಮೇಲೆ ಆಗುವದು. ಆದುದರಿಂದ ಅವುಗಳ ಸಮತೋಲವನ್ನು ಕಾಪಾಡಿಕೊಳ್ಳುವುದು ಅವಶ್ಯ. ಹೀಗೆ ದಕ್ಷತೆಯನ್ನು ವಹಿಸುವದರಿಂದಲೇ ಬುದ್ಧಿ, ಗುಣ, ಶಕ್ತಿಗಳು ವಿಕಸನ ಹೊಂದಿ, ಆ ವ್ಯಕ್ತಿತ್ವಕ್ಕೆ ಕಳೆಯನ್ನು ದಯಪಾಲಿಸು ವವು. ಆದುದರಿಂದ ಅದನ್ನು ಪಡೆಯಲು ನಿತ್ಯ ಆಹಾರ, ವಿಹಾರ, ನಿದ್ರೆ, ವಿಶ್ರಾಂತಿ ಗಳಂತೆ ವ್ಯಾಯಾಮವೂ ಅಗತ್ಯವಿರುವಂತೆ ಯೋಗಾಭ್ಯಾಸವೂ ಸಹಾಯಕವಾಗು ವುದು. ಯೋಗಾಭ್ಯಾಸವು ಎಲ್ಲ ವಯೋಮಾನದ ಸ್ತ್ರೀ–ಪುರುಷರಿಗೂ ಸಲ್ಲುವಂ- ತಹದೆಂಬುದನ್ನು ಹಠಯೋಗದ ಈ ಶ್ಲೋಕ ಪ್ರತಿಪಾದಿಸುವುದು.

ಯುವಾ ವೃದ್ಧೋऽತಿವೃದ್ಧೋ ವಾ
ವ್ಯಾಧಿತೋ ದುರ್ಬಲೋऽಪಿ ವಾ
ಅಭ್ಯಾಸಾತ್ ಸಿದ್ಧಿಮಾಪ್ನೋತಿ
ಸರ್ವಯೋಗೇಷ್ವತಂದ್ರಿತಾಃ

ಹಠಯೋಗ, ಶ್ಲೋಕ ೬೪

ಪ್ರಾಯದವರಾಗಲಿ, ಮುದುಕರಾಗಲಿ, ಹಣ್ಣು ಹಣ್ಣಾದ ಮುದುಕರಾಗಲಿ, ರೋಗಿ ಗಳಾಗಿರಲಿ, ದುರ್ಬಲರಾಗಿರಲಿ ಆಲಸ್ಯದವಿಲ್ಲದೆ ಉಚಿತ ರೀತಿಯಲ್ಲಿ ಯೋಗಾಭ್ಯಾಸ ಮಾಡಿದವರು ಬಯಸಿದ ಫಲವನ್ನು ಪಡೆಯುವರು. ಅಂದರೆ ಯೋಗವು ಆಬಾಲ ವೃದ್ಧರಿಗೂ, ಸ್ತ್ರೀ–ಪುರುಷರಿಗೂ ಸಮವಾಗಿ ಸಲ್ಲುವಂತಹದು.

'ಯೋಗ'ಪದವು ಸಂಸ್ಕೃತ 'ಯುಜ್' ಪದದ ರೂಪವಾಗಿದ್ದು; ಬಂಧಿಸು, ಕೂಡಿಸು' ನೊಗಕ್ಕೆ ಕಟ್ಟು, ಚಿತ್ರವನ್ನು ಕೇಂದ್ರೀಕರಿಸು ಎಂಬ ಅರ್ಥವನ್ನು ಕೊಡುವುದು. "ಶರೀರದ ಮನಸ್ಸಿನ ಮತ್ತು ಆತ್ಮದ ಸರ್ವಶಕ್ತಿಗಳನ್ನೂ ಭಗವಂತನೊಡನೆ ಸಂಯೋಜಿಸುವದು ಯೋಗ, ಇದು ಚಿತ್ತ, ಮನಸ್ಸು, ಭಾವನೆ, ಇಚ್ಛೆ ಎನ್ನುವ ಯೋಗದ ಮೂಲ ಭಾವನಗಳನ್ನು ಶಿಸ್ತಿಗೊಳಪಡಿಸುವದು ಮತ್ತು ಜೀವನದ ಎಲ್ಲ ಅಂಶಗಳನ್ನು ಸಮದೃಷ್ಟಿಯಿಂದ ನೋಡಲು ಸಹಾಯಕವಾಗುವ ಆತ್ಮದ ಒಂದು ನಿಲವು" ಎಂದು ಮಹದೇವ ದೇಸಾಯಿ ('ಗಾಂಧೀಜಿಯವರ ದೃಷ್ಟಿಯಲ್ಲಿ ಗೀತೆ-ಪ್ರಸ್ತಾವನೆ) ಅವರು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಮನಸ್ಸು, ಬುದ್ಧಿ, ಅಹಂಕಾರವನ್ನು ಆಧೀನದಲ್ಲಿರಿಸಿಕೊಂಡು, ಚಂಚಲತೆಯನ್ನು ತಡೆಯಲು ಸಾಧ್ಯವಾದಾಗ ಆತ್ಮಪ್ರಸಾದದ ಸಂತೃಪ್ತಿ ಲಭಿಸುವುದು,

'ಚಿತ್ತವೃತ್ತಿಗಳ ನಿರೋಧವೇ ಯೋಗ'ವೆಂದು ಪತಂಜಲಿ ಸಾರುವನು, ಸುಖವನ್ನು ತರುವ ೧) ಪ್ರಯಾಣ ೨) ವಿಪರ್ಯಾಯ ೩) ವಿಕಲ್ಪ ೪) ನಿದ್ರೆ ೫) ಸ್ಮೃತಿ ಈ ಐದು ಪ್ರಕಾರದ ಚಿತ್ತವೃತ್ತಿಗಳನ್ನೂ; ದುಃಖವನ್ನು ತರುವ ೧) ಅವಿದ್ಯೆ ೨) ಅಸ್ಮಿತಾ ೩) ರಾಗ ೪) ದ್ವೇಷ ೫) ಅಭಿನಿವೇಶ ಈ ಐದು ಪ್ರಕಾರ ಚಿತ್ತವೃತ್ತಿಗಳನ್ನು ವಿವರಿಸಿದ್ದಾನೆ. ಯೋಗಾಭಾಸದಲ್ಲಿ ತೊಂದರೆಯನ್ನುಂಟು ಮಾಡುವ ೧) ವ್ಯಾಧಿ ೨) ಸ್ತ್ಯಾನ (ಜಡತ್ವ) ೩) ಸಂಶಯ ೪) ಪ್ರಮಾದ ೫) ಆಲಸ್ಯ ೬) ಅವಿರತ (ಕಾಮೋದ್ರೇಕ) ೭) ಭ್ರಾಂತಿದರ್ಶನ ೮) ಅಲಬ್ಧ ಭೂಮಿಕತ್ವ ೯) ಅನವಸ್ಥಿತತ್ವ ಮೊದಲಾದ ಚಿತ್ತವಿಕ್ಷೋಭಗಳನ್ನು ನಿರ್ದೇಶಿಸಿ, ಅವುಗಳ ನಿವಾರಣೆಗಾಗಿ ೧) ಮೈತ್ರಿ ೨) ಕರುಣೆ ೩) ಮುದಿತ ೪) ಉಪೇಕ್ಷೆ ಎಂಬ ಉಪಾಯಗಳನ್ನು ಸೂಚಿಸಿದ್ದಾನೆ.

ಪತಂಜಲ ಯೋಗ ಸೂತ್ರಗಳು ನಾಲ್ಕು ಪಾದಗಳಾಗಿ ವಿಂಗಡಿಸಲ್ಪಟ್ಟಿವೆ: ೧) ಸಮಾಧಿ, ೨) ಸಾಧನ, ೩) ವಿಭೂತಿ, ೪) ಕೈವಲ್ಯ ಎರಡನೆಯ ಅಧ್ಯಾಯದಲ್ಲಿ ಯೋಗದ ಎಂಟು ಅಂಗಗಳನ್ನು ವಿವೇಚಿಸಲಾಗಿದೆ. ಅವು: ೧) ಯಮ ೨) ನಿಯಮ ೩) ಆಸನ ೪) ಪ್ರಾಣಾಯಾಮ ೫) ಪ್ರತ್ಯಾಹಾರ ೬) ಧಾರಣ ೭) ಧ್ಯಾನ ೮) ಸಮಾಧಿ. ಇಲ್ಲಿ ಪ್ರತಿಪಾದಿತವಾದ 'ಯಮ' ನಿಯಮವು ನೈತಿಕ ಸೂತ್ರವಾಗಿದೆ. ಇವು ದೇಶ ಕಾಲಾತೀತವಾದವು, ಇದರಲ್ಲಿ ಸಮಾವೇಶವಾಗುವ ೧) ಅಹಿಂಸೆ ೨) ಸತ್ಯ ೩) ಅಸ್ತೇಯ ೪) ಬ್ರಹ್ಮಚರ್ಯ ಮತ್ತು ೫) ಅಪರಿಗ್ರಹಗಳು ಜೈನಧರ್ಮದಲ್ಲಿ ಪಂಚಾಣುವ್ರತಗಳೆಂದು ಪಡೆದವುಗಳೇ ಆಗಿವೆ. ಆದುದರಿಂದ ಜೈನಧರ್ಮದ ಹಿನ್ನೆಲೆಯಲ್ಲಿ ಅವುಗಳ ವಿವರಣೆಯನ್ನು ಅರಿಯುವದರಿಂದ ಅವುಗಳ ವ್ಯಾಪ್ತಿ ಮಹತ್ವ ಸ್ಪಷ್ಟವಾಗುವಂತಿದೆ. ಅದನ್ನು ಸಂಕ್ಷೇಪದಲ್ಲಿ ಪರಿಶೀಲಿಸುವ ಪ್ರಯತ್ನ ಇದಾಗಿದೆ.

ಜೈನಧರ್ಮವು ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದು. ಅದು ಸಾಮಾನ್ಯ ಗೃಹಸ್ಥರಿಗಾಗಿ ಕೆಲವು ನಿಯಮಗಳನ್ನು ವಿಧಿಸುವಂತೆ, ಸಂಸಾರದಿಂದ ವಿರಕ್ತಿಯನ್ನು ಹೊಂದಿ, ಸನ್ಯಾಸ ಸ್ವೀಕರಿಸಿದ ಮುನಿಗಳಿಗಾಗಿ ಕಟುನಿಟ್ಟಾದ ಬಿಗಿಯಾದ ನಿಯಮ

ವನ್ನು ವಿಧಿಸುವದು. ಗೃಹಸ್ಥನ ಇತಿ–ಮಿತಿಗಳನ್ನು ಗಮನದಲ್ಲಿರಿಸಿಕೊಂಡು ಅವನು ಸಾಧ್ಯವಾದಮಟ್ಟಿಗೆ ತನ್ನ ಚಾರಿತ್ರವನ್ನು ಶುದ್ಧವಾಗಿರಿಸಿಕೊಳ್ಳಬೇಕೆಂಬುದೇ ಅದರ ಉದ್ದೇಶ. ಅದಕ್ಕಾಗಿ ಅದು ಗೃಹಸ್ಥನಿಗೆ ಅಹಿಂಸೆ, ಸತ್ಯ, ಅಸ್ತೇಯ (ಅಚೌರ್ಯ) ಬ್ರಹ್ಮಚರ್ಯ, ಅಪರಿಗ್ರಹ–ಈ ಪಂಚಾಣುವ್ರತಗಳನ್ನು ವಿಧಿಸುವದು.

ಪಂಚಾಣುವ್ರತಗಳಲ್ಲಿ ಮೊದಲನೆಯದಾದ 'ಅಹಿಂಸೆ' ಎಂದರೆ ಕೇವಲ ಹಿಂಸೆ ಮಾಡುವದು, ಕೊಲ್ಲದಿರುವದು ಎಂದು ಸಾಮಾನ್ಯವಾಗಿ ಅರ್ಥೈಸಲಾಗುವದು. ಆದರೆ ಅಹಿಂಸೆಯ ವ್ಯಾಪ್ತಿ ತುಂಬ ಹಿರಿದಾದುದಾಗಿದೆ. ಮನ, ವಚನ, ಕಾಯ–ಗಳಿಂದಲೂ ಹಿಂಸೆಯಾಗದಂತೆ ದಕ್ಷತೆವಹಿಸುದರ ಅಗತ್ಯತೆಯನ್ನು ಜೈನಧರ್ಮ ಪ್ರತಿಪಾದಿಸುವುದು. ಆದುದರಿಂದ ಅದು ಹಿಂಸೆಯನ್ನು ಆರಂಭಿ, ಉದ್ಯೋಗಿ, ವಿರೋಧಿ ಹಾಗೂ ಸಂಕಲ್ಪಿ ಹಿಂಸೆಯೆಂದು ವಿಂಗಡಿಸಲಾಗಿದೆ. ಸಾಮಾನ್ಯ ಮಾನವನು ತನ್ನ ಉಪಜೀವದಕ್ಕಾಗಿ ಒಕ್ಕಲುತನವನ್ನು ಅವಲಂಬಿಸುವನು. ಆಗ ಒಕ್ಕಲುತನದ ಕೆಲಸವನ್ನು ಮಾಡುವಾಗ, ಹೊಲ ಊಳುವಾಗ, ಬಿತ್ತುವಾಗ ಅವನಿಗೆ ತಿಳಿಯದಂ–ತೆಯೇ ಭೂಮಿಯಲ್ಲಿಯ ಅನೇಕ ಕ್ರಿಮಿ ಕೀಟಕಗಳು ಸಾಯುವುದುಟು, ಈ ರೀತಿ ಆದವನ ಹಿಂಸೆ ಉದ್ದೇಶಪೂರ್ವಕವಾಗಿ ಆದುದಲ್ಲ. ಆದುದರಿಂದ ಒಕ್ಕಲುತನದ ಕೆಲಸ ಕಾರ್ಯವನ್ನು ಮಾಡುವಾಗ ಆಗುವ ಆರಂಭಿ ಹಿಂಸೆಯ ವಿಷಯದಲ್ಲಿ ಸಾಮಾನ್ಯ ಗೃಹಸ್ಥನಿಗೆ ರಿಯಾಯತಿಯನ್ನು ತೋರಲಾಗಿದೆ. ಅದರಂತೆ ಗೃಹಸ್ಥ ನಾದವನು ಮನೆಕೆಲಸ ಮಾಡುವಾಗ, ನೀರು ಸೇದುವಾಗ, ಕಸಗೂಡಿಸುವಾಗ ಅವನಿಗೆ ಗೊತ್ತಿಲ್ಲದಂತೆ ಕ್ರಿಮಿಕೀಟಕಗಳು ಸತ್ತು ಉಂಟಾಗುವ ಹಿಂಸೆಯು ಉದ್ಯೋಗಿ ಹಿಂಸೆ. ಇದನ್ನು ಪೂರ್ಣ ತೊರೆಯುವದು ಅಸಾಧ್ಯ. ಅದರಂತೆ ತನ್ನ ರಾಷ್ಟ್ರದ ಮೇಲೆ ಅಥವಾ ವೈಯಕ್ತಿಕ ಆಸ್ತಿ–ಪಾಸ್ತಿ–ಧರ್ಮಕ್ಕೆ ವೈರಿಗಳಿಂದ ವಿರೋಧ ಉಂಟಾದಾಗ ಅವರನ್ನು ವಿರೋಧಿಸುವದು ಹಿಂಸೆಯಾಗಲಾರದು. ಸ್ವಸಂರಕ್ಷಣೆ ಗಾಗಿ ಯುದ್ಧ ಮಾಡುವುದೂ ಹಿಂಸೆಯಲ್ಲ. ಆದುದರಿಂದ ಈ 'ವಿರೋಧಿ ಹಿಂಸೆ'ಗೂ ಸಾಮಾನ್ಯ ಗೃಹಸ್ಥನ ವಿಷಯದಲ್ಲಿ ಸಮ್ಮತಿಯನ್ನೀಯಲಾಗಿದೆ. ಆದರೆ ಬಹಳಷ್ಟು ಜನ ಈ ಸೂಕ್ಷ್ಮವನ್ನು ಅರಿಯದೇ ಜೈನಧರ್ಮದ ಅಹಿಂಸೆಯಿಂದಾಗಿ ಜನ ಹೇಡಿಗಳಾಗಿ, ಯುದ್ಧವನ್ನು ತೊರೆದು ದೇಶದ ಪಾರತಂತ್ರಕ್ಕೆ ಕಾರಣವಾಯಿತೆಂಬ ತಪ್ಪು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಜೈನಧರ್ಮದ ಇತಿಹಾಸವನ್ನು ಅವಲೋಕಿಸಿದರೆ ಅನೇಕ ಜನ ಕ್ಷತ್ರಿಯರು ಅದನ್ನು ಅವಲಂಬಿಸಿದ್ದು ಅನೇಕ ಯುದ್ಧಗಳನ್ನು ಮಾಡಿ ಪ್ರಜೆಗಳನ್ನು, ರಾಜ್ಯವನ್ನೂ ಸಂರಕ್ಷಿಸಿದ ಸಾಕಷ್ಟು ಉದಾಹರಣೆಗಳಿವೆ. ಆದುದರಿಂದ ವಿರೋಧಿ ಹಿಂಸೆಯ ಮನ್ನಣೆಯ ಬಗೆಗೆ ಸರಿಯಾದ ತಿಳವಳಿಕೆ ಅಗತ್ಯ.

ಇನ್ನು ಕೊನೆಯದಾದ ಸಂಕಲ್ಪಿ ಹಿಂಸೆಯನ್ನು ಮಾತ್ರ ಗ್ರಹಸ್ಥನಾದವನು ತೊರೆಯುವದು ಅಗತ್ಯ. ಕೈಯಿಂದ ಹಿಂಸೆಯನ್ನು ಮಾಡುವಷ್ಟೇ ಅದನ್ನು ಕುರಿತು ಯೋಚಿಸುವದು ಸಹ ತ್ಯಾಜನೀಯವಾಗಿದೆ. ಕೊಲ್ಲುವದಷ್ಟೆ ಅಲ್ಲ. ಇನ್ನೊಬ್ಬರ

ಮನಸ್ಸಿಗೆ ನೋವುಂಟಾಗುವಂತೆ ವರ್ತಿಸುವದೂ ಹಿಂಸೆಯೆ. ತನ್ನಿಂದಲ್ಲದೆ ಬೇರೆ ನ್ನೊಬ್ಬರನ್ನು ಆ ಕಾರ್ಯಕ್ಕೆ ಪ್ರಚೋದಿಸುವದೂ ಸಹ ಹಿಂಸೆ ಮಾಡಿದಂತೆಯೆ ಸರಿ. ಹೀಗೆ ಮನಸ್ಸಿನಲ್ಲಿಯೂ ಹಿಂಸಾ ಭಾವವನ್ನು ತರದೆ, ಕೃತ ಕಾರಿತ, ಅನುಮೋದಿತ ಹಿಂಸೆಗೆ ಸಮ್ಮತಿಸಬಾರದೆಂದು ಜೈನಧರ್ಮವು ಅಹಿಂಸೆಯ ವ್ಯಾಪ್ತಿಯನ್ನು ವಿವರಿಸಿದೆ. ಸಂಕಲ್ಪ ಹಿಂಸೆಯ ಘೋರ ಪರಿಣಾಮವನ್ನು ಜನ್ನಮಹಾಕವಿಯ 'ಯಶೋಧರಚರಿತೆ' ಕಾವ್ಯದಲ್ಲಿ ಕಾಣಬಹುದು. ಈ ಹಿನ್ನೆಲೆಯಲ್ಲಿ ಯೋಗಾಭ್ಯಾಸ ದಲ್ಲಿ ನಮೂದಿಸಿದ ಅಹಿಂಸೆಯನ್ನು ಪರಿಗಣಿಸಿದಲ್ಲಿ ಅದರ ವ್ಯಾಪ್ತಿ ಗೋಚರವಾಗು ವಂತಿದೆ.

ಎರಡನೆಯ ವ್ರತವಾದ ಸತ್ಯವು ಪ್ರತ್ಯೇಕ ವ್ರತವಾಗಿರದೆ ವ್ಯಾಪಕವಾದ ಅರ್ಥದಲ್ಲಿ ಅಹಿಂಸೆಯಲ್ಲಿಯೆ ಸಮಾವೇಶವಾಗುತ್ತದೆ. ಸತ್ಯವನ್ನು ನುಡಿಯಬೇಕು. ಅದು ಹಿತಮಿತವೂ ಪ್ರಿಯವೂ ಆಗಿರಬೇಕು. ಅಪ್ರಿಯ ಸತ್ಯವನ್ನು ನುಡಿಯಬೇಕಾದ ಪ್ರಸಂಗದಲ್ಲಿ ಮೌನವೇ ಲೇಸು.

ಅಸ್ತೇಯ (ಅಚೌರ್ಯ) ವೆಂದರೆ ಕೇವಲ ಅನ್ಯರ ವಸ್ತುವನ್ನು ಕದಿಯುವು ದೆಂದು ಮಾತ್ರವಲ್ಲ. ಪರರ ವಸ್ತುವಿನ ಬಗೆಗೆ ಆಶೆ ಪಡುವದು ಅಥವಾ ಇನ್ನೊಬ್ಬರ ಕದ್ದ ವಸ್ತುವನ್ನು ಕೊಳ್ಳುವುದು ಅದರಂತೆ ವ್ಯಾಪಾರದಲ್ಲಿ ತೂಕ ಅಳತೆಗಳನ್ನು ಹೆಚ್ಚು ಕಡಿಮೆ ಮಾಡಿ ಮೋಸಗೊಳಿಸುವುದು ಸಹ ಅಚೌರ್ಯ ವೆಂದು ಜೈನ ಧರ್ಮ ಪ್ರತಿಪಾದಿಸುವುದು.

ಬ್ರಹ್ಮಚರ್ಯ ವ್ರತವೆಂದರೆ ಸ್ತ್ರೀ–ಪುರುಷರು ತಮ್ಮ ತಮ್ಮ ಸ್ತ್ರೀ–ಪುರುಷರಲ್ಲಿ ಮಾತ್ರ ಇಂದ್ರಿಯ ಸುಖವನ್ನು ಪಡೆಯಬೇಕಲ್ಲದೆ ಅನ್ಯರನ್ನು ಬಯಸಕೂಡದು ಅದರಲ್ಲೂ ಇಂದ್ರಿಯ ಬಯಕೆಯನ್ನು ನಿಯಂತ್ರಿಸುವದು ಉಚಿತ. ಇದರೊಂದಿಗೆ ಉದ್ರೇಕವನ್ನುಂಟು ಮಾಡುವ ಮಾತುಕತೆಗಳನ್ನಾಡುವುದು, ಕೇಳುವದು, ಅಂಥ ಸಾಹಿತ್ಯವನ್ನು ಓದುವುದು ಬ್ರಹ್ಮಚರ್ಯ ವ್ರತಾಚರಣೆಗೆ ವಿರುದ್ಧವೆಂದು ಜೈನಧರ್ಮ ತಿಳಿಸುವುದು.

ಅಪರಿಗ್ರಹವೆಂಬ ಐದನೆಯ ವ್ರತವು ಮಾನವನ ಮೋಹನನ್ನು ನಿಯಂತ್ರಿಸು ವುದಾಗಿದೆ. ಸಂಸಾರಿ ಮನುಷ್ಯನಿಗೆ ತನ್ನಮೇಲೆ ಅವಲಂಬಿತರಾದವರ ಯೋಗ ಕ್ಷೇಮವನ್ನು ನೋಡಿಕೊಳ್ಳುವ ಹೊಣೆ ಇರುವುದೇನೋ ಸರಿ! ಅದಕ್ಕಾಗಿ ಅವನು ಯಾವುದಾದರೊಂದು ವೃತ್ತಿಯನ್ನು ಅವಲಂಬಿಸಿ ಧನಾರ್ಜನೆ ಮಾಡಬೇಕು. ಆದರೆ ಹೀಗೆ ಮಾಡುವಲ್ಲಿ ಅವನು ತನ್ನ ಕುಟುಂಬಕ್ಕೆ ಅಗತ್ಯವಿರುವಷ್ಟು ಮಾತ್ರ ವನ್ನು ಸಂಗ್ರಹಿಸಿ, ತನ್ನ ಸಂಗ್ರಹಕ್ಕೆ ಒಂದು ಮಿತಿಯನ್ನು ತಾನೆ ಹಾಕಿಕೊಂಡು ಮಿಕ್ಕುದನ್ನು ದಾನಮಾಡಬೇಕು. ದಾನದಲ್ಲಿ ಆಹಾರದಾನ, ಅಭಯದಾನ, ಔಷಧದಾನ, ಶಾಸ್ತ್ರದಾನಗಳು ಮುಖ್ಯವಾದವು. ಈ ರೀತಿ ಪ್ರತಿಯೊಬ್ಬನು ತನ್ನ ಸಂಗ್ರಹ ಪ್ರವೃತ್ತಿಗೆ ನಿಯಂತ್ರಣವಿರಿಸಿಕೊಂಡುದಾದರೆ ಸಮಾಜದಲ್ಲಿ ಬಡ ಶ್ರೀಮಂತವೆಂಬ ವರ್ಗಭೇದ ಕ್ರಮೇಣ ಕಡಿಮೆಯಾಗಿ ನಿಜವಾದ ಸಮಾಜವಾದ ಅಸ್ತಿತ್ವದಲ್ಲಿ ಬರುವುದರಲ್ಲಿ ಸಂದೇಹವಿಲ್ಲ.

ಹೀಗೆ ಜೈನಧರ್ಮದಲ್ಲಿ ನಿರೂಪಿತವಾದ ಅಹಿಂಸೆ ಮೊದಲಾದ ಪಂಚಾಣ ವ್ರತಗಳ ಉದಾತ್ತ ವ್ಯಾಪಕ ಅರ್ಥವನ್ನು ಗ್ರಹಿಸಿದಲ್ಲಿ ಯೋಗಾಭ್ಯಾಸದ 'ಯಮ' ನಿಯಮದಲ್ಲಿಯ ಇವುಗಳ ಅರ್ಥ ಸ್ಪಷ್ಟವಾಗುವಂತಿದೆ. ಯೋಗವು ಯಾವುದೊಂದು ಮತಕ್ಕೆ ಸೀಮಿತವಾಗಿರದಿದ್ದರೂ, ಅದರಲ್ಲಿ ಅಡಕವಾದ ತತ್ತ್ವಗಳು ನಿರ್ದಿಷ್ಟವಾಗಿ ಎಲ್ಲಿ ನಿರೂಪಿತವಾಗಿವೆಯೋ ಅದನ್ನು ಕಂಡು ಆ ಅರ್ಥದಲ್ಲಿ ಗ್ರಹಿಸುವದರಲ್ಲಿ ಅಪಾಯವೇನಿಲ್ಲ. ಈ ಎಲ್ಲ ನಿಯಮಗಳು ನೈತಿಕ ಸೂತ್ರಗಳಾಗಿದ್ದು ಅವು ಪ್ರತಿ ಯೊಬ್ಬರಿಗೂ ಆಚರಿಸು ಯೋಗ್ಯವಾದವುಗಳಾಗಿವೆ.

ಯೋಗದ 'ಯಮ' ನಿಯಮದಲ್ಲಿ ಅಡಕವಾಗಿರುವ ಸೂತ್ರಗಳು ಜೈನ ಧರ್ಮದ ಪಂಚಾಣುವ್ರತಗಳ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿ ಸ್ಪಷ್ಟವಾಗುವಂತೆ ಇಂದ್ರಿಯಗಳನ್ನು ಹಿಡಿತಕ್ಕೆ ತರಬೇಕೆನ್ನುವ ಐದನೆಯ ಅಂಗವಾದ 'ಪ್ರತ್ಯಾಹಾರ'ವೂ ಜೈನಧರ್ಮದ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ಮನವರಿಕೆಯಾಗುವುದೆಂದು ನಮ್ಮ ಅಭಿಪ್ರಾಯ. ಇದರಲ್ಲಿ ಬರುವ "ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋ" ಎಂಬ ಹೇಳಿಕೆಯನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಬಹು-ದಾಗಿದೆ. ಜೀವ, ಅಜೀವ, ಅಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ—ಜೈನ ತತ್ವಜ್ಞಾನದ ಈ ಸಪ್ತತತ್ವಗಳ ವಿಶೇಷ ಪರಿಜ್ಞಾನವಿಲ್ಲದೆ ಮೇಲಿನ ಹೇಳಿಕೆ ಸ್ಪಷ್ಟ ವಾಗಲಾರದು. ಸಂಸಾರದಲ್ಲಿ ಪರಿಭ್ರಮಿಸುವ ಜೀವವು ನಿರಂತರ ಒಂದಿಲ್ಲ ಒಂದು ಕ್ರಿಯೆಯಲ್ಲಿ ತೊಡಗಿರುತ್ತದೆ. ಈ ಕ್ರಿಯೆಗಳಿಗೆ ಕಾಯಯೋಗ, ವಾಗ್ಯೋಗ, ಮನೋಯೋಗ ಎಂದು ಕರೆಯುವರು. ಈ ಯೋಗದಿಂದಾಗಿ ಜೀವದೊಂದಿಗೆ ಕರ್ಮಪುದ್ಗಲಗಳ ಸಂಬಂಧವುಂಟಾಗುವುದಕ್ಕೆ ಆಸ್ರವವೆನ್ನುವರು. ಜೀವದೊಂದಿಗೆ ಆಸ್ರವದ ಸಂಬಂಧವುಂಟಾದ ಮೇಲೆ ಕರ್ಮಪುದ್ಗಲವು ಆ ಜೀವದೊಂದಿಗೆ ದೀರ್ಘ ಕಾಲ ಉಳಿಯುವದಕ್ಕೆ ಬಂಧವೆನ್ನುವರು. ಯಾವ ಪ್ರಕಾರದ ಕರ್ಮದಿಂದ ಯಾವ ಪ್ರಕೃತಿಯ ಕರ್ಮದ ಆಸ್ರವ ಮತ್ತು ಬಂಧವಾಗುವದೆಂಬುದರ ವಿವರಣೆ ದೊರೆಯು-ವದು. ಹೀಗೆ ಪರಿಭ್ರಮಣೆಗೆ ಕಾರಣವಾಗುವ ಆಸ್ರವವನ್ನು ತಡೆಯುವುದು ಸಂವರ ವಾಗಿದೆ. ಅದಕ್ಕಾಗಿ ವ್ರತಗಳನ್ನು ವಿಧಿಸಲಾಗಿದೆ. ಜೀವದೊಂದಿಗೆ ಸಂಬಂಧ ಹೊಂದಿದ ಕರ್ಮಪುದ್ಗಲವು ಕೆಲಸಮಯದ ವರೆಗೆ ಇದ್ದು ಜೀವದಿಂದ ಬೇರೆಯಾಗು ವದು—ನಿರ್ಜರೆ. ವ್ರತಾಚರಣೆ, ತಪಸ್ಸಿನಿಂದ ಹೊಸಕರ್ಮಗಳ ಆಸ್ರವವನ್ನು ತಡೆಯುವದು (ಸಂವರ), ಹಾಗೂ ಹಳೆಯ ಕರ್ಮಗಳನ್ನು ಜೀವದಿಂದ ಬಿಡಿಸು ವುದು (ನಿರ್ಜರೆ)—ಈ ಎರಡೂ ಕ್ರಿಯೆಯಿಂದ ಜೀವವು ಎಲ್ಲ ಕರ್ಮಗಳಿಂದ ಮುಕ್ತ ವಾಗಿ ಮುಕ್ತಿ ಮೋಕ್ಷವನ್ನು ಪಡೆಯುವದು ಜೈನ ತತ್ವಜ್ಞಾನದ ಈ ವಿವರಣೆಯಲ್ಲಿ ಕರ್ಮ ಆಸ್ರವದ ಪ್ರಮುಖ ಕಾರಣವೇ ಭಾವನೆಗಳು. ಆದುದರಿಂದ ಮನಸ್ಸು ಪರಿಶುದ್ಧವಾಗಿದ್ದರೆ, ನಿರ್ಮಲವಾಗಿದ್ದರೆ ಮಾತ್ರ ಆಸ್ರವ, ಬಂಧ ತಪ್ಪುತ್ತದೆ. ಅದು ಮಲೀನವಾಗಿ ಕಷಾಯಗಳಿಂದ ಕೂಡಿದುದಾದರೆ ಕರ್ಮಗಳ ಆಸ್ರವ ಬಂಧಕ್ಕೆ ಕಾರಣವಾಗುವದು. ಆದುದರಿಂದ ಮನಸ್ಸೇ ಬಂಧ ಮೋಕ್ಷಗಳಿಗೆ ಕಾರಣವೆಂಬ

ಅಭಿಪ್ರಾಯವು ಜೈನಧರ್ಮದ ಸಪ್ತತತ್ವಗಳ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ಮನವರಿಕೆಯಾಗುವಂತಿದೆ. ಹೀಗೆ ಯೋಗಾಭ್ಯಾಸದಲ್ಲಿ ಕೆಲವು ಪ್ರಮುಖ ತತ್ತ ಗಳು ಜೈನಧರ್ಮದ ತತ್ವಗಳೊಂದಿಗೆ ನಿಕಟ ಸಂಬಂಧ ಹೊಂದಿರುವುದನ್ನು ಸ್ಥೂಲ ವಾಗಿ ಮಾತ್ರ ಇಲ್ಲಿ ಪರಿಶೀಲಿಸಲು ಸಾಧ್ಯವಾಗಿದೆ.



"ಇನ್ನು ವೀರ ಮಾಹೇಶ್ವರರುಗಳ ಲಿಂಗಸಂಧಾನವೆಂತೆಂದೊಡೆ
ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯೇ
ಭಾವಮನಕರದಲ್ಲಿ ಶ್ರೀ ಗುರು ತಂದು ಸಾಹಿತ್ಯವ ಮಾಡಿದನಾಗಿ,
ಭಾವದಲ್ಲಿ ಸತ್‌ಸ್ವರೂಪವಪ್ಪ ಇಷ್ಟಲಿಂಗವೆಂದೆನಿಸಿ,
ಒಂದೇ ವಸ್ತು ತನುಮನ ಭಾವಂಗಳಲ್ಲಿ
ಇಷ್ಟ ಪ್ರಾಣ ಭಾವವಾದ ಭೇದವನರಿಯದೆ,
ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ,
ತೃಪ್ತಿ ಲಿಂಗ ಭಾವಜ್ಞಾನದಿಂದ ಗ್ರಹಿಸಿ,
ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ,
ಲಿಂಗವೇ ತಾನುತಾನಾಗಿ, ವಿರಾಜಿಸುತಿರ್ಪುದೀಗ ಶಿವಯೋಗನೊಡಾ,
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ."



# ಹದಿನಾಲ್ಕನೆಯ ಶತಮಾನದ ವೀರಶೈವ ಸಾಹಿತ್ಯ

—ಡಾ. ಬಿ. ವ್ಹಿ. ಮಲ್ಲಾಪೂರ

( ೧ )

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ವೀರಶೈವ ಕವಿಗಳು ವಹಿಸಿರುವ ಪಾತ್ರ ಹಿರಿದು. ವಿಶ್ವಸಾಹಿತ್ಯಕ್ಕೆ ಕನ್ನಡಿಗರ ವಿಶಿಷ್ಟ ಕಾಣಿಕೆಯಾಗಿರುವ ವಚನ ಸಾಹಿತ್ಯದ ಕರ್ತಾರರು ವೀರಶೈವರು. ವೀರಶೈವ ಸಾಹಿತ್ಯದ ಉಗಮ ವಚನಗಳಿಂದಲೇ. ಹತ್ತಾರು ಶಾಸನಗಳಲ್ಲಿ "....ಶ್ರೀ ರಾಮೇಶ್ವರ ದೇವರ ಗಂಧವಾರಣರ್ ಜಾಡಕುಲತಿಲಕ ಜಾಡರ ದಾಸಿಮಯ್ಯ" ಮುಂತಾಗಿ ವರ್ಣಿತನಾಗಿರುವ ಜೇಡರ (ದೇವರು ದಾಸಿಮಯ್ಯ[1] (ಕ್ರಿ. ಶ. ೧೦೩೨), ತನ್ನ ವಚನಗಳಲ್ಲಿ[2] ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ, ಕೆಂಭಾವಿಯ ಭೋಗಯ್ಯ ಮೊದಲಾದ ಶಿವಶರಣರನ್ನು ಉಲ್ಲೇಖಿಸಿದ್ದಾನೆ. ಈ ಶರಣರ ವಚನಗಳೂ ಸಿಕ್ಕಿವೆ.[3] ಆದುದರಿಂದ ವಚನ ಸಾಹಿತ್ಯದ ಉಗಮ ಹತ್ತನೆಯ ಶತಮಾನದಷ್ಟು ಹಿಂದೆ ಹೋಗುತ್ತದೆ. ಬಸವಣ್ಣನವರಿಂದ ಸ್ತುತನಾಗಿರುವ[4] ಜೇಡರ ದಾಸಿಮಯ್ಯ ನೂರಾರು ವಚನಗಳನ್ನು ರಚಿಸಿದ್ದಾನೆ.

ಹೀಗೆ ವಚನ ಸಾಹಿತ್ಯ ರಚನೆಗೆ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮತ್ತು ಜೇಡರ ದಾಸಿಮಯ್ಯ ಮೊದಲಾದವರು ಆದ್ಯ ಪ್ರವರ್ತಕರಾದರೆ, ಸ್ತೋತ್ರ ರೂಪದ ಛಂದೋಬದ್ಧ ಕವನ ರಚನೆಗೆ ಕೊಂಡಗುಳಿ ಕೇಶಿರಾಜ ಮೊದಲಿಗನಾಗಿದ್ದಾನೆ. "ಸತ್ಯಸತ್ಯ ಬ್ರತ ಹರಚರಣರ ಜೋರಂಜಿತೋತ್ತಮಾಂಗಂ" "ವಚಶ್ರೀ ವಧೂಕಾಂತ ಸಾಹಿತ್ಯಸರೋರುಹ ಮಧುವ್ರತ" ಮುಂತಾಗಿ ಶಾಸನಗಳಲ್ಲಿ[5] ವರ್ಣಿತನಾಗಿರುವ ಕೊಂಡಗುಳಿ ಕೇಶಿರಾಜ, ಕಲ್ಯಾಣ ಚಾಳುಕ್ಯ ಚಕ್ರವರ್ತಿ ಆರನೆಯ

---

1 ಶಾಸನಗಳಲ್ಲಿ ಶಿವಶರಣರು : ಡಾ. ಎಂ. ಎಂ. ಕಲಬುರ್ಗಿ. ಪುಟ ೩೫ರಿಂದ ೩೮.

2 ದೇವರದಾಸಿಮಯ್ಯನ ವಚನಗಳು : ಸಂ. ಫ. ಗು. ಹಳಕಟ್ಟಿ. ವಚನ ೫೦, ೮೯

3 ಶಿವದಾಸ ಗೀತಾಂಜಲಿ : ಸಂ. ಡಾ. ಎಲ್. ಬಸವರಾಜು. ಪೀಠಿಕೆ ಪುಟ ೪೪

4 ಬಸವಣ್ಣನವರ ಷಟ್‌ಸ್ಥಲ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ. ವಚನ ಸಂಖ್ಯೆ ೪೭೫, ೧೪೭, ೩೨೦, ೪೪೩ ಇತ್ಯಾದಿ

ವಿಕ್ರಮಾದಿತ್ಯನ (೧೦೭೬–೧೧೨೬) ಕಾಲದಲ್ಲಿದ್ದವ. ಅವನ 'ಮಂತ್ರಮಹತ್ವದ ಕಂದ' 'ಲಿಂಗಮಹತ್ವದ ಕಂದ' ಇತ್ಯಾದಿ ಕೃತಿಗಳು ಸಿಕ್ಕಿವೆ.

ಹತ್ತು ಹನ್ನೊಂದನೆಯ ಶತಮಾನದಲ್ಲಿ ಉದಯಗೊಂಡ ವಚನಗಂಗೆ, ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರ ಕಾಲದಲ್ಲಿ ಉಕ್ಕುಂಡೊರೆಯಾಗಿ ಹರಿದು ಕನ್ನಡಿಗರ ಮೈಮನಗಳೆರಡನ್ನೂ ಪುನೀತಗೊಳಿಸಿತು. ಈ ಕಾಲದ ಬಸವ, ಚನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ನೀಲಮ್ಮ ಮೊದಲಾದ ಕೆಲವರು ವಚನಗಳ ಜೊತೆಗೆ ಹಾಡುಗಳನ್ನೂ ರಚಿಸಿ ಕಾವ್ಯಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದರು. ಅವೆಲ್ಲವನ್ನು ಡಾ. ಎಲ್. ಬಸವರಾಜು ಅವರು 'ಶಿವದಾಸ ಗೀತಾಂಜಲಿ' ಯಲ್ಲಿ ಸಂಕಲಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿಯೆ, ಮಲ್ಲಿಕಾರ್ಜುನ ಪಂಡಿತಾರಾಧ್ಯನ 'ಗಣಸಹಸ್ರನಾಮ' 'ಇಷ್ಟಲಿಂಗ ಸ್ತೋತ್ರ' 'ಬಸವಗೀತ', ಕೆರೆಯ ಪದ್ಮರಸನ 'ದೀಕ್ಷಾಬೋಧೆ'; ಕುಮಾರಪದ್ಮರಸನ 'ಸಾನಂದ ಚರಿತೆ'; ಪಾಲ್ಕುರಿಕೆ ಸೋಮನಾಥನ 'ಚನ್ನಬಸವ ಸ್ತೋತ್ರದರಗಳೆ', 'ಶರಣು ಬಸವರಗಳೆ' 'ಸದ್ಗುರುರಗಳೆ', 'ಪಂಚರತ್ನ' 'ಸಹಸ್ರಗಣನಾಮ' ಇತ್ಯಾದಿ ಸ್ತೋತ್ರ, ಚರಿತ್ರ ಮತ್ತು ತತ್ವನಿರೂಪಕ ಕೃತಿಗಳು ರಚನೆಗೊಂಡಿವೆ. ಪಾಲ್ಕುರಿಕೆ ಸೋಮನಾಥನ ಕಾಲ ಸು. ೧೩೦೫ ಎಂದು ಹೇಳುವವರೂ ಇದ್ದಾರೆ.[6]

ಹದಿಮೂರನೆಯ ಶತಮಾನ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವು ಉಂಟಾದ ಕಾಲ. ಅದಕ್ಕೆ ಕಾರಣಕರ್ತರು ಕ್ರಾಂತಿಕಾರಿ ಕವಿಗಳೆನಿಸಿದ ಹರಿಹರ ರಾಘವಾಂಕರು. "ಮನುಜರ ಮೇಲೆ ಸಾವವರ ಮೇಲೆ" ಕಾವ್ಯ ಬರೆಯದ ಛಲ ಹರಿಹರನದಾದರೆ, "ಹಂಪೆಯರಸನ ಪೊಗಳ್ವ ನಾಲಗೆಯೊಳ್ ಅನ್ಯ ದೈವವ ಭವಿಗಳಂ ಕೀರ್ತಿಸಿದೆನಾದೊಡೆ ಮನಸಿಜಾರಿಯ ಭಕ್ತನಲ್ಲ[7]"ವೆಂಬ ಪ್ರತಿಜ್ಞೆ ಅವನ ಅಳಿಯ ರಾಘವಾಂಕನದು. ಕಾವ್ಯವಸ್ತುವಿನ ಆಯ್ಕೆ, ಮತ್ತು ಕಾವ್ಯವನ್ನು ನಡೆಸಿಕೊಂಡು ಹೋಗುವ ಮಾರ್ಗ ಎರಡರಲ್ಲೂ ಇವರಿಬ್ಬರದು ಹೊಸ ಹಾದಿ. ರಗಳೆಯ ಛಂದಸ್ಸಿನಲ್ಲಿ,ಪುರಾತನರನ್ನು ಚಾರಿತ್ರಿಕ ವ್ಯಕ್ತಿಗಳಾದ ಶಿವಶರಣರನ್ನು ಕುರಿತು ನೂರಾರು ರಗಳೆಗಳನ್ನು ರಚಿಸಿ ಹರಿಹರ ರಘಟಾ ಕಾವ್ಯ ಸಂಪ್ರದಾಯದ ಅಧ್ವರ್ಯುವಾದರೆ, ರಾಘವಾಂಕ ವಾರ್ಧಿಕ ಷಟ್ಪದಿಯಲ್ಲಿ ಕೃತಿ ರಚಿಸಿ ಷಟ್ಪದೀ ಕಾವ್ಯ ಸಂಪ್ರದಾಯದ ಪ್ರತಿಷ್ಠಾಪಕನೆನಿಸಿದ. ಹೀಗೆ ದೇಸೀ ಛಂದಸ್ಸಿಗೆ ಕಾವ್ಯದ ಪಟ್ಟ ಲಭಿಸಿದುದು ಈ ಶತಮಾನದಲ್ಲಿದೆ.

'ಗಿರಿಜಾ ಕಲ್ಯಾಣ', 'ಶೃಂಗಾರಸಾರ' ಅಥವಾ 'ಉದ್ಭಟ ಕಾವ್ಯ'ದಂತಹ ಚಂಪೂಕಾವ್ಯಗಳೂ ಹದಿಮೂರನೆಯ ಶತಮಾನದಲ್ಲಿ ರಚನೆಗೊಂಡಿರುವುದು

---

5 South India Inscruptions XX, ಶಾಸನಸಂಖ್ಯೆ ೬೯. ಕೊಂಡಗುಳಿ ಕ್ರಿ. ಶ. ೧೧೦೭.

6 ಕರ್ನಾಟಕ ಕವಿಚರಿತೆ ಪ್ರಥಮ ಸಂಪುಟ (೧೯೬೧) ಅನುಬಂಧ II ಪುಟ-೨೩.

7 ಹರಿಶ್ಚಂದ್ರ ಕಾವ್ಯ ೧-೩೨.

ಒಂದು ವಿಶೇಷ. ಹರಿಹರನ 'ಗಿರಿಜಾಕಲ್ಯಾಣ'ವಂತೂ ಕನ್ನಡಿಗರೆಲ್ಲರಿಗೆ ಸುಪರಿಚಿತ. ತನ್ನ ಪರಿಶುದ್ಧ ಅಚಲ ಭಕ್ತಿಯಿಂದ ಶಿವನನ್ನೊಲಿಸಿ ಇಡೀ ನಗರವನ್ನೇ ಕೈಲಾಸಕ್ಕೊಯ್ದ ಉದ್ಭಟ ದೊರೆಯ ಪುಣ್ಯಚರಿತೆ, ಸೋಮರಾಜನ 'ಉದ್ಭಟಕಾವ್ಯ'ದಲ್ಲಿ ನಿರೂಪಣೆಗೊಂಡಿದೆ. ಹನ್ನೆರಡು ಆಶ್ವಾಸಗಳ ಈ ಚಂಪೂ ಕೃತಿಯಲ್ಲಿ ವೃತ್ತ, ಕಂದವಚನಗಳ ಜೊತೆಗೆ, ವಿವಿಧ ರಗಳೆ ತ್ರಿಪದಿಗಳೂ ಬಳಕೆಯಾಗಿರುವುದು ಒಂದು ವಿಶೇಷ. "ಶಿವನೆಂದುತ್ತಮ ಶೈವರಂಬುರುಹ ನೇತ್ರಂಗೇತ್ತು ತಾಂ ವೈಷ್ಣವರ್............... ತಮ್ಮನನೆಂದರ್ಚಿಸಲ್ ಒಲ್ದು ಸರ್ವಮುಖದಿಂ ಪೂಜೆಗೊಂಡಾವಗಂ ಸುವಿಲಾಸಂಬಡೆದೊಪ್ಪುವಲ್ಲಮನೆ ಬೆಚ್ಚಿರ್ಕೆನ್ನ ಚಿತ್ತಾಬ್ಜದೊಳ್" ಎಂಬ ಸುಪ್ರಸಿದ್ಧ ಪದ್ಯ ಈ ಕಾವ್ಯದಲ್ಲಿಯದೆ. ಕೆರೆಯ ಪದ್ಮರಸನೊಡನೆ ವಾದ ಮಾಡಿ ಸೋತು ಅವನ ಶಿಷ್ಯನಾದ ತ್ರಿಭುವನ ತಾತ 'ಗುರುವಿಶ್ವೇಶ' ಅಂಕಿತದಿಂದ 'ಗುರುಗಳೆ' 'ಪಗಲ್ಪೋಳರಗಳೆ' ಅಮ್ಮವ್ವಯರಗಳೆ' ಇತ್ಯಾದಿ ಕೃತಿಗಳನ್ನು ಬರೆದಂತೆ ತಿಳಿಯುತ್ತದೆ. (ನೋಡಿ ಕ. ಕ. ಚರಿತೆ ೧೯೬೧ ಅನುಬಂಧ II, ಪುಟ ೬೭೦ರಿಂದ೭೧)

( ೨ )

ಹದಿನಾಲ್ಕನೆಯ ಶತಮಾನದಲ್ಲಿ ರಚನೆಗೊಂಡ ವೀರಶೈವ ಕೃತಿಗಳ ಸಂಖ್ಯೆ ಕಡಿಮೆ. ಆದರೆ ಬೇರೆ ಕೆಲವು ದೃಷ್ಟಿಯಿಂದ ಈ ಶತಮಾನದ ವೀರಶೈವ ಸಾಹಿತ್ಯ ವೈಶಿಷ್ಟ್ಯಪೂರ್ಣವಾಗಿದೆ. ಮೊದಲು ಈ ಶತಮಾನದ ವೀರಶೈವ ಸಾಹಿತ್ಯ ನಿರ್ಮಾಪಕರ ಮತ್ತು ಅವರ ಕೃತಿಗಳ ಪರಿಚಯವನ್ನು ಸಂಗ್ರಹವಾಗಿ ಮಾಡಿಕೊಟ್ಟು ಆಮೇಲೆ ಅದರ ವೈಶಿಷ್ಟ್ಯಗಳನ್ನು ಗುರ್ತಿಸುವದೇ ಈ ಲೇಖನದ ಉದ್ದೇಶ.

## ಶಿವಕವಿದೇವ (ಸು. ೧೩೪೦) :

ಕನ್ನಡ ಬಸವಪುರಾಣದ ಕರ್ತೃ ಭೀಮಕವಿಯ ತಂದೆಯಾದ ಈತನು ಕೃತಿ ರಚನೆ ಮಾಡಿರಬೇಕೆಂಬುದನ್ನು ಅವನ ಹೆಸರೇ ಸೂಚಿಸುತ್ತದೆ. ತೆಲುಗಿನಲ್ಲಿ ಈತನು ಕೃತಿರಚಿಸಿದ್ದಕ್ಕೆ "ಆಂಧ್ರ ಭಾಷಾ ಲಸತ್ ಕವಿತ್ವಕೋವಿದ ಶಿವಕವಿ ಪ್ರವರ ಶಿವದೇವ" ಎಂಬ ಸಿದ್ಧನಂಜೇಶನ ರಾಘವಾಂಕ ಚಾರಿತ್ರದ ಹೇಳಿಕೆ ಆಧಾರ ಒದಗಿಸುತ್ತದೆ. ಕನ್ನಡದಲ್ಲೂ ರಚಿಸಿರುವ ಸಾಧ್ಯತೆಯಿದೆ. ಆದರೆ ಇಲ್ಲಿಯವರೆಗಂತೂ ಯಾವ ಕನ್ನಡ ಕೃತಿಯೂ ಸಿಕ್ಕಿಲ್ಲ.

---

8 ಇವನ ಕಾಲ ಸು. ೧೫೨೨ ಎಂದು. ಎ. ವೆಂಕಟ ಸುಬ್ಬಯ್ಯನವರ ವಾದ (ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ ಪುಟ-೨೨೩). ಕವಿಚರಿತೆಕಾರರ ಕಾಲವನ್ನೇ ಇಲ್ಲಿ ಇಟ್ಟುಕೊಳ್ಳಲಾಗಿದೆ.

9 ಉದ್ಭಟ ಕಾವ್ಯ ೧-೧೦.

## ಗುರುದೇವ (ಸು. ೧೩೫೦)

ಮಲ್ಲಿಕಾರ್ಜುನ ಪಂಡಿತಾರಾಧ್ಯನ (೧೧೬೦) ವಂಶೋದ್ಭವನಾದ ಈತನು, ಮಹಿಮ್ನಸ್ತೋತ್ರ, ಮಲ್ಹಣಸ್ತೋತ್ರ, ಮಲೆಯರಾಜಸ್ತೋತ್ರ, ಅನಾಮಯಸ್ತೋತ್ರ, ಹಲಾಯುಧಸ್ತೋತ್ರ, ಭೃಂಗಿಸ್ತವ ಇತ್ಯಾದಿಗಳಿಗೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಇವನೇ ರಚಿಸಿರುವ 'ವೀರಶೈವಾಚಾರಪ್ರದೀಪಿಕೆ' ಸಂಸ್ಕೃತ ಕೃತಿಯಲ್ಲಿ ಈತನ ವಂಶವಲ್ಲರಿ ಹೀಗಿದೆ.[11]

- ದ್ರಾಕ್ಷಾರಾಮದ ಕೋಟಿಪಲ್ಯಾಖ್ಯ ದೇಶಿಕ
  - ಭೀಮ ಪಂಡಿತ (ಹೆಂಡತಿ ಗೌರಮಾಂಬೆ)
    - ಮಲ್ಲಿಕಾರ್ಜುನ ಪಂಡಿತ (ಸು. ಕ್ರಿ. ಶ. ೧೧೬೦) (ವೆಲುನಾಡ ಚೋಳನ ಆಸ್ಥಾನದಲ್ಲಿ ವಾದಿಗಳನ್ನು ಜಯಿಸಿದವ)
      - ಪಂಡಿತಾರಾಧ್ಯ
        - ವೀರಾರಾಧ್ಯ
          - ಗುರುಬಸವ
            - ಗಂಗಾಧರ
            - ಬಸವ
              - ಹಿರಿಯಾರ್ಯ
              - ಪಂಡಿತಾರ್ಯ
                - ಗುರುಲಿಂಗ
                  - ಗುರುದೇವ (ವ್ಯಾಖ್ಯಾನಕಾರ)
                  - ಪಂಡಿತಾರಾಧ್ಯ
                  - ಜನವಾರಾಧ್ಯ
                  - ಜಕ್ಕಾರಾಧ್ಯ

ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಏಳನೆಯ ತಲೆಮಾರಿನವನಾದ ಗುರುದೇವನ ಕಾಲ, ಸುಮಾರು ಕ್ರಿ. ಶ. ೧೩೫೦ ಆಗಬಹುದು. ಏಕೆಂದರೆ ಮಲ್ಲಿಕಾರ್ಜುನ ಪಂಡಿತಾರಾಧ್ಯನಕಾಲ ಸು. ೧೧೬೦ ಕನ್ನಡ ಟೀಕಾಸಾಹಿತ್ಯಕ್ಕೆ ಗುರುದೇವನಿಂದ ಗಮನಾರ್ಹ ಸೇವೆಸಂದಿದೆ.

---

10 ಕರ್ನಾಟಕ ಕವಿಚರಿತೆ I (೧೯೬೧) ಪುಟ-೪೬೭ ರಿಂದ ೬೮.

## ಸದಾಶಿವಲಿಂಗ (ಸು. ೧೩೫೦)

ಈ ಅಂಕಿತವುಳ್ಳ ಕವಿ, ಬರೆದಕೃತಿ 'ಸಾನಂದಗಣೇಶ್ವರರಗಳೆ' ಲಲಿತರ ಗಳೆಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಪಯ್ದು ಸ್ಥಲಗಳಿದ್ದು, ಮೂರುಸ್ಥಲ ಗಳು ರಗಳೆಯಲ್ಲೂಎರಡು ಸ್ಥಲಗಳು ಗದ್ಯದಲ್ಲೂ ಇವೆ. ಪೂರ್ಣವಿತ್ತ ಋಷಿಯ ಮಗನಾದ ಸಾನಂದಮುನಿ, ಪಂಚಾಕ್ಷರಿಮಂತ್ರ ಮಹಿಮೆಯಿಂದ, ನಾರಕಿಗಳ ಪಾಪವನ್ನು ಕಳೆದು, ಕೈಲಾಸಕ್ಕೊಯ್ದ ಕಥೆ ಈ ರಗಳೆಯಲ್ಲಿ ಬರುತ್ತದೆ. ಸಾನಂದ ಮುನಿಯ ಕಥೆಯನ್ನು ಮೊದಲು ಸಂಸ್ಕೃತದಲ್ಲಿ ಬರೆದವ ಕೆರೆಯ ಪದ್ಮರಸ: ಅದನ್ನು ಅವನ ಮಗ ಕುಮಾರ ಪದ್ಮರಸ ಕನ್ನಡಿಸಿದ್ದಾನೆ.

## ಭೀಮಕವಿ (೧೩೬೯):—

ಹದಿನಾಲ್ಕನೆಯ ಶತಮಾನದ ಮಹಾಕೃತಿ 'ಬಸವಪುರಾಣ'ದ ಕರ್ತೃ ಭೀಮ ಕವಿ. ಈತನು ತನ್ನ 'ಬಸವಪುರಾಣ' ಮುಕ್ತಾಯಗೊಂಡ ಕಾಲವನ್ನು "ಉಡು ದೇವನಿಧಿಯನೆಂದು ಸಂಖ್ಯಾತವಾದ ಸೌಮ್ಯವರ್ಷ"ವೆಂದು ಹೇಳಿಕೊಂಡಿದ್ದಾನೆ. ಆದುದರಿಂದ ಬಸವಪುರಾಣ ಪೂರ್ಣಗೊಂಡುದು, ಶಕವರ್ಷದ ೧೨೯೧, ಎಂದರೆ ಕ್ರಿ. ಶ. ೧೩೬೯.

ಭೀಮಕವಿಯ ಜೀವನ ಚರಿತ್ರೆಗೆ ಸಂಬಂಧಿಸಿದ ಕೆಲ ಅಂಶಗಳು, ಅವನ ಕೃತಿ ಗಳಿಂದಲೇ ತಿಳಿದುಬರುತ್ತವೆ. "........ಅಭವಭಕ್ತ ಸಮಯಾವಾರ್ಧಿ ವಿವರ್ಧ ನೋಜ್ವಲ ಹಿಮಗು ಶಿವಕವಿದೇವನಾತ್ಮಜ ಸುಮತಿ ಭೀಮನುಭಯ ಕವಿತ್ವ ಸಮರ್ಥನುಸುರುವೊಡೆ"[12] ಎಂಬ ಬಸವಪುರಾಣದ ಪದ್ಯದಲ್ಲಿ ಭೀಮಕವಿಯ ತಂದೆಯ ಹೆಸರು 'ಶಿವಕವಿದೇವ' ಎಂದಿದೆ. ಮತ್ತೊಂದೆಡೆ[13] "ಪಾಲ್ಕುರಿಕೆ ಸೋಮೇಶನುಂ ಅನಘದೇವಾರ್ಯನುಂ ಕನಸಿನೊಳು ಬಂದು ನಿಜಪ್ರಸಾದಮ ನಿತ್ತು" ಬಸವಪುರಾಣವನ್ನು ರಚಿಸುವಂತೆ ಪ್ರೇರೇಪಿಸಿದರೆಂಬ ಮಾತು ಬರುತ್ತದೆ. ಇಲ್ಲಿ ಕನಸಿನಲ್ಲಿ ಬಂದಿರುವ ಅನಘದೇವಾರ್ಯನು, ಭೀಮಕವಿಯ ತಂದೆಯಾಗಿ ದ್ದರೆ, ಅವನ ತಂದೆಯ ಹೆಸರು 'ಅನಘದೇವಾರ್ಯ' ಎಂದಾಗುತ್ತದೆ. ಇದೇ ಕವಿಯ 'ಭೀಮಕವೀಶ್ವರರಗಳೆ' ಅಥವಾ 'ಷಡಕ್ಷರಗಳ ರಗಳೆ'ಯಲ್ಲಿ ಬರುವ "ಈ ಅಷ್ಟೋತ್ತರ ಶತಮಂ ಧೀಯುಕ್ತಂ ಸುಕವಿದೇವಸುತ ಭೀಮಂ....ಭಕ್ತಿಯೊ ಳೊರೆದಂ" ಎಂಬ ಮಾತಿನಿಂದ ಕವಿಯ ತಂದೆಯ ಹೆಸರು 'ಸುಕವಿದೇವ' ಎಂದಾ

---

11 ಕರ್ಣಾಟಕ ಕವಿಚರಿತೆ, ಪ್ರಥಮ ಸಂಪುಟ (೧೯೬೧) ಅನುಬಂಧ II, ಪುಟ-೭೧.

12 ಬಸವಪುರಾಣ ಸಂ. ಡಾ. ಆರ್. ಸಿ. ಹಿರೇಮಠ ಕಾಂಡ-೧, ಸಂಧಿ-೧, ಪದ್ಯ-೧೭

13 ಅದೇ ಕಾಂಡ-೧, ಸಂಧಿ-೧ ಪದ್ಯ-೧೪

ಗುತ್ತದೆ ಸಿದ್ಧನಂಜೇಶನ 'ರಾಘವಾಂಕ ಚಾರಿತ್ರದಲ್ಲಿ' ಭೀಮಕವಿಯ ತಂದೆಯ ಹೆಸರು ಶಿವಕವಿಪ್ರವರ ಶಿವದೇವನೆಂದಿದೆ. ಹೀಗೆ 'ಶಿವಕವಿದೇವ', 'ಸುಕವಿದೇವ', 'ಅನಘದೇವಾರ್ಯ' ಮತ್ತು 'ಶಿವದೇವ'–ಈ ನಾಲ್ಕು ಹೆಸರುಗಳಲ್ಲಿ ಭೀಮಕವಿಯ ತಂದೆಯ ನಿಜವಾದ ಹೆಸರಾವುದು? ಎಂಬ ಪ್ರಶ್ನೆ ಏಳುತ್ತದೆ. ಸ್ವತಃ ಕವಿಯೇ ಹೇಳಿರುವ ಮೂರು ಹೆಸರುಗಳ ಆರಂಭದಲ್ಲಿ ಬರುವ 'ಶಿವಕವಿ' 'ಸುಕವಿ' ಮತ್ತು ‹ಅನಘ' ಶಬ್ದಗಳು ವಿಶೇಷಣಗಳಾಗಿವೆ. ಆದುದರಿಂದ ಕವಿಯ ತಂದೆಯ ಹೆಸರು ಕೇವಲ ‹ದೇವ' ಅಥವಾ ‹ದೇವಾರ್ಯ' ಎಂದಿರಬೇಕು. ಭೀಮಕವಿಯ ಕನಸಿನಲ್ಲಿ ಪಾಲ್ಕುರಿಕಿಸೋಮೇಶ್ವರನ ಜೊತೆಗೆ ತಂದೆ ಶಿವದೇವನೂ ಬಂದಿದ್ದನೆಂದು ಸಿದ್ಧ ನಂಜೇಶನ ಹೇಳಿಕೆ, ಬಸವಪುರಾಣದ ಅನಘ ದೇವಾರ್ಯನನ್ನೇ, ಅನಘ-ಶಿವ ಎಂಬ ಅರ್ಥದಲ್ಲಿ ಶಿವದೇವ ಹೆಸರು ಹೇಳಿದ್ದಾನೆ, ಆದುದರಿಂದ ಭೀಮಕವಿಯ ತಂದೆಯ ಹೆಸರು ‹ದೇವ' ಅಥವಾ 'ದೇವಾರ್ಯ' ಎಂದಿರುವ ಸಾಧ್ಯತೆ ಹೆಚ್ಚು.

ಭೀಮಕವಿ ತನ್ನ ಊರು, ದೇಶಗಳನ್ನು ಯಾವಕೃತಿಯಲ್ಲಿಯೂ ಸ್ಪಷ್ಟವಾಗಿ ಹೇಳಿಲ್ಲ. ಆದರೆ ಮೊದಲ ಸಂಧಿಯ ೨, ೪, ೫, ೬, ನೆಯ ಪದ್ಯ ಗಳಲ್ಲೂ, ಇಪ್ಪತ್ತೆನೆಯ ಸಂಧಿಯ ಮೊದಲ ಪದ್ಯದಲ್ಲಿಯೂ ‹ಸಿದ್ಧವಟಧಾಮ' ‹ಸಂಸಿದ್ಧಸಿದ್ಧೇಶ' ‹‹ಸಿದ್ಧವಟನಾಥ' ‹ವಟಗೋಪ' ‹ವಟಪುರ ಸಿದ್ಧನಾಥ' ಇತ್ಯಾದಿ ಯಾಗಿ ‹ಸಿದ್ಧವಟ, ಅಥವಾ ‹ವಟಪುರ'ದ ಸಿದ್ಧೇಶನನ್ನು ಸ್ತುತಿಸಿದಾನೆ. ಸಿದ್ಧನಂಜೇ ಶನು ಕೂಡ, ಭೀಮಕವಿಯ ತಂದೆಯಾದ ಶಿವಕವಿದೇವನು ಆಂಧ್ರಭಾಷಾ ಸತ್ಕ ವಿತ್ವಕೋವಿದನಾಗಿ ಶ್ರೀಶೈಲದಕ್ಷಿಣ ದ್ವಾರವೇನಿಸುವ ಸಿದ್ಧವಟಪುರದಲ್ಲಿದ್ದನೆಂದು ಹೇಳಿದ್ದಾನೆ. ಆದ್ದರಿಂದ ಭೀಮಕವಿಯ ಊರು ಶ್ರೀಶೈಲದ ಸಮೀಪದಲ್ಲಿದ್ದ ಸಿದ್ಧವಟ ಪುರ ಅಥವಾ ವಟಪುರವೆಂದಿಟ್ಟುಕೊಳ್ಳಬಹುದು ಆ ಊರು ಈಗ ಇದೆಯೆ? ಹೆಸರು ಬದಲಾಯಿಸಿಕೊಂಡಿದೇಯೆ ? ಸಂಶೋಧನೀ ಅಂಶ

## ಕವಿಕೃತಿಗಳು ಬಸವಪುರಾಣ

ಶಿವಕವಿಗಳನ್ನು, ಶಿವತತ್ವವಿದರನ್ನು ಸಕಲಾಗಮಜ್ಞರನ್ನು ನೆನೆದು, ಬಸವ ಚರಿತೆಯನ್ನು ರಚಿಸಲು ಭೀಮಕವಿ ಮನದಂದಾಗ 'ಇಸಿತು ಬಡಮತಿಂ ಬಸವರಾ ಜನ ಕೃತಿಯ ನಾನೆಂತು ರಚಿಸುವೇ" ಎಂಬ ಅನುಮಾನ ಉಂಟಾಗಿ ಶಿವಯೋಗ ನಿದ್ರಾಮುದ್ರಿತದೊಳಿರಲು ಪಾಲ್ಕುರಿಕೆ ಸೋಮೇಶನೂ, ಅನಘ ದೇವಾರ್ಯನೂ ಕನಸಿನಲ್ಲಿ ಬಂದು.

14 ನಮ್ಮ ನಾಡಿನಲ್ಲಿ ದೇವಯ್ಯ ದೇವಪ್ಪ, ಇತ್ಯಾದಿ ಹೆಸರುಗಳಿರುವದು ಅಪರ-ರೂಪವೇನಲ್ಲ

ಆವುದಕ್ಕನುಮಾಸಿಸದಿರೊಲಿ
ದಾವ ಶಬ್ದಾರ್ಥಮುಮನಾದೊಡೆ
ಭಾವಿಸಲು ನಿನಗ ಜಿಪಿ ನಿನ್ನಾತ್ಮದೊಳಗಲದಿರ್ದು
ನಾವು ರಚಿಸುವೆವೆಸೆವ ಬಸವಕ
ಥಾವಿಸರಮಾ ಬರೆದುಕೋಯೆಂದು–

ಹೇಳಿದರೆಂದೂ, ಅವರ ಆಜ್ಞೆಯನ್ನೇ ಶಿರಸಾವಹಿಸಿ ತಾನು, "ಅಸಮಲಿಂಗೈಕ್ಯಾನುಭಾವ ಪ್ರಸರಮತಿ ಕವಿಸೋಮನಾಥನು ರಸಮೊಸರೆ ಮುನ್ನು ಸುರ್ದಪನೆ" ಕನ್ನಡಿಸಿರುವುದಾಗಿಯೂ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ.[15] ಇದರಿಂದ ಭೀಮಕವಿಯ ಕನ್ನಡ ಬಸವಪುರಾಣ ಪಾಲ್ಕುರಿಕೆ ಸೋಮೇಶನ ತೆಲುಗು ಬಸವಪುರಾಣದ ಕನ್ನಡ ರೂಪವೆಂಬುದ ಸ್ಪಷ್ಟ.

ಭೀಮಕವಿಯ ಬಸವಪುರಾಣ ಎರಡನೆಯ ಮುಕ್ಕಣನೆನಿಸ ಬಸವಣ್ಣ ಚರಿತ್ರೆಯನ್ನು ನಿರೂಪಿಸುವ ಕನ್ನಡಕೃತಿಗಳಲ್ಲಿ ಎರಡನೆಯದು. ಮೊದಲನೆಯಕೃತಿ ಹರಿಹರ ವಿರಚಿತ 'ಬಸವರಾಜ ದೇವರ ರಗಳೆ' ಹರಿಹರ ಬಸವಣ್ಣ ಸಂಗನಬಸವಣ್ಣ. ಆದುದರಿಂದ ಬಸವಣ್ಣನವರು ಕೂಡಲ ಸಂಗಮನಲ್ಲಿಟ್ಟಿದ್ದ ಅಪ್ಪಟ ಭಕ್ತಿಯನ್ನೂ, ಸಂಗಸ್ವರೂಪಿಗಳಾದ ಜಂಗಮದಾಸೋಹವನ್ನೂ ಮೆರೆಯುವುದೇ ಹರಿಹರನ ಮುಖ್ಯ ಉದ್ದೇಶ ಆದುದರಿಂದ ಅವನ ಕೃತಿ ಬಸವಣ್ಣನವರ ಸಂಗ–ಜಂಗಮ ಭಕ್ತಿಯನ್ನು ಗರ್ಭೀಕರಿಸಿಕೊಂಡಿರುವ ಒಂದು ಮಹಾ ಸಂಪುಟದಂತಿದೆ. ಭೀಮಕವಿಯ

ಕುತ್ತದಿಂ ಮಡಿವವರನಿಂದ್ರನೆ
ನುತ್ತಥಮರಂ ಪೊಗಳಿದೈನ್ಯದೊ
ಳತ್ತಲಿತ್ತಂ ಸುತ್ತಿಸುತ್ತಿದುರಾಸೆಯಂ ಪೊತ್ತು
ಉತ್ತಮದ ಕವಿತೆಯನಮಾನಸ್ಯೆ
ಗಿತ್ತು ಪಂಪಂ ಗುಂಪನುಜಿನಿ
ಗುತ್ತಭವನಂ ಪೊಗಳದಳಿಪರನೇನನೆಣಿಸುವೆನು

ಎಂಬ ಪದ್ಯದಲ್ಲಿ[16], ಹರಿಹರನ ಮನುಜರ ಮೇಲೆ ಸಾವವರ ಮೇಲೆ 'ಎಂಬ ಸುಪ್ರಸಿದ್ಧ ಪದ್ಯದ ಭಾವವೇ ಅಡಕವಾಗಿದ್ದರೂ, ಭೀಮಕವಿ, ಬಸವ ಚರಿತೆಯ ನಿರೂಪಣೆಯಲ್ಲಿ ಹರಿಹರನನ್ನನುಸರಿಸದೆ ಪಾಲ್ಕುರಿಕೆಯ ಸೋಮೇಶ್ವರನನ್ನನುಸರಿಸಿದ್ದಾನೆ. ಭೀಮಕವಿಯ ದೃಷ್ಟಿಯಲ್ಲಿ ಬಸವಣ್ಣನೊಬ್ಬ ಪವಾಡ ಪುರುಷ ಆದುದರಿಂದ ಅವನ ಕೃತಿಯಾದ ಬಸವಪುರಾಣದಲ್ಲಿ ಬಸವಣ್ಣನವರ ಅದ್ಭುತ ಕಾರ್ಯಗಳ ಅರ್ಥಾತ್ ಪವಾಡಗಳ ವಿವರಣೆ ಪ್ರಮುಖವಾಗಿ ಬಂದಿದೆ. ಜೊತೆಗೆ ಅವಕಾಶ ಕಲ್ಪಿಸಿಕೊಂಡು ಪುರಾತನರ, ಮುಗ್ಧಭಕ್ತರ,

---

15 ಬಸವಪುರಾಣ ಕಾಂಡ=೧, ಸಂಧಿ—೧, ಪದ್ಯ ೧೪,೧೫,೧೬,

16 ಬಸವಪುರಾಣ ಕಾಂಡ-೧, ಸಂಧಿ-೧ .ಪದ್ಯ-೩೬.

ಬೇರೆ ಬೇರೆ ಶರಣರ ಕಥೆಗಳನ್ನು ಭೀಮಕವಿ ನಿರೂಪಿಸಿದ್ದಾನೆ. ಇಂಥ ಕಥೆಗಳೇ ಕಾವ್ಯದ ಅರ್ಧಕ್ಕಿಂತ ಹೆಚ್ಚುಭಾಗವನ್ನು ವ್ಯಾಪಿಸಿವೆ ಅವುಗಳನ್ನು ನಿರೂಪಿಸಲು ಕವಿ ಕಲ್ಪಿಸಿಕೊಂಡ ಸಂದರ್ಭಗಳೂ ಕೆಲವು ಸಲ ಔಚಿತ್ಯಪೂರ್ಣವಾಗಿಯೇ ಇವೆ. 'ಬೇಡುವ ವರಿಲ್ಲದೆ ಬಡವನಾದೆನಯ್ಯ' ಎಂಬ ಬಸವಣ್ಣನ ವಚನವನ್ನು ಭಕ್ತರು ಕಲಿತು ಬಂದು ಮಡಿವಳ ಮಾಚದೇವನ ಮುಂದೆ ಹಾಡಲು ಅವನು ಮುಳಿದು ಕೈಯಂ ಕಿವಿಯೊಳೊಂದಿಸಿಕೊಳುತ ‹ಶಿವಶಿವ ತನಗಿದು ಯುಕ್ತಿಯೇ? ಬಸವನೇಕವಿವೇಕ ಯಾದನು ? ಹೊಸತೆನಗೆ! ಗರ್ವಿಸಿದನಕಟಾ ದೀನರಂ ಮಾಡಿದನೆ ಜಂಗಮುವ? ವಸುಧೆಯೊಳು ತಾನಿದವಂಗಡ ಹಸನವೈ ನುಡಿ, ಈ ನುಡಿಯ ನಾಲಿಸುವರೇ ಶಿವ ಭಕ್ತರುಗಳು, ಅತಿದೋಷವಹುದಲ್ಲ.... ನೀವೆಂದೂ ಎಮ್ಮಯ ಮುಂದೆ ನಿಂದು ಹಾಡಂ ಪಾಡದಿರಿ' ಎಂದು ಕೋಪಿಸಿ ತನ್ನ ಕಾಯಕಕ್ಕೆ ಹೋಗುತ್ತಾನೆ[17]. ಆ ಸುದ್ದಿ ಭಕ್ತರಿಂದ ಬಸವನಿಗೆ ತಿಳಿದು, ತನ್ನ ತಪ್ಪಿನ ಅರಿವಾಗಿ ಮಾಚಿದೇವನ ಕ್ಷಮೆ ಯಾಚಿಸುತ್ತಾನೆ. ಆಗ ಮಾಚಯ್ಯ "ಅವನಿಯೊಳ್ ಉಬ್ಬಿ ಅಹಂಕರಿಸಿದೊಡೆ ಮೃಢಭಕ್ತಿ ಘನವಹುದೆ?"[18] ಎಂದು ಬಸವನನ್ನು ಪ್ರಶ್ನಿಸಿ, ಭಕ್ತಿಗರ್ಪಿತರಾಗಿ, ಪಶ್ಚಾತ್ತಾಪಕ್ಕೊಳಗಾದ ಜೇಡರದಾಸಿಮಯ್ಯ, ಸಿರಿಯಾಳ, ನಂಬಿಯಣ್ಣ ಮೊದ-ಲಾದವರಕಥೆ ಹೇಳುತ್ತಾನೆ. ಹೀಗೆ ಮೇಲಿಂದ ಮೇಲೆ ಬರುವ ಕಥೆಗಳ ಜೌಚಿತ್ಯವನ್ನು ಕುರಿತು ಭಿನ್ನಾಭಿಪ್ರಾಯಕ್ಕೆಡೆಯಿದ್ದರೂ, ಆ ಕಥೆಗಳಲ್ಲಿ ವ್ಯಕ್ತ ವಾಗಿರುವ ಕವಿಯ ಕಥನ ಕೌಶಲ ಮತ್ತು ಅವು ಒಳಗೊಂಡಿರುವ ಕಾವ್ಯಸೌರಭ ಆಸ್ವಾದನೀಯ.

ಭೀಮಕವಿ, ಬಸವಣ್ಣನ ವ್ಯಕ್ತಿತ್ವಕ್ಕೆ ಸಂಪೂರ್ಣಮಾರುಹೋದವ. ಬಸವನ ಬಗೆಗಿದ್ದ ಅವನ ಅಪಾರ ಭಕ್ತಿ ಮತ್ತು ಅನಿತ ವಿಶ್ವಾಸಗಳು, ಪೀಠಿಕಾಸಂಧಿಯ ಕೆಲವು ಪದ್ಯಗಳಲ್ಲಿ ಪರಿಸ್ಫುಟಗೊಂಡಿವೆ. "ಬಸವನೆಂಬಕ್ಷರತ್ರಯವನು, ಭಕ್ತಿ ಯಿಂದ ಮನಸ್ಸಿನಲ್ಲಿ ಯಾವನು ಒಮ್ಮೆಯಾದರೂ ಪಠಿಸುತ್ತಾನೆಯೋ ಅವನ ಮುಖಕಮಲವೆ ಈಶ್ವರನ ನೆಲೆಯಾಗಿರುತ್ತದೆ. ಅಸಮನೇತ್ರನೇ ಬಸವನಾ ಮದಿಂದ ಎಸೆಯುತ್ತಿದ್ದಾನೆ. ಬಸವನು ಇಳೆಗುದಯಿಸಿದ ಮಾತ್ರಕ್ಕೆ ನರಜಾತ-ನೆನ್ನಲು ಬರುವುದಿಲ್ಲ. ಶಿವನ ನೆಲೆಯನ್ನು ಬಸವ ಬಲ್ಲ, ಬಸವನ ನೆಲೆಯನ್ನು ಶಿವನು ಬಲ್ಲ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಪದವಿಗಳನ್ನು ಪಡೆಯಬಹುದು. ಆದರೆ "ಸಶಿವನೆಂದೆನಿಪ ಬಸವನಾಗಲು" ಬಾರದು.[19]— ಇತ್ಯಾದಿ ಮಾತುಗಳನ್ನು ಪರಿಶೀಲಿಸಬಹುದು. ಸಶಿವನೆಂದೆನಿಪ ಬಸವನ ಪಾವನ ಚರಿತೆಯನ್ನು ಚಿತ್ತರಿಸುವ ತನ್ನಕಾವ್ಯ, ಮಹಾಭಾರತಕ್ಕೇನೂ ಕಡಮೆಯಾದುದಲ್ಲವೆಂದು ಕವಿಯ ಭಾವನೆ.

---

17 ಬಸವಪುರಾಣ ಸಂಧಿ—೨೧, ಪದ್ಯ-೪೬-೪೮

18 ಬಸವಪುರಾಣ ಸಂಧಿ-೨೧, ಪದ್ಯ-೬೭

19 ಬಸವಪುರಾಣ ಸಂಧಿ-೧. ಪದ್ಯ ೨೭ ರಿಂದ ೩೧

ಆದಿರುದ್ರಗಣೌದಿಪರ್ವಂ
ವಾದಿಗಳ ಹೃತ್‌ಶಲ್ಯಪರ್ವಂ
ಮೋದಭಕ್ತಗೆ ಬಸವಸಿಂಹಾಸನ ಸಭಾಪರ್ವಂ
ವೇದವಿದರುದ್ಯೋಗಪರ್ವಂ.
ವೇದಿಸುವರಿಗೆ ಶಾಂತಿಪರ್ವಂ
ಮೇದಿನಿಯೊಳಖಿಳಾಗಮಜ್ಞರ ಕರ್ಣಪರ್ವವಿದು.

ಎಂಬ ಪದ್ಯದಲ್ಲಿ,[20] ಮಹಾಭಾರತದಲ್ಲಿರುವಂತೆ ತನ್ನ ಕಾವ್ಯದಲ್ಲೂ, ಅದಕ್ಕುಚಿತ ವಾದ ಪರ್ವಗಳಿರುವುದನ್ನು ಸೂಚಿಸಿದ್ದಾನೆ.

ಬಸವಪುರಾಣದ ವಿವರವಾದ ವಿಮರ್ಶೆ ಇಲ್ಲಿ ಪ್ರಸ್ತುತವಲ್ಲ. ಅದರ ಕೆಲವು ವೈಶಿಷ್ಟ್ಯಗಳನ್ನು ಮಾತ್ರ ಸೂಚಿಸಬಹುದು. ಮೊದಲೇ ತಿಳಿಸಿರುವಂತೆ ಭೀಮ ಕವಿಯ ಬಸವಪುರಾಣ, ಬಸವಣ್ಣನನ್ನು ಕುರಿತು ಎರಡನೆಯ ಕನ್ನಡಕೃತಿ, ಆದರೆ ಮೊದಲ ಕನ್ನಡ ಬೃಹತ್‌ಕೃತಿ. ಭಾಮಿನೀ ಷಟ್ಪದಿಯಲ್ಲಿಯೇ ಸಮಗ್ರವಾಗಿ ಬರೆದ ಕನ್ನಡಕಾವ್ಯಕೃತಿಗಳಲ್ಲಿ ಬಸವಪುರಾಣವೇ ಮೊಧಲನೆಯದು. ಬೇರೆ ಭಾಷೆಯಕೃತಿ ಗಳು ಕನ್ನಡಕ್ಕೆ ಹೇಗೆ ಅನುವಾದಗೊಂಡಿವೆ ಎಂಬುದಕ್ಕೆ ಇದೂ ಒಂದು ಮಾದರಿ. ದೇಸಿಛಂದವಾದ ಷಟ್ಪದಿಯಲ್ಲಿ ಇದು ರಚನೆಗೊಂಡಿದ್ದರೂ ಇದರ ಬಂಧ ಪ್ರೌಢ ಕಾವ್ಯದ ಬಂಧ. ವೈರಿಪದ, ಅಪಶಬ್ದ, ಅಧರ್ಮೋಪಮೆ, ದುಸ್ಸಂಧಿ, ಅಳಂಕಾರ ಹೀನದೆಯೆಂಬ ಪೊಳ್ಳನ್ನು ಕಳೆದು,

ಸರಸಮೃದುತರ ಯಮಕಗಮಕವಿ
ಸರ ಸಮಾಸ ಪ್ರಾಸ ದೇಶೀ
ಸರಣಿ ಶಬ್ದಾರ್ಥೋಪಮಾ ಚಾತುರ್ಯಮಾಧುರ್ಯ
ಸರಸಪದಶಯ್ಯಾ ದೃಢವ್ಯಾ-
ಕರಣಯುತ ಲಾಲಿತ್ಯ ನಿಯಮಾ
ಕ್ಷರ ಸುಲಕ್ಷಣ ಭಾವಮಾಗಿರೆ ರಚಿಸುವೆಂ ಕೃತಿಯ

ಎಂದು ಕವಿ ಹೇಳಿರುವನಲ್ಲದೆ,[21] "ಪ್ರಾಸಯತಿಗಣ ಗದ್ಯ ಪದ್ಯ ಸಮಾಸಯುತ ವಸ್ತುಕದ ಮುಂದೆ ವಿಳಾಸಮೆ ? ಸಾಮಾನ್ಯಮೀ ವರ್ಣಕವಿತೆಯೆಂದು ಓಸರಿಸದಿರಿ, ಬರಿಯ ಕನ್ನಡ ಭಾಷೆಯೆಂದೆನಲಾಗದು ಇಳೆಗಿದು ಲೇಸೆನಿಪ ವೇದಪ್ರಮಾಣವು,.... ಪರಿಮಿತಾಕ್ಷರತತಿಯೊಳ್ ಅಪರಿಮಿತಾರ್ಥ ರಚನಿಯಲಿ ವಿರಚಿಸುವುದು ಕವಿಯ

20. ಬಸವಪುರಾಣ. ಸಂಧಿ–೫, ಪದ್ಯ–೨.
21. ಬಸವಪುರಾಣ. ಸಂಧಿ–೧, ಪದ್ಯ–೧೮, ೧೯.

ಚತುರತೆ,.... ಸರಸಮೃದು ಮಧುರೋಕ್ತಿಗಳು ಮಿಗೆ, ರಚಿಸುವೆನು ಕೃತಿಯ"[೨೨] ಎಂದೂ ಸೂಚಿಸಿದ್ದಾನೆ. ಇವೆಲ್ಲ ಮಾತುಗಳು ಕವಿಯ ಕಾವ್ಯಶೈಲಿಯ ಸ್ವರೂಪ ವನ್ನು ನಿರ್ದೇಶಿಸುತ್ತವೆ. ದೇಸಿಯಲ್ಲೂ ಮಾರ್ಗಲಕ್ಷಣವನ್ನಿರಿಸುವ ಸಂಪ್ರದಾಯ ವೊಂದು ಕನ್ನಡ ಸಾಹಿತ್ಯದಲ್ಲಿದೆ. ಅಂತಹ ಸಂಪ್ರದಾಯದ ಮೊದಲ ಕಾವ್ಯಗಳಲ್ಲಿ ಬಸವಪುರಾಣ ಒಂದು. ಇನ್ನೊಂದು ಶಿವಶರಣರ ಪುರಾತನರ ಕಥಾರತ್ನ ಕೋಶ. ಮುಂದಿನ ವೀರಶೈವ ಕವಿಗಳ ಮೇಲೆ ಈ ಕೃತಿಯ ಪಭ್ರಾವ ಹಿರಿದು. ಪದ್ಮರಾಜ ಪುರಾಣ, ಚೆನ್ನಬಸವಪುರಾಣ, ರಾಘವಾಂಕಚರಿತೆ, ಪಾಲ್ಕುರಿಕೆಸೋಮೇಶ್ವರ. ಪುರಾಣ, ಪ್ರಭುದೇವರಪುರಾಣ, ಪ್ರೌಢದೇವರಾಯನಕಾವ್ಯ ಇತ್ಯಾದಿ ಮಹತ್ವ ಪೂರ್ಣ ವೀರಶೈವ ಕೃತಿಕರ್ತರು ಬಸವಪುರಾಣವನ್ನೇ ಮಾದರಿಯಾಗಿರಿಸಿಕೊಂಡಿ-ದ್ದಾರೆ. ಬಸವಪುರಾಣಕ್ಕಿಂತ ಮೊದಲು ರಚನೆಗೊಂಡ ಹರಿಹರ ರಾಘವಾಂಕರ ಕೃತಿಗಳು ವೀರಶೈವ ಕವಿಗಳಿಗೆ ಮಾನ್ಯವಾಗಿದ್ದರೂ ಕಾವ್ಯಸ್ವರೂಪದಲ್ಲಿ ಮಾತ್ರ ಅವರು ಹೆಚ್ಚಾಗಿ ಬಸವಪುರಾಣವನ್ನೇ ಅನುಸರಿಸಿರುವುದು ಗಮನಾರ್ಹ ಅಂಶ. ಒಟ್ಟಿನಲ್ಲಿ ಬಸವಪುರಾಣ, ವೀರಶೈವಸಾಹಿತ್ಯ, ನಡೆದುಬಂದ ದಾರಿಯಲ್ಲಿ ನಿಶ್ಚಯ ವಾಗಿಯೂ ಒಂದು ಮೈಲಿಗಲ್ಲು.

## ಭೀಮಕವೀಶ್ವರ ರಗಳೆ

ಇದು ಭೀಮಕವಿಯ ಮತ್ತೊಂದು ಕೃತಿ. ಷಡಕ್ಷರ ರಗಳೆಯೆಂದೂ ಇದನ್ನು ಕರೆಯಬಹುದು. ಏಕೆಂದರೆ ಷಡಕ್ಷರ ಮಂತ್ರ ಮಹಿಮೆಯು ಈ ಕೃತಿಯಲ್ಲಿ ಅಷ್ಟೋತ್ತರಶತಪಾದಗಳಲ್ಲಿ ನಿರೂಪಣೆಗೊಂಡಿದೆ. ವಿರಕ್ತತೋಂಟದಾರ್ಯನ 'ಪಾಲ್ಕು ರಿಕೆಯ ಸೋಮೇಶ್ವರ' ಪುರಾಣದಿಂದ; ಸೋಮೇಶ್ವರನು, ವೈಷ್ಣವನಾದ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ, ಅವನಿಗೆ ತನ್ನ ಮಗನಾದ ಚತುರ್ಮುಖ ಬಸವೇಶನಿಂಗ ವೀರಶೈವದೀಕ್ಷೆ ಕೊಡಿಸಿದ ವಿಷಯ ತಿಳಿದು ಬರುತ್ತದೆ. ಆ ಚಕ್ರ-ಪಾಣಿ ರಂಗನಾಥ,ತೆಲಗಿನಲ್ಲಿ ರಚಿಸಿರುವ 'ಷಡಕ್ಷರ ರಗಳೆ'ಯನ್ನೇ ಭೀಮಕವಿ ಕನ್ನಡಕ್ಕೆ ಅನುವಾದಿಸಿರಬೇಕೆಂದು, 'ಭೀಮಕವೀಶ್ವರ ರಗಳೆಯ' ಸಂಪಾದಕರಾದ ಗು. ಅ. ಶಿವಲಿಂಗಯ್ಯನವರು ತಿಳಿಸಿದ್ದಾರೆ.

ಸಿದ್ಧನಂಜೇಶನು 'ರಾಘವಾಂಕ ಚರಿತೆ'ಯಿಂದ, ಭೀಮಕವಿ 'ಭೃಂಗಿದಂಡಕ' ಎಂಬ ಕೃತಿಯನ್ನು ರಚಿಸಿರುವಂತೆ ತಿಳಿದುಬರುತ್ತದೆ. ಆದರೆ ಅದು ಸಿಕ್ಕಿಲ್ಲ.

---

22. ಬಸವಪುರಾಣ. ಸಂಧಿ-೧, ಪದ್ಯ-೨೧, ೨೨.

ಭೀಮಕವಿ ಒಂದು ಬೃಹತ್‌ಪುರಾಣ, ಒಂದು ರಗಳೆ, ಮತ್ತು ಒಂದು ದಂಡಕವನ್ನು ರಚಿಸಿ ಹದಿನಾಲ್ಕನೆಯ ಶತಮಾನದ ಒಬ್ಬ ಅಗ್ರಗಣ್ಯ ವೀರಶೈವ ಕವಿಯಾಗಿದ್ದಾನೆ.

## ಪದ್ಮಣಾಂಕ

ಕರ್ಣಾಟಕ ಕವಿಚರಿತೆಕಾರರು ಇವನ ಕಾಲವನ್ನು ಸು. ಕ್ರಿ.ಶ. ೧೩೮೫ ಎಂದು ಊಹಿಸಿದ್ದಾರೆ.[23] ಹದಿನೈದನೆಯ ಶತಮಾನದಲ್ಲಿಯೂ, ೧೪೨೦ ರ ವರೆಗೆ ಪದ್ಮಣಾಂಕ ಜೀವಿಸಿರಬಹುದು.[24] ಪದ್ಮಣಾಂಕ ವೀರಶೈವರಿಗೆ ಪೂಜನೀಯನಾಗಿರುವ ಸಕಲೇಶಮಾದರಸನ ವಂಶಜ. ಪದ್ಮರಾಜ ಪುರಾಣದ ಆರಂಭದಲ್ಲಿ, ವಿಶ್ವೇಶ್ವರ ಗಿರಿಜೆಯರನ್ನು ಸ್ತುತಿಸಿದ ಮೇಲೆ[25] ಬಸವ, ಗಂಗಾಂಬಿಕೆ, ವೀರಭದ್ರ, ಭೃಂಗಿ, ಷಣ್ಮುಖ, ಪ್ರಮಥಗಣ, ರುದ್ರಗಣ, ವೃಷಭ ಯೋಗಾಚಾರ್ಯಕುಲ, ಅರವತ್ತು ಮೂವರು ಪುರಾತನರು, ಷೋಡಶಗಣ, ತೇರಸರು, ದಶಗಣ, ಅಮರಗಣ, ಅಸಂಖ್ಯಾತ ಭಕ್ತರು, ಬೋಧಾಯನಾಯ, ಶಂಕರಾಚಾರ್ಯ, ಹರದತ್ತ, ತ್ರಿಲೋಚನ, ಅಘೋರ, ಶಿವದೇವ, ಭೂತಕಂಠ ಮೊದಲಾದ ಪೂರ್ವಾಚಾರ್ಯರು, ನೀಲಕಂಠ ನಾಗಾರ್ಯ, ಪಾಲ್ಕುರಿಕೆ ಸೋಮೇಶ್ವರ, ಮಲ್ಲಿಕಾರ್ಜುನಾಚಾರ್ಯ, ಶಿವಲೆಂಕ ಮಂಚಣ್ಣ, ಶ್ರೀಪತಿ ಪಂಡಿತ, ಬಾಣ, ಉದ್ಭಟ, ರಾಘವ, ಭೋಜ, ಹರೀಶ್ವರ, ಭೀಮಕವಿ, ಮಯೂರ, ಮಲ್ಹಣ, ಭೂತಕಾಲದ ಸತ್ಪುರುಷ ವೃಂದ; ವರ್ತಮಾನ ಕಾಲದ ಶರಣ ಸಂದೋಹ, ಭವಿಷ್ಯತ್ಕಾಲದ ಭಕ್ತತತಿ ಮೊದಲಾದವರಿಗೆ ವಂದಿಸಿ[26] ತದನಂತರ ಸುಮಾರು ಹದಿನಾಲ್ಕು ಪದ್ಯಗಳಲ್ಲಿ[27] ತನ್ನ ವಂಶಜರನ್ನು ಭಕ್ತಿಪುರಸ್ಸರ ಸ್ಮರಿಸಿದ್ದಾನೆ. ಶಿವಯೋಗಿ ಮಲ್ಲರಸ (ಸಕಲೇಶ ಮಾದರಸನ ತಂದೆ)ನಿಂದ ಮೊದಲುಗೊಂಡು ತನ್ನ ವರೆಗೆ ಆಗಿಹೋದ ತನ್ನ ವಂಶಜರ ಮಹಿಮಾತಿಶಯಗಳನ್ನು ಅಲ್ಲಿ ಸಂಗ್ರಹವಾಗಿ ನಿರೂಪಿಸಿದ್ದಾನೆ. ಎರಡನೆಯ ಸಂಧಿಯ ಆರಂಭದ ಸುಮಾರು ೫೮, ೬೦ ಪದ್ಯಗಳಲ್ಲಿ ತನ್ನ ವಂಶದ ಮೂಲ ಪುರುಷ ಶಿವಯೋಗಿ ಮಲ್ಲರಸ, ಸಕಲೇಶಮಾದರಸ, ಮಾಯಿದೇವಾರ್ಯ (ಕಾವ್ಯನಾಯಕ ಕೆರೆಯ ಪದ್ಮರಸನ ತಂದೆ) ಈ ಮೂವರ ಕಥೆ ಸ್ವಲ್ಪ ವಿಸ್ತಾರವಾಗಿಯೇ ಬಂದಿದೆ. ಅಲ್ಲಿಂದ ಮುಂದೆ,

---

23. ಕರ್ಣಾಟಕ ಕವಿಚರಿತೆ (೧೯೬೧). ಪುಟ-೪೯೨, ೯೩.
24. ಡಾ. ಆರ್. ಸಿ. ಹಿರೇಮಠ. ಪದ್ಮರಾಜಪುರಾಣದ ಪ್ರಸ್ತಾವನೆ. ಪುಟ. ೨೪.
25. ಪದ್ಮರಾಜಪುರಾಣ. ಸಂಧಿ-೧, ಪದ್ಯ ೧ ರಿಂದ ೪.
26. ಪದ್ಮರಾಜಪುರಾಣ. ಸಂಧಿ-೧, ಪದ್ಯ ೫ ರಿಂದ ೧೫.
27. ಪದ್ಮರಾಜಪುರಾಣ. ಸಂಧಿ-೧, ಪದ್ಯ ೧೬ ರಿಂದ ೨೯.

ಕಾವ್ಯನಾಯಕ ಕೆರೆಯಪದ್ಮರಸನ ಕಥೆ ಬರುತ್ತದೆ. ಪದ್ಮರಾಜ ಪುರಾಣದ ಪ್ರಕಾರ, ಕವಿಯ ವಂಶವಲ್ಲರಿ ಹೀಗಿದೆ:




ಪದ್ಮಣಾಂಕ, ತನ್ನ ವಂಶಜರನ್ನು ಕುರಿತು ನೀಡಿರುವ ವಿವರಣೆಯಿಂದ, ಅವರು ಸತ್ಯ ಶರಣರು ನಿತ್ಯ ಶಿವಾನಭಾವಿಗಳು, ಲಿಂಗಾಂಗ ಸಾಮರಸ್ಯಸುಖಿಗಳು, ಸರಸ ಸಾಹಿತ್ಯ ಜ್ಞರು, ನಿರುಪಮ ಪಂಡಿತರು, ವಾದೀಭಸಿಂಹರು, ಕಾಶಿಯ ವಿಶ್ವನಾಥನ ನಿಸ್ಸೀಮ ಭಕ್ತರು ಮತ್ತು ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಸಾಧಿಸಿದ ಪರಮ ವೀರಶೈವ ರೆಂಬುದು ವಿದಿತವಾಗುತ್ತದೆ. ಪದ್ಮಣಾಂಕನ ವಂಶದ ಮೂಲ ಪುರುಷ ಶಿವಯೋಗಿ ಮಲ್ಲರಸನ ಊರು ಕಲ್ಲುಕುರಿಕೆ. ಸಕಲೇಶ ಮಾದರಸ ಶ್ರೀಶೈಲಕ್ಕೆ ಹೋಗುವ

ಮಾರ್ಗದಲ್ಲಿ ಕೆಲದಿನ ಅಂಬೆಯಲ್ಲಿ ತಂಗಿದ್ದ ಅಲ್ಲಿಂದ ಮುಂದೆ ಅಂಬೆಯೇ ಪದ್ಮಣಾಂಕನ ವಂಶಜರ ವಾಸಸ್ಥಾನವಾದಂತೆ ತೋರುತ್ತದೆ.

'ಪದ್ಮರಾಜ ಪುರಾಣ', ನರಸಿಂಹ ಬಲ್ಲಾಳನಲ್ಲಿ ಮಂತ್ರಿಯಾಗಿದ್ದ, ಕೆರೆಯ ಪದ್ಮರಸನ ಮೂರ್ತಿ ಸ್ವರೂಪವನ್ನು ವಿವರವಾಗಿ ಆದರೆ ಸುಂದರವಾಗಿ ಚಿತ್ರಿಸುವ ಹದಿಮೂರು ಸಂಧಿಗಳನ್ನೊಳಗೊಂಡ ಬೃಹತ್ ಕೃತಿ. ಪದ್ಮರಸರ ವ್ಯಕ್ತಿತ್ವ ಈ ಕಾವ್ಯದಲ್ಲಿ ಎಂಟೆಸಳ ಕುಸುಮದಂತೆ ದಳದಳವಾಗಿ ಅರಳಿಸಂದಿದೆ.[28] ಕೃಪಾಳುತ್ವ, ಭಕ್ತಿ, ನಿಷ್ಠೆ-ಭಾಷೆ, ಪ್ರಪಂಚವನ್ನು ಸ್ವೀಕರಿಸಿದ ಬಗೆ, ಮಹಾಸತ್ವಗುಣ ಕಾರಣಿಕ, ರಸಿಕ ಚಕ್ರೇಶ್ವರ, ಶಿವಾದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ, ಸಮದೃಷ್ಟಿ-ಸಮ್ಯಕ್‌ದೃಷ್ಟಿ ಇವೇ ಆ ವ್ಯಕ್ತಿತ್ವ ಕುಸುಮದ ಎಂಟೆಸಳುಗಳು. ವಾರ್ಧಕಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಕವಿಯ ದೃಷ್ಟಿ ಮೊದಲಿಸಿಂದ ಕೊನೆಯವರೆಗೆ ಕಥಾನಾಯಕನ ವ್ಯಕ್ತಿತ್ವವನ್ನು ಚಿತ್ರಿಸುವದರ ಕಡೆಗೇ ಇದೆ. ಹರಿಹರನ ಪವಾಡಗಳ ವರ್ಣನೆ, ವಾದವಿವಾದಗಳು ನಡೆದ ಸಂದರ್ಭ-ಇತ್ಯಾದಿ ಒಂದೆರಡು ಕಡೆ, ಪದ್ಮರಸನ ವ್ಯಕ್ತಿತ್ವ ಚಿತ್ರಣ ನಿಂತಂತೆ ಕಂಡರೂ, ಹರಿಹರ ಪದ್ಮರಸರ ಮಧ್ಯೆ ಇದ್ದ ಆತ್ಮೀಯತೆಯನ್ನು ನೆನೆದಾಗ ಅದು ದೋಷವೆನಿಸದು.

ಮೂಲ ಕಥೆಯ ಜೊತೆಗೆ ಪದ್ಮರಾಜ ಪುರಾಣದಲ್ಲಿ ಪ್ರಸಂಗಾನುಸಾರ ಹಲವಾರು ಕಥೆಗಳು, ಮತ್ತು ಉಪಕಥೆಗಳು ಬಂದಿವೆ. ಅವುಗಳಲ್ಲಿ ಕೆಲವು ದೀರ್ಘವಾಗಿದ್ದರೆ ಇನ್ನು ಕೆಲವು ಸಂಕ್ಷೇಪವಾಗಿವೆ. ಹತ್ತು ಹನ್ನೊಂದನೆಯ ಸಂಧಿಗಳಲ್ಲಂತೂ ಕವಿ, ಕತೆಗಳನ್ನು ಸೂರೆಗೆಯ್ದಿದ್ದಾನೆ. ತ್ರಿಭುವನ ತಾತನ ವಿಷ್ಣುಪಾರಮ್ಯವನ್ನು ಖಂಡಿಸಿ ಶಿವಪಾರಮ್ಯವನ್ನು ಪ್ರಸ್ಥಾಪಿಸುವಾಗ, ವಾದ ಸಮರ್ಥನೆಗಾಗಿ ಕವಿ ಅನೇಕ ಪೌರಾಣಿಕ ಕಥೆಗಳನ್ನು ಉದ್ಧರಿಸಿದ್ದಾನೆ. ಅವುಗಳ ಸಂಖ್ಯೆ ಸುಮಾರು ಅರವತ್ತು. ಆ ಪೌರಾಣಿಕ ಕತೆಗಳ ಬಗೆಗೆ ಡಾ. ಆರ್. ಸಿ. ಹಿರೇಮಠ ಅವರು "ಅವೆಲ್ಲ ಪುರಾಣಗಳಿಂದ ಬಂದ ಕಥೆಗಳಾಗಿರುವದರಿಂದ ಅಲ್ಲಿ ಮಾನವ ಅಂಶಕ್ಕಿಂತ ನಾ ಹೆಚ್ಚು ನೀ ಹೆಚ್ಚು ಎಂದು ಹೋರಾಡುವ ದೇವತೆಗಳ ಹೋರಾಟವೇ ಹೆಚ್ಚಾಗಿದೆ. ಈ ಕಥೆಗಳಲ್ಲಿ ವಿಶ್ವ ಸಮ್ಮತಗಳಾಗುವ ಅಂಶಗಳು ಕಡಿಮೆಯೆಂದೇ ಹೇಳಬೇಕಾಗುತ್ತದೆ. ಅಲ್ಲಿ ಧರ್ಮ ಬೋಧೆಗಿಂತ ಮತದ ಹೋರಾಟ ಹೆಚ್ಚಿದೆ"[28] ಎಂದು ಹೇಳಿರುವದು ಸಮರ್ಪಕ. ಆದರೆ ಎಲ್ಲ ಕಥೆಗಳೂ ಹಿಗೆಯೇ ಎಂದು ಭಾವಿಸಲಾಗದು. ವಿಶ್ವಸಮ್ಮತವಾಗಬಲ್ಲ ಮಾನವ ಹೃದಯವನ್ನು ಬಿಚ್ಚಿ ತೋರಿಸಬಲ್ಲ ಸ್ವಾರಸ್ಯ ಪೂರ್ಣ ಕಥೆಗಳೂ ಹಲವಾರಿವೆ. ಯಾದವವಂಶ ಒನಕೆಯಿಂದ ಹಾಳಾದ ಕಥೆ, ಬೇಡನ ನಾಯಿ ಉದ್ಧಾರವಾದ ಕಥೆ, ಶ್ವೇತನ ಕಥೆ ಇತ್ಯಾದಿ ಪೌರಾಣಿಕ ಕಥೆಗಳೂ, ಮಾದಾಂಬೆಯ ಕತೆ ಬಡ ವಿಧವೆಯ ಕಥೆ ಇತ್ಯಾದಿ ಇತರ ಕಥೆಗಳೂ, ಪದ್ಮಣಾಂಕನ ಕಥನ ಕಲೆಯ ಕೌಶಲ್ಯವನ್ನು ಎತ್ತಿ ತೋರಿಸಿ, ಅವನೊಬ್ಬ ಹುಟ್ಟು ಕತೆ

---

28 ಡಾ. ಆರ್. ಸಿ. ಹಿರೇಮಠ : ಪದ್ಮರಾಜ ಪುರಾಣದ ಪ್ರಸ್ತಾವನೆ ಪುಟ-೬೭.

28 ಪದ್ಮರಾಜ ಪುರಾಣ. ಪ್ರಸ್ತಾವನೆ ಪುಟ-ಲ೩

ಗಾರನೆಂಬುದನ್ನು ಸಿದ್ಧಪಡಿಸುತ್ತವೆ. ಚಿಕ್ಕ ಮಾದಣ್ಣ, ಗುಡ್ಡವ್ವೆ, ಕಿನ್ನರಿ ಬ್ರಹ್ಮಯ್ಯ, ಗಜೇಶ ಮಸಣಯ್ಯ ಇತ್ಯಾದಿ ಶರಣ ಶರಣೆಯರ ಕಥೆಗಳು ಚಿಕ್ಕವಾಗಿದ್ದರೂ, ಆಪರವರ ವ್ಯಕ್ತಿತ್ವದ ಸಮಗ್ರರೇಖಾಚಿತ್ರ ಇವುಗಳಲ್ಲಿದೆ. ಇಂಥ ಕತೆಗಳನ್ನು ಕುರಿತು "ಈ ಕಾವ್ಯದಲ್ಲಿ ಒಂದ ನೂರಾರು ಉಪ ಕಥೆಗಳು ಪ್ರವಾಹದ ಮೇಲಣ ತೆರೆಗಳಂತೆ ಒಂದು ಮೂಲ ಕಥೆಗೆ ಮೆರುಗನ್ನಿತ್ತಿವೆ" ಎಂದು ಡಾ. ಆರ್. ಸಿ. ಹಿರೇಮಠ ಅವರು ಹೇಳಿರುವದನ್ನು[29] ಗಮನಿಸಬೇಕು.

ಪದ್ಮರಾಜ ಪುರಾಣದಲ್ಲಿ ಅದರಲ್ಲೂ ಪದ್ಮರಸ-ತ್ರಿಭುವನ ತಾತರ ಮಧ್ಯೆ ನಡೆದ ಸಂವಾದ ಸಂದರ್ಭದಲ್ಲಿ, ಪದ್ಮಣಾಂಕ ತೋರಿರುವ ಶಾಸ್ತ್ರಪರಿಚಯ ಅದ್ಭುತವಾದುದು. "ಈ ವಾದ ಪ್ರಕರಣದೊಳ್ ಸಕಲ ವೇದೋಪನಿಷತ್ ಪುರಾಣ ಸ್ಮೃತೀತಿಹಾಸ ಆಗಮಾದಿಗಳೊಳೆಂತೊರೆದವಂತೆ ಪೇಳ್ದಿನಲ್ಲದೆ ಎನ್ನವಾಗ್ಬಲದಿಂದೆ ಅರ್ಥಾತರೇಕಮಂ ಪೇಳ್ದುದಿಲ್ಲ"[30] ಎಂಬ ಕವಿಯ ಮಾತಿನಲ್ಲಿ ಅತ್ಯುಕ್ತಿಯಿಲ್ಲವೆನಿಸುತ್ತದೆ. ವೇದ ಉಪನಿಷತ್ತುಗಳಂತೂ ಸರಿಯೆ. ಸೂತಗೀತೆ ಈಶ್ವರಗೀತೆ, ಬ್ರಹ್ಮಗೀತೆ, ಶಿವರಹಸ್ಯ, ಕಾಳಿಕಾಖಂಡ, ವಾಯವೀಯ ಸಂಹಿತೆ, ಸೌರಸಂಹಿತೆ ಬೋಧಾಯನ ಸ್ಮೃತಿ, ಗೌತಮಸ್ಮೃತಿ, ಶೈವಪುರಾಣ, ವಿಷ್ಣುಪುರಾಣ, ರಾಮಾಯಣ, ಮಹಾಭಾರತ ಇತ್ಯಾದಿ ಇನ್ನೂ ಹಲವಾರು ಕೃತಿಗಳ ಹೇಳಿಕೆಗಳನ್ನು ಪದ್ಮಣಾಂಕ ಅಲ್ಲಿ ಉದ್ಧರಿಸಿದ್ದಾನೆ. ಅಲ್ಲೆಲ್ಲ ನಾವು ಕಾಣುವುದು ಶಾಸ್ತ್ರಕೋವಿದ ಪದ್ಮಣಾಂಕನನ್ನು ಕವಿಯ ವ್ಯಾಕರಣ ಶಾಸ್ತ್ರ ಮತ್ತು ಸಂಗೀತ ಶಾಸ್ತ್ರಗಳ ಪರಿಚಯಕ್ಕೂ ಪದ್ಮರಾಜ ಪುರಾಣದಲ್ಲಿ ಆಧಾರಗಳು ದೊರೆಯುತ್ತವೆ. "ಸತಿ ಸಪ್ತಮಿಯ ಭೇದಮಂ, ರಳಕುಳಕ್ಷಳಮಂ"[31] ಇತ್ಯಾದಿ ಪದ್ಯಗಳು ಅವನ ವ್ಯಾಕರಣ ಪರಿಣತಿಯನ್ನು ತೋರಿಸಿದರೆ, ಅವನು ಹೇಳಿರುವ ವಿಪಂಚಿ, ವಲ್ಲಕಿ, ಘೋಷವತ, ಕಿನ್ನರಿ, ಸಾರಂಗಿ ಇತ್ಯಾದಿ ವಾದ್ಯವಿಶೇಷಗಳೂ, ಬಗೆಬಗೆಯ ಮತ್ತಳಗಳೂ, ಮದ್ದಳಿಯವರ, ತಾಳದವರ ನರ್ತನ ನರ್ತಕಿಯರ ಮತ್ತು ಗಾನದವರ ವಿವರಣೆಯೂ[32] ಸಂಗೀತಶಾಸ್ತ್ರದಲ್ಲಿ ಅವನಿಗಿದ್ದ ಗತಿಯ ದ್ಯೋತಕಗಳಾಗಿವೆ. ಅಂತೂ ಪದ್ಮಣಾಂಕ, ಶಾಸ್ತ್ರಶ್ರೀರೋಹಣ ಗಿರಿಯನೇರಿ, ಕವಿತಾ ಚಿಂತಾರತ್ನವನ್ನೂ ಪಡೆದ ಮಾರಾರಿಯ ಕೃಪೆಯಾಂತ ಅಪರೂಪದ ಕವಿಗಳಲ್ಲಿ ಒಬ್ಬ.

ಪದ್ಮರಾಜ ಪುರಾಣ ಷಟ್ಪದಿಯಲ್ಲಿ ರಚನೆಗೊಂಡಿದ್ದರೂ, ಉಳಿದ ವೀರಶೈವ ಷಟ್ಪದಿ ಕೃತಿಗಳಿಗಿಂತ ಒಂದು ದೃಷ್ಟಿಯಲ್ಲಿ ಭಿನ್ನವಾಗಿದೆ. ಅದಕ್ಕೆ ಮುಖ್ಯ ಕಾರಣ ಅದರಲ್ಲಿ ತಲೆದೋರಿರುವ ಪ್ರೌಢತೆ. ಷಟ್ಪದಿ ಸಂಪ್ರದಾಯದ ಪ್ರಸ್ಥಾಪಕನಾದ ರಾಘವಾಂಕನ ಷಟ್ಪದಿ ಸುಲಲಿತ, ಗಂಭೀರ, ಪದ್ಮಣಾಂಕನಲ್ಲಿ ಅದೇ ಮುಂದುವರಿದಿದ್ದರೂ ಅಲ್ಲಿಗಿಂತ ಇಲ್ಲಿ ಪ್ರೌಢಿಮೆ ಅಧಿಕ, ಬಸವಪುರಾಣದ ಷಟ್ಪದಿಗಿಂತಲೂ

---

30 ಪದ್ಮರಾಜ ಪುರಾಣ. ಸಂಧಿ-೧೦, ಆರಂಭದ ವಚನ
31 ಪದ್ಮರಾಜ ಪುರಾಣ. ಸಂಧಿ-೧, ಪದ್ಯ-೩೯.
32 ಪದ್ಮರಾಜ ಪುರಾಣ. ಸಂಧಿ-೩, ಪದ್ಯ ೫೨ ರಿಂದ ೬೫

ಇಲ್ಲಿ ಪ್ರೌಢಿಮೆ ಹೆಚ್ಚು. ಕೆಲಕೆಲವು ಕಡೆಯಂತೂ ಸಂಸ್ಕೃತ ಪದಗಳ ಅಧಿಕ ಬಳಕೆಯಿಂದಾಗಿ ಷಟ್ಪದಿಯ ಸುಲಭ ಶೈಲಿ ಚಂಪೂ ಶೈಲಿಯಂತೆ ಕ್ಲಿಷ್ಟವಾಗಿ ಬಿಟ್ಟಿದೆ. ಉದಾಹರಣೆಗಾಗಿ ಕಾವ್ಯಾರಂಭದಲ್ಲಿಯೇ ಬರುವ "ಶ್ರೀ ವಿಗ್ರಹಸ್ಥ ಹಸ್ತ್ಯಜಿನಂ ಘನಂ ಶ್ರುತಿ ಪುಟಾವ ಬದ್ಧಾಹೀಂದ್ರ ಗೀತ ಘೋಷಂ" "ಪಾತಕ ಸಮೂಲಕೋತ್ಪಾತಿ ವಿನತಾಮರೀವ್ರಾತೆ" "ಬಭ್ರುಸದ್ದೃಷ್ಟ ಚಿತ್ತಭ್ರಾಂತಿ ಕೃಲ್ಲುತತ್ ಪ್ರಭ್ರಾಜಿತೊ,ದ್ಯತ್........" ಇತ್ಯಾದಿ ಪದ್ಯಗಳನ್ನು[33] ನೋಡ ಬಹುದು. ಇಲ್ಲೆಲ್ಲ ನಮಗೆ ಪ್ರೌಢ ಚಂಪೂ ಕಾವ್ಯಗಳನ್ನೋದುತ್ತಿರುವ ಅನುಭವ. ಆದರೆ ಮುಂದೆ ಹೆಚ್ಚಾಗಿ ಇಂಥ ಶೈಲಿಯನ್ನು ಕಾಣುವುದಿಲ್ಲ. ಅಂತೂ ಸುಸಂಸ್ಕೃತ ಪ್ರೌಢ ಷಟ್ಪದೀ ಶೈಲಿಗೆ ಪದ್ಮರಾಜ ಪುರಾಣ ಒಂದು ಒಳ್ಳೆಯ ಮಾದರಿ.

ಇನ್ನೊಂದು ದೃಷ್ಟಿಯಿಂದಲೂ ಈ ಕೃತಿ ಮಹತ್ವಪೂರ್ಣ. ಇದರಲ್ಲಿ ಕೆಲವು ಕವಿಗಳ ಜೀವನಚರಿತೆಗೆ ಸಂಬಂಧಿಸಿದ ಐತಿಹಾಸಿಕ ಅಂಶಗಳ ಉಲ್ಲೇಖ ಬರುತ್ತದೆ ಕೆರೆಯ ಪದ್ಮರಸನಂತೂ ಸರಿಯೆ. ಜೊತೆಗೆ ಸಕಲೇಶ ಮಾದರಸ, ಹರಿಹರ, ರಾಘವಾಂಕರ ಜೀವನ ಚರಿತ್ರೆ ಮತ್ತು ಅವರ ಕಾಲನಿರ್ಣಯಕ್ಕೆ ಸಹಾಯಕವಾಗ ಬಲ್ಲ ಹಲವಾರು ವಿಷಯಗಳು ಈ ಕೃತಿಯಲ್ಲಿ ದೊರೆಯುತ್ತವೆ. ಹೊಯ್ಸಳ ರಾಜ್ಯೋದಯದ ಕಥೆ, ಹೊಯ್ಸಳ ನರಸಿಂಹ ಬಲ್ಲಾಳನಿಗೆ ಬಿಟ್ಟಿದೇವನೆಂಬ ಮಗ ನಿದ್ದ ವಿಷಯ,[34] ಕಾಕತೀಯ ಗಣಪತನೃಪಾಲನ ಉಲ್ಲೇಖ[35] ಇವೇ ಮೊದಲಾದ ಐತಿಹಾಸಿಕ ಸಂಗತಿಗಳು ಈ ಕೃತಿಯಿಂದ ತಿಳಿದುಬರುತ್ತವೆ.

ಇನ್ನು ಹದಿನಾಲ್ಕನೆಯಶತಮಾನದ ವೀರಶೈವ ಸಾಹಿತ್ಯದ ಕೆಲವು ವೈಶಿಷ್ಟ್ಯ ಗಳನ್ನು ಗುರುತಿಸಬಹುದು. ಈ ಶತಮಾನದಲ್ಲಿ ರಚನೆಗೊಂಡ ಕಾವ್ಯಗಳ ಸಂಖ್ಯೆ ಕಡಿಮೆ. ಆದರೆ ಬೇರೆ ಕೆಲವು ದೃಷ್ಟಿಯಿಂದ ಗಮನಾರ್ಹವಾದ ಕೆಲವು ಅಂಶಗಳು ಈ ಶತಮಾನದ ಸಾಹಿತ್ಯದಲ್ಲಿ ಕಂಡುಬರುತ್ತವೆ. ಹರಿಹರ ರಾಘವಾಂಕರಿಂದ ಆರಂಭಗೊಂಡ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತು ಕೃತಿರಚಿಸುವ ಪರಂಪರೆಯ ಕೊಂಡಿ ಕಳಚದಂತೆ ಮುಂದುವರಿಸಿಕೊಂಡು ಬಂದ ಶ್ರೇಯಸ್ಸು ಈ ಶತಮಾನದ ವೀರಶೈವ ಕವಿಗಳಿಗೆ ಸಲ್ಲುತ್ತದೆ. ಶುದ್ಧ ಕನ್ನಡ ಛಂದವಾದ ಷಟ್ಪದಿ, ಮಹಾ ಕಾವ್ಯ ರಚನೆಗೂ ಉತ್ತಮ ಮಾಧ್ಯಮವಾಗಬಲ್ಲದೆಂಬುದನ್ನು ಈ ಶತಮಾನದ ಕೃತಿಗಳು ಇನ್ನಷ್ಟು ಸ್ಥಿರೀಕರಿಸಿದವು. ಈ ಕಾಲದ ವೀರಶೈವ ಸಾಹಿತ್ಯದ ಮತ್ತೊಂದು ಮಹತ್ವಪೂರ್ಣ ಅಂಶವೆಂದರೆ ಚಾರಿತ್ರಿಕ ಕಾವ್ಯಗಳ ಸ್ವರೂಪ ದಲ್ಲಾದ ಬದಲಾವಣೆ. ಹರಿಹರ ರಾಘವಾಂಕರ ಕೃತಿಗಳಲ್ಲಿ ಕಾವ್ಯನಾಯಕರ ಚರಿತ್ರೆಯ ನೇರ ನಿರೂಪಣೆಯನ್ನು ಕಾಣುತ್ತೇವೆ. ಕಥಾನಾಯಕನಿಗೆ ನೇರ ಸಂಬಂಧ

---

33 ಪದ್ಮರಾಜ ಪುರಾಣ, ಸಂಧಿ-೧, ಪದ್ಯ ೧. ೪, ೭

34 ಪದ್ಮರಾಜ ಪುರಾಣ, ಸಂಧಿ-೩, ಪದ್ಯ ೧೫ ರಿಂದ ೨೪

35 ಪದ್ಮರಾಜ ಪುರಾಣ, ಸಂಧಿ-೧೩, ಪದ್ಯ-೭

ವಿರದ ಇತರ ಶರಣರ, ಪುರಾತನರ ಇಲ್ಲವೆ ಶಿವನ ಲೀಲೆಗಳ ಕಥೆಗಳು ಅಲ್ಲಿ ಕಾಣಿಸಿಕೊಳ್ಳುವುದಿಲ್ಲ. ತಾತ್ವಿಕ ವಿವೇಚನೆ ಕೂಡ ರಾಘವಾಂಕನ ಕೃತಿಗಳಲ್ಲಿ ಹಿತಮಿತವಾಗಿಯೇ ಬಂದಿದೆ. ಆದರೆ ಈ ಶತಮಾನದ ಕಾವ್ಯಗಳಲ್ಲಿ ಕಥಾನಾಯಕನ ಕಥೆಯ ಜೊತೆಗೆ, ಸಂದರ್ಭ ಕಲ್ಪಿಸಿಕೊಂಡು ಅನೇಕ ಇತರ ಶಿವಶರಣರ, ಪುರಾತನರ ಕಥೆಗಳನ್ನೂ, ಪೌರಾಣಿಕ ಕಥೆಗಳನ್ನು ಒಂದರ ಮೇಲೊಂದು ಸೇರಿಸಲಾಗಿದೆ. ತತ್ಫಲವಾಗಿ ಅವು ಕಥಾಕೋಶಗಳಾಗಿ ಪರಿಣಮಿಸಿವೆ. ತಾತ್ವಿಕ ವಿವೇಚನೆ ಕೂಡ ವಿಸ್ತಾರವಾಗಿಯೇ ಈ ಕೃತಿಗಳಲ್ಲಿ ಬಂದಿದೆ. ಈ ಬಗೆಯ ಕೃತಿರಚನೆ ಆಧುನಿಕ ಅಭಿರುಚಿಗೆ ಹಿಡಿಸುವುದಿಲ್ಲವಾದರೂ, ಅವು ರಚನೆಗೊಂಡ ಕಾಲದ ಅಭಿರುಚಿಗೆ ಅನುಗುಣವಾಗಿವೆ ಎಂದು ಹೇಳಬಹುದು. ವೀರಶೈವ ಪುರಾಣ ಸಾಹಿತ್ಯದಲ್ಲಿ ಈ ಶತಮಾನದ ಕೃತಿಗಳಿಗೆ ಮಹತ್ವಪೂರ್ಣ ಸ್ಥಾನ ಸಲ್ಲುತ್ತದೆ. ಬೇರೆ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸುವ, ಅವುಗಳಿಗೆ ಟೀಕೆ ವ್ಯಾಖ್ಯಾನಗಳನ್ನು ಬರೆಯುವ ಕಾರ್ಯವನ್ನು ವೀರಶೈವ ಕವಿಗಳು ಇದೇ ಶತಮಾನದಲ್ಲಿ ಆರಂಭಿಸಿದರು. ತೆಲಗು ದೇಶದ ವೀರಶೈವ ಕವಿಗಳು, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಪಾಲ್ಕುರಿಕೆಯ ಸೋಮೇಶ್ವರರಂತೆ ಕನ್ನಡದಲ್ಲಿ ಕೃತಿರಚಿಸುವುದನ್ನು ಮುಂದುವರಿಸಿಕೊಂಡು ಬಂದುದೂ ಈ ಯುಗದ ಒಂದು ವಿಶೇಷ. ಭಾಮಿನೀ ಷಟ್ಪದಿಯಲ್ಲಿ ಸಮಗ್ರ ಕಾವ್ಯವೊಂದು ಮೊತ್ತಮೊದಲು ರಚನೆಗೊಂಡುದು, ವೀರಶೈವ ಪುರಾಣಗಳ ರಚನೆ ಆರಂಭವಾದುದು ಇದೇ ಶತಮಾನದಲ್ಲಿ. ಆದುದರಿಂದ ಹದಿನಾಲ್ಕನೆಯ ಶತಮಾನ ವೀರಶೈವ ಸಾಹಿತ್ಯದ ದೃಷ್ಟಿಯಿಂದ ಗಮನಾರ್ಹವೆನ್ನಲಡ್ಡಿಯಿಲ್ಲ.

ಮಾತೆಂಬುದು ಜ್ಯೋತಿರ್ಲಿಂಗ !
ಸ್ವರವೆಂಬುದು ಪರತತ್ವ !

ತಾಳೋಷ್ಠ ಸಂಪುಟವೆಂಬುದೇ
ನಾದಬಿಂದು ಕಳಾತೀತ !
ಗುಹೇಶ್ವರನ ಶರಣರು ನುಡಿದು
ಸೂತಕಿಗಳಲ್ಲ ಕೇಳಾ ಮರುಳೆ.

# ಸಂಸ್ಕೃತ ಬಸವ ಪುರಾಣ

—ಮಲ್ಲಿಕಾರ್ಜುನ ಪರಡ್ಡಿ, *M.A.*

ಅವತಾರ ಕಲ್ಪನೆ ಭಾರತದಲ್ಲಿ ಎಂದು ಮತ್ತು ಎಲ್ಲಿ ಪ್ರಾರಂಭವಾಯಿತು ಎಂಬ ಅಂಶ ಅಷ್ಟು ಮುಖ್ಯವಲ್ಲ. ಆದರೆ ಧಾರ್ಮಿಕ ಸಾಹಿತ್ಯದಲ್ಲಿ ಅದರ ಪ್ರಭಾವ ಅನ್ಯಾ ದೃಶವೆಂಬುದಂತೂ ನಿರ್ವಿವಾದ. ಅರ್ವಾಚೀನ ಸಂಶೋಧಕರ ಅಭಿಪ್ರಾಯ ದಂತೆ ವಾಲ್ಮಿಕಿ ರಾಮಾಯಣದಲ್ಲಿ ರಾಮನೊಬ್ಬ ಧೀರೋದಾತ್ತ ಕ್ಷತ್ರಿಯ ರಾಜ ನಾಗಿದ್ದಾನೆ.[1] ಆದರೆ ಆಮೇಲೆ ಪುರಾಣ ಪ್ರಭಾವದಿಂದ ಅವನೊಬ್ಬ ಅವತಾರ ಪುರುಷನಾಗಿ, ಅತಿ ರಂಜಿತ, ಅತಿ ಮಾನುಷ ಶಕ್ತಿಗಳಿಂದ ಕೂಡಿದ ನಾಯಕ ನಾಗಿದ್ದಾನೆ, ಮುಂದಿನ ರಾಮಾಯಣ ಪರಂಪರೆಯಲ್ಲಿ. ಕಾಳಿದಾಸನಂಥ ಕವಿಕುಲ ಗುರುವೂ ಸಹ ರಾಮನನ್ನು ವಿಷ್ಣುವಿನ ಅವತಾರವೆಂದೇ ಗ್ರಹಿಸಿದ್ದಾನೆಂಬುದು 'ರಾಮಾಭಿಧಾನೋ ಹರಿರಿತ್ಯುವಾಚ'[2] ಎಂಬ ವಾಕ್ಯದಿಂದ ಸ್ಪಷ್ಟವಾಗಿದೆ. ಯಾವುದೇ ಐತಿಹಾಸಿಕ ವ್ಯಕ್ತಿಯ ಪ್ರಭಾವಾತಿಶಯವನ್ನು ಮನಂಬುಗುವಂತೆ ವರ್ಣಿಸಲು ಅವತಾರ ಕಲ್ಪನೆ ಉಪಯುಕ್ತವಾಗಿದ್ದು ಕವಿಗಳು ತಮ್ಮ ಕಥಾ-ನಾಯಕನನ್ನು ದೈವಾಂಶ ಸಂಭೂತನೆಂದೂ, ಅವರ ವೈರಿಯನ್ನು ರಾಕ್ಷಸನೆಂದೂ ಕಲ್ಪಿಸುವದರಿಂದ ರಾಜರು ಕವಿಗಳನ್ನು ಕೆರಳಿಸಬಾರದೆಂದು ಬಿಲ್ಹಣನೆಂಬ ಕವಿ ಬಣ್ಣಿಸಿದ್ದುಂಟು.[3] ಧರ್ಮಗ್ಲಾನಿಯೂ ಅಧರ್ಮ ಏಳಿಗೆಯೂ ಉಂಟಾದಾಗ ತಾನು ಅವತರಿಸುವದಾಗಿ ಭಗವಾನ್ ಕೃಷ್ಣ ಗೀತೆಯಲ್ಲಿ ಸಾರಿದ್ದಾನೆ.[4]

---

1 ವಾಲ್ಮಿಕಿ ರಾಮಾಯಣದ ರಾಮ ವಿಲಾಪ ಮನುಷ್ಯನಿಗೆ ಸಹಜವಾಗಿದೆ ಎಂದು ಯಾರಾದರೂ ಒಪ್ಪಬಹುದು. ನೋಡಿ ರಾಮಾಯಣ—ಅರಣ್ಯಕಾಂಡ 60ನೆಯ ಸರ್ಗ.

2 ಕಾಲಿದಾಸ, ರಘುವಂಶ XIII. 1

3 ಬಿಲ್ಹಣ, ವಿಕ್ರಮಾಂಕದೇವ ಚರಿತ I 27

4 ಭಗವದ್ಗೀತಾ IV 7

ಈ ಪೀಠಿಕೆಯ ಉದ್ದೇಶವಿಷ್ಟೆ. ಶ್ರೀಬಸವೇಶ್ವರರು ನಂದೀಶನ ಅವತಾರವೆಂದು ವೀರಶೈವರು ನಂಬಿದ್ದಾರೆ. ಅಂತೆಯೇ ಬಸವಣ್ಣನವರನ್ನು ಕುರಿತು ಪವಾಡ ಪರಂಪರೆಗೆ ಕೊನೆ ಮೊದಲಿಲ್ಲ. ಕಲ್ಲನ್ನು ಕಂಠದಲ್ಲಿ ಕಟ್ಟಿಕೊಂಡು ಕಳ್ಳತನಕ್ಕೆ ಬಂದ ಕಳ್ಳನೊಬ್ಬ ಅವರ ಸಾತ್ವಿಕ ಪ್ರಭಾವಕ್ಕೊಳಗಾಗಿ ನಿಜವಾದ ಲಿಂಗವನ್ನು ಧರಿಸಿದ ಐತಿಹಾಸಿಕ ಸತ್ಯ. ಪೌರಾಣಿಕರ ಕೈಯಲ್ಲಿ ಅತ್ಯದ್ಭುತ ರೂಪವನ್ನು ತಾಳಿದೆ. ಆದರೆ ಆಸ್ತಿಕರೆಂದು ಹೇಳಿಕೊಳ್ಳುವವರು ವೈಜ್ಞಾನಿಕ ಸತ್ಯತೆಗೆ ಗಮನ ಕೊಡದೆ ಪವಾಡಗಳಂಥ ವರ್ಣರಂಜಿತ ಘಟನೆಗಳಿಗೆ ಮಾರು ಹೋಗುತ್ತಾರೆ.

ವೇದಮೂರ್ತಿ ಮಣೂರ ಮಠಾಧ್ಯಕ್ಷ ಶ್ರೀ ಮಲ್ಲಿಕಾರ್ಜುನ ಶಾಸ್ತ್ರಿ ಸಂಪಾದಿತ ಹಾಗೂ ವಾರದ ಮಲ್ಲಪ್ಪನವರ ಉದಾರ ಕೃಪಾಶ್ರಯದಲ್ಲಿ ಬೆಳೆದ ವೀರಶೈವ ಲಿಂಗಿ ಬ್ರಾಹ್ಮಣ ಗ್ರಂಥ ಮಾಲೆಯು ಪ್ರಕಟಿತವಾದ ವ್ಯಾಸೋಕ್ತ (ಸಂಸ್ಕೃತ) ಬಸವ ಪುರಾಣ ಗ್ರಂಥದ ಐತಿಹಾಸಿಕತೆಯನ್ನು ಪ್ರಶ್ನಿಸುವದೇ ಅಸಮಂಜಸ ಕಂಚಿ ಶಂಕರಾಧ್ಯರು ಈ ಕೃತಿಯನ್ನು ರಚಿಸಿದ್ದಾರೆಂದು ಬೇರೆ ಮೂಲಗಳಿಂದ ತಿಳಿದು ಬಂದರೂ ಸಹ, ಉಪಲಬ್ಧವಿರುವ ಗ್ರಂಥದಲ್ಲಿ ಎಲ್ಲಿಯೂ ಅವರ ಉಲ್ಲೇಖವಿಲ್ಲ. ಪಂಚಾಚಾರ್ಯರಿಂದ ಸ್ಥಾಪಿತವಾದ ವೀರಶೈವ ಧರ್ಮ ವೇದಗಳಿಗಿಂತಲೂ ಪ್ರಾಚೀನವಾದುದೆಂದು ಸಾಧಿಸಲೋಸುಗ ನಂತರದ ಕೃತಿಗಳನ್ನು ವ್ಯಾಸ ರಚಿತ ಪುರಾಣಗಳಲ್ಲಿ ಸೇರಿಸಿರುವದನ್ನು ಕಾಣುತ್ತೇವೆ. ಹರಿಹರನ ಬಸವರಾಜ ದೇವರ ರಗಳೆ. ಪಾಲ್ಕುರಿಕೆ ಸೋಮನಾಥ ವಿರಚಿತ ತೆಲುಗು ಬಸವ ಪುರಾಣ ಹಾಗೂ ಸಂಸ್ಕೃತ ಬಸವೋದಾಹರಣಂ ಇವೇ ಬಸವ ಸಾಹಿತ್ಯದ ಪ್ರಾಚೀನ ಕೃತಿಗಳಾಗಿದ್ದವು. ಭೀಮ ಕವಿ (ಕ್ರಿ. ಶ. 1369) ತನ್ನ ಕನ್ನಡ ಬಸವ ಪುರಾಣದಲ್ಲಿ ತೆಲುಗು ಪುರಾಣವನ್ನೆ ಅನುವಾದ ಮಾಡಿದ್ದಾಗಿ ಪ್ರಾಂಜಲನಾಗಿ ಒಪ್ಪುತ್ತಾನೆ.[6] ವ್ಯಾಸೋಕ್ತ ಬಸವ ಪುರಾಣ ಅರ್ವಾಚೀನ ಕೃತಿಯೆಂಬುದರಲ್ಲಿ ಸಂದೇಹವಿಲ್ಲ. ಅದರ ಮೊದಲ ಭಾಗ ಸ್ಥೂಲ ಪರಿಚಯವನ್ನು ಮಾಡಿ ಕೊಡುವದೇ ಈ ಕಿರಿ ಲೇಖನದ ಉದ್ದೇಶ.

ಬಸವೋತ್ಪತ್ತಿಯಾದಿಯಾಗಿ ಅವನ ಸಮಗ್ರ ಜೀವನವನ್ನು ಕುಮಾರ ಷಣ್ಮುಖ ಅಗಸ್ತ್ಯ ಮಹರ್ಷಿಗೆ, ನಿರೂಪಿಸಿದ್ದು ಪುರಾಣ ಶೈಲಿಗೆ ಅನುಗುಣವಾಗಿಯೇ ಇದೆಯೆನ್ನಬಹುದು ಶ್ರೀ ಶೈಲ ಮಲ್ಲಿಕಾರ್ಜುನಸ್ತುತಿಯಿಂದ.[7] ಪ್ರಾರಂಭವಾಗುವ ಈ ಗ್ರಂಥದ ಕಥಾ ವಸ್ತು ಸರ್ವ ಸಿದ್ಧಾಂತ ಕೋವಿದನಾದ ಅಗಸ್ತ್ಯನು ಕುಮಾರ ಸ್ವಾಮಿಯನ್ನು ಕಾಣಲು ಕುಮಾರ ಪರ್ವತಕ್ಕೆ ಬರುವ ವರ್ಣನೆಯಿಂದ ಪ್ರಾರಂಭವಾಗಿದೆ. ದೃಢವ್ರತನಾಗಿಯೂ ಸದ್ಗುಣ ಖಣಿಯಾಗಿಯೂ ಮೆರೆಯುವ ಶಿವಭಕ್ತರಾರೆಂಬುದನ್ನು ಈ ರೀತಿ ಕೇಳುತ್ತಾನೆ.

---

5 ಡಾ॥ ಆರ್. ಸಿ. ಹಿರೇಮಠ ಸಂಪಾದಿತ ಬಸವ ಪುರಾಣ ಪ್ರಸ್ತಾವನೆ ಪು. 49
6 ಬಸವ ಪುರಾಣ, ಸಂಧಿ ಪ್ರಕರಣ ಪದ್ಯ 14
7 ಸಂಸ್ಕೃತ ಬಸವ ಪುರಾಣ I. 1.

ಏವಂ ವಿಧಗುಣಂ ಲೋಕೆ ಶಿವಭಕ್ತಂ ದೃಢವ್ರತಮ್ ।
ವಕ್ತು ಮರ್ಹತಿ ದೇವೇಶ ಮಮಾದ್ಯತ್ವಂ ಷಡಾನನ ॥ [8]

ಇದು ರಾಮಾಯಣದ ಆದಿಯಲ್ಲಿ ವಾಲ್ಮೀಕಿಯು ಬ್ರಹ್ಮದೇವನನ್ನು ಪ್ರಶ್ನಿಸಿದ ಪ್ರಸಂಗದ ರೂಪಾಂತರವೆನಿಸುತ್ತದೆ. [9]

ಅಕ್ಷಪಾದ ಗೌತಮ ಮತಗಳ ( I-31-35 ) ಸೇಶ್ವರ ಹಾಗೂ ನಿರೀಶ್ವರ ಸಾಂಖ್ಯರ ( 36-41 ) ಮುಂತಾದ ದರ್ಶನಗಳನ್ನು ಖಂಡಿಸಿ, ವೇದಾಂತ ಶಾಸ್ತ್ರವೇ ಮೋಕ್ಷ ಸಾಧನ ವೆಂದು ಕವಿ ಸಾರುತ್ತಾನೆ.

ಅತೋ ವೇದಾಂತ ಶಾಸ್ತ್ರಾಂಹಿ ಜೀವ ಬ್ರಹ್ಮೈಕ್ಯ ಬೋಧಕಮ್ ।
ಮನಯಃ ಸಂಪ್ರವಕ್ಷ್ಯಂತಿ ಮುಕ್ತೇ; ಪರಮ ಕಾರಣಮ್ ॥ ( I. 42 )

ಬ್ರಹ್ಮಾದಿ ದೇವತೆಗಳು ವಿಶ್ವಾಮಿತ್ರಾದಿ ಮಹರ್ಷಿಗಳು, ಲಕ್ಷ್ಮಿ ಮುಂತಾದ ಶಕ್ತಿಯರು ಲಿಂಗಧಾರಣ ಮಾಡಿದ ವಿಷಯ ಪ್ರಾರಂಭದಲ್ಲಿ ಪ್ರಾಸಂಗಿಕವಾಗಿ ಬಂದಿದೆ. [10]

ವಿಶ್ವ ಸಂಚಾರಿಯಾದ ನಾರದನು ಕೈಲಾಸಕ್ಕೆ ಬಂದು ಶಿವಸ್ತುತಿಯಂಗೈದು ಜಗತ್ತಿನಲ್ಲಿ ವೀರಶೈವರ ದುಃಸ್ಥಿತಿಯನ್ನು ವರದಿ ಮಾಡಿದಾಗ ಅವರ ಉದ್ಧಾರಕ್ಕೆ ನಂದೀಶನನ್ನು ಕಳಿಸುವ ವಿಚಾರ ಪರಶಿವನು ವ್ಯಕ್ತವಾಡುತ್ತಾನೆ.[11]

'ಇತಿ ಪ್ರಬೋಧ್ಯ ನಂದೀಶಂ ಪ್ರೇಕ್ಷಯೂ ಮಾಸ ಶಂಕರಃ' ॥

ಬಾಗೇವಾಡಿಯಲ್ಲಿ ಶಿವಭಕ್ತರಾದ ಮಾದಿರಾಜ, ಮಾದಾಂಬೆಯರಿಗೆ ಪುತ್ರನಾಗಿ ಜನಿಸುವ ಪೂರ್ವದಲ್ಲಿ ನಾರದನ ಉಪದೇಶದಂತೆ ಮಾದಾಂಬೆಗೈದ ನಂದಿವ್ರತವನ್ನು ವರ್ಣಿಸಲಾಗಿದೆ. [12]

ಐದನೆಯ ಅಧ್ಯಾಯುದಲ್ಲಿ ಬಸವಣ್ಣನವರ ಬಾಲಲೀಲೆಯ ಸುಂದರ ವರ್ಣನೆಯನ್ನು ಕಾಣಬಹುದು.

ಶಿವಸ್ಮರಣ ಮಾತ್ರೇಣ ಸ್ಖಲದ್ವಾಕ್ಯ ಪರಂಪರಾಮ್ ।
ಜ್ಞಾಪಯನ್ನಿವ ಲೋಕಾನಾಂ ಮಂದ ಮಂದ ಮುವಾಚಸ ॥

ಉಪನಯನಕ್ಕೆ ಅಣಿಮಾಡುತ್ತಿರುವ ತಂದೆಯನ್ನು (V 31) ನೋಡಿ, ಅದನ್ನು ವಿರೋಧಿಸುತ್ತ ಶಿವದೀಕ್ಷಾ ಮಹಿಮೆಯನ್ನು ಯುಕ್ತಿ ಮುಕ್ತವಾಗಿ ನಿರೂಪಿಸುತ್ತಾನೆ.

---

8 ಬ. ಪು. I. 56.
9 ರಾಮಾಯಣ, ಬಾಲಕಾಂಡ I. 2-10
10 ಬ. ಪು. I. 45-48.
11 ಬ. ಪು. II 40
12 ಬ. ಪು. III 51

"ಸಿದ್ಧಾ ಸಾಹಿ ಸಿದ್ಧಿರ್ಮೆ ಲಿಂಗಧಾರಣ ದೀಕ್ಷಯಾ"[13] II-78 ಎಂದು ತನ್ನ ಅಚಲ ನಿರ್ಧಾರವನ್ನು ತಿಳಿಸಿ, ವೈದಿಕ, ಬ್ರಾಹ್ಮಣರಿಗೆ ಉಪದೇಶಗೈದು ಸಭಾಭವನವನ್ನು ತ್ಯಜಿಸಿ ಶಿವಭಕ್ತನ ಮನೆಯನ್ನು ಪ್ರವೇಶಿಸುತ್ತಾನೆ. ಅಲ್ಲಿ ಉಪನಯನ ದೀಕ್ಷೆಯನ್ನು ನೋಡಲು ಬಂದ ಬಲದೇವ ಮಂತ್ರಿಯ ಕನಸಿನಲ್ಲಿ ಸಂಗಮೇಶ್ವರನು ಪ್ರತ್ಯಕ್ಷವಾಗಿ ಬಸವಮಹಿಮಾತಿಶಯವನ್ನುಸುರಿ, ಅವನಿಗೆ ತನ್ನ ಮಗಳಾದ ಗಂಗಾಂಬಿಕೆಯನ್ನು ವಿವಾಹ ಮಾಡಿಕೊಡಲು ಆಜ್ಞಾಪಿಸುತ್ತಾನೆ ಅಲ್ಲದೆ ಬಸವಣ್ಣ ನಂದೀಶ್ವರನ ಅವತಾರವೆಂದು ಸ್ಪಷ್ಟ ಪಡಿಸುತ್ತಾನೆ.

ನಹಿಕೇವಲ ಮರ್ತ್ಯೋಽಯಂ ಭಾಗಿನೇಯಸ್ತವಾನಘ |
ಶಿವ ಪಾರಿಷದ ಶ್ರೇಷ್ಠೋ ನಂದಿಕೇಶೋಃಮಹತ್ತರಃ || (viii 9)

ಬಸವಣ್ಣ ಹಾಗು ಗಂಗಾಂಬೆಯರ ವಿವಾಹ ವೈಭವದ ವರ್ಣನೆ ಎಂಟನೆಯ ಅಧ್ಯಾಯದ 46-74 ಪದ್ಯಗಳಲ್ಲಿ ನಿರೂಪಿತವಾಗಿದೆ. ಸಂಗಮೇಶ ದರ್ಶನಾ-ಕಾಂಕ್ಷೆಯಾಗಿ ಸಪತ್ನೀಕ ಬಸವಣ್ಣನವರು ಕಪ್ಪಡಿ ಸಂಗಮ ಕ್ಷೇತ್ರಕ್ಕೆ ಹೊರಡುತ್ತಾರೆ. ಕಪ್ಪಡಿ ಸಂಗಮದ ಮಹಿಮಾ ವರ್ಣನೆ ಸಮುಚಿತವಾಗಿ ಒಡಮೂಡಿದೆ. ಅದರ ಮಹಿಮಾತಿಶಯವನ್ನು ಶ್ಲೋಕವೊಂದರಲ್ಲಿ ಇಂತು ಕಾಣುತ್ತೇವೆ.

ಯತ್ರಸಿದ್ಧಾಶ್ರಮೇ ವ್ಯಾಘ್ರ ಭಲ್ಲೂಕಾದ್ಯಾನ ಘಾತುಕಾಃ |
ದುರ್ಬಲಾಂಶ್ಚ ನ ಹಾಸಂತಿ ಸರ್ವೇ ಧರ್ಮೈಕ ತತ್ಪರಾ ||

ಇದು ಪಾರ್ವತೀ ತಪೋವನ ವರ್ಣನೆಯ[14] (viii 84) ಅನುಕರಣವೆಂದು ವಿದ್ವಾಂಸರಿಗೆ ಭಾಸವಾದರೆ ಆಶ್ಚರ್ಯವಿಲ್ಲ.

ಒಂಬತ್ತನೆಯ ಅಧ್ಯಾಯದಲ್ಲಿ ಬಲದೇವನ ನಂತರ ಬಿಜ್ಜಳನು ಬಸವಣ್ಣನವರನ್ನು ಮಂತ್ರಿಯಾಗಿ ಕಾರ್ಯನಿರ್ವಹಿಸಲು, ಭೂಮಿಯ ರಕ್ಷಣೆ ಮಾಡಲು ವಿನಂತಿಸಿಕೊಳ್ಳುತ್ತಾನೆ.

''ತಥಾತ್ವಮಪಿಭೋ ಮಂತ್ರಿನ್ ಪಾಲಯೇದಂ ಜಗತ್ಪರಮ್ |
ಕೋಶಾಗಾರಮಿಂದ ಸರ್ವಂ ತ್ವದಾಯತ್ತಂ ನ ಸಂಶಯಃ" || (x59)

ಚೆನ್ನಬಸವ ಜನನ, ಪ್ರಭುದೇವಾಗಮನ, ಬಸವಕೃತ ಪ್ರಭುದೇವ ಸ್ತುತಿ ಹಾಗೂ ಸತ್ಕಾರ, ಅಲ್ಲಮ ಪ್ರಭುವಿನ ಶೂನ್ಯ ಸಿಂಹಾಸನಾರೋಹಣ ಮುಂತಾದ ವಿಷಯಗಳ ವರ್ಣನೆ ಮುಂದಿನ ಕೆಲ ಅಧ್ಯಾಯಗಳಲ್ಲಿ ಬರುತ್ತದೆ. ಬಸವಣ್ಣನವರು ತಂದಿರಿಸಿದ ರತ್ನಖಚಿತ ಶೂನ್ಯ ಸಿಂಹಾಸನವನ್ನು ಪ್ರಭುದೇವ ಏರಿದ ವಿಷಯವನ್ನು ವರ್ಣಿಸುವಾಗ ಕವಿ ಉಪಯೋಗಿಸಿದ ಉಪಮಾಲಂಕಾರ ಸಮುಚಿತವಾಗಿದೆ.

---

13 ಹೋಲಿಸಿ ಕನ್ನಡ ಬ. ಪು. ಸಂಧಿ 3. ಪದ್ಯ 54.
14 ಧಿರೋಧಿ ಸತ್ವೋಜ್ಝಿತ ಪೂರ್ವ ಮತ್ಸರ.......| ಕುಮಾರ ಸಂಭವ v 17.

ಬಸವೇಶ ಕರಾನೀತಂ ರತ್ನ ಸಿಂಹಾಸನಂ ಪರಮ್ |
ಆರುರೋಹ ಪ್ರಭುಃ ಶ್ರೀಮಾನ್ ಕೈಲಾಸಮಿವ ಶಂಕರಃ|| (xii12 13)

ಮುಂದಿನ ಸರ್ಗಗಳಲ್ಲಿ ಪ್ರಾಸಂಗಿಕವಾದ ಪ್ರಮಥ ಗಣ ಮಹಾತ್ಮ್ಯ ಪ್ರಮಥ ಭೋಜನ, ಅನೇಕ ಶಿವಭಕ್ತರ (೬೩ ಪುರಾತನರ) ಕಥೆಗಳು ಹೀಗೆ ನಾನಾ ವಿಷಯ ಗಳ ನಿರೂಪಣೆ ಕಂಡುಬರುತ್ತಿದ್ದು, ಕಥೆಯ ಓಟಕ್ಕೆ ಸಹಾಯಕವಾಗಿಲ್ಲವೆಂದೇ ಹೇಳಬೇಕು. ಹೀಗೆ ೨೧ ಅಧ್ಯಾಯಗಳಿಂದ ಕೂಡಿದ ಬಸವ ಪುರಾಣದ ಪ್ರಥಮ ಭಾಗ ಮಾದಿರಾಜನ ಕಥೆಯ ನಿರೂಪಣೆಯೊಂದಿಗೆ ಮುಕ್ತಾಯವಾಗುತ್ತದೆ.

ಸಂಸ್ಕೃತ ಪುರಾಣ ಶೈಲಿಯಲ್ಲಿ ವ್ಯಾಸ್ಪ್ರೋಕ್ತವೆಂದು ಕರೆಯಲ್ಪಡುವ ಸಂಸ್ಕೃತ ಬಸವಪುರಾಣದಲ್ಲಿ ಅತಿಮಾನುಷ ಅತಿರಂಜಿತವೆನಿಸುವ ಅನೇಕ ವರ್ಣನೆಗಳಿಂದ ತುಂಬಿಕೊಂಡಿರುವ ಅನಿವಾರ್ಯವಷ್ಟೇ ಅಲ್ಲ. ಔಚಿತ್ಯಪೂರ್ಣವೂ ಹೌದು. ಐತಿಹಾಸಿಕ ಸತ್ಯವೇನೆ ಇರಲಿ ಪೌರಾಣಿಕ ದೃಷ್ಟಿಕೋಣದ ಆಸ್ತಿಕರಿಗೆ ಹೇಗೆ ಇದ ಅತಿ ಪವಿತ್ರವಾಗಿದೆಯೋ ಹಾಗೆಯೇ ಕಾವ್ಯಾಭ್ಯಾಸಿಗಳಿಗೆ ಆನಂದದಾಯಕವೂ ಆಗಿದೆ ಎನ್ನಬಹುದು. ಈ ಗ್ರಂಥದ ಸಂಪೂರ್ಣ ವಾದ ಶಾಸ್ತ್ರೀಯ ಅಧ್ಯಯನ ವನ್ನು ಪಂಡಿತರು ಕೈಕೊಂಡರೆ ಈ ಲೇಖನದ ಉದ್ದೇಶ ಸಫಲವಾಗುವದೆಂದು ಭಾವಿಸುತ್ತೇನೆ.

ಶ್ರೀಶೈಲ ಶಿಖರಾವಾಸಃ ಶ್ರೀಶ ಪೂಜಿತ ಪಾದುಕಃ |
ಶ್ರೀ ಮಲ್ಲಿಕಾರ್ಜುನ ಸ್ವಾಮೀ ಶ್ರೇಯಸೇ ಭೂಯಸೇಽಸ್ತು ನಃ ||

---

ಬೆಣ್ಣೆಯ ಕಂದಲ ಕರಗಲಿಟ್ಟರೆ;
ಕಂದಲ ಕರಗಿತ್ತು, ಬೆಣ್ಣೆ ಉಳಿದಿತ್ತು.
ತುಂಬಿ ಇದ್ದಿತ್ತು, ಪರಿಮಳವಿಲ್ಲ.
ಪರಿಮಳವಿದ್ದಿತ್ತು, ತುಂಬಿ ಇಲ್ಲ.
ತಾನಿದ್ದನು, ತನ್ನ ಸ್ವರೂಪವಿಲ್ಲ,
ಗುಹೇಶ್ವರನಿದ್ದನು ಲಿಂಗವಿಲ್ಲ.

# ' ಯೋಗಾಂಗ ತ್ರಿವಿಧಿ '

—ಡಾ. ನಿಜಲಿಂಗಮ್ಮ ಕೊಪ್ಪಳ.

ವಾಸ್ತವ ಜೀವನ ದ್ವಂದ್ವಗಳಿಗೆ ನೆಲೆವೀಡು. ಅಲ್ಲಿ ನೋವು ನಲಿವುಗಳಿಂದ ರಾಗದ್ವೇಷಗಳ ಆಘಾತದಿಂದ ಸಾಮಾನ್ಯ ಜೀವಿ ತಲ್ಲಣಿಸುವುದು ಸ್ವಾಭಾವಿಕ. ಕವಿ ಹೃದಯ ಮಾತ್ರ ವಾಸ್ತವ ಜೀವನದ ಪ್ರಚೋದನೆಯಿಂದ ಮಿಡಿಯುತ್ತದೆ. ಅನುಕಂಪಗೊಳ್ಳುತ್ತದೆ. ಆಗ ಕವಿಯು ಜೀವನವನ್ನು ಸಾಂಕೇತಿಕವಾಗಿ ಬಳಸಿ ಕೊಂಡು, ಕಲ್ಪನೆಯ ಎರಕಹೊಯ್ದು, ಜೀವನದ ರಾಗದ್ವೇಷಗಳನ್ನು ರಸಪ್ರವಾಹ ವಾಗಿ ಸಾಹಿತ್ಯದಲ್ಲಿ ಹರಿಯಿಸುತ್ತಾನೆ. ಅವನ ಸಾಹಿತ್ಯ ಸಾರ್ಥಕತೆಯನ್ನು ಪಡೆಯು ವದು ಮಾತ್ರ ಅನುಭಾವದ ಔನ್ನತ್ಯದಿಂದ ಅದು ಉತ್ತೇಜನಗೊಂಡಾಗಲೆ. ಒಂದು ಕೃತಿಯನ್ನು 'ಉತ್ತಮು'ವೆಂದು ಅರಿಯಬೇಕಾದರೆ ಆದನ್ನು ಸಾಹಿತ್ಯ ಮಟ್ಟದಿಂದ ಮಾತ್ರ ಅಳೆದರೆ ಸಾಲದು. ಅದರಲ್ಲಿ ನಿಜವಾದ ಜೀವನ ಪ್ರತಿಬಿಂಬಿಸಿದಾಗ '....' 'ಆದರ್ಶಕೃತಿ ಎಂಬ ಹೆಸರು ಅದಕ್ಕೆ ಸಲ್ಲುತ್ತದೆ. ಕಾರಣ ಸುಪ್ರಸಿದ್ಧ ಆಂಗ್ಲ ಕವಿ ಹಾಗೂ ವಿಮರ್ಶಕನಾದ ಟಿ. ಎಸ್. ಈಲಿಯಟ್ "The greatness of literature cannot be determined solely by literary standards"— ಎಂದಿದ್ದಾನೆ. ನಮ್ಮ ರಸಋಷಿಗಳೂ ಸಹ 'ನಾನೃಷಿಃ ಕುರುತೇ ಕಾವ್ಯಂ ಎಂದರು. ಈ ಸೃಷ್ಟಿಯಲ್ಲಿ ಹಾಗೂ ಮಾನವನಲ್ಲಿರುವ ದೈವೀ ಸಾಕ್ಷಾತ್ಕಾರಕ್ಕೆ ವ್ಯಕ್ತಸ್ವರೂಪ ವನ್ನು ಕೊಡುವದು ಮಹೋನ್ನತ ಕಾವ್ಯ ಎಂದರು. ಶ್ರೀ ಅರವಿಂದರು (The greatest poetry gives expression to the Divine in the world and in man) ಆದ್ದರಿಂದ ಅನುಭಾವಿಯಾದ ಕವಿ ವಾಸ್ತವ ಜೀವನದ ದ್ವಂದ್ವಗಳನ್ನೆಲ್ಲ ಪರಮಾತ್ಮ ಚೈತನ್ಯದ ಅನುಭವವನ್ನು ಕಾಣುತ್ತಾನೆ. ಸೃಷ್ಟಿಯ ಸೌಂದರ್ಯ ಮಾಧುರ್ಯದ ಆಚೆಗಿರುವ, ಜೀವನಕ್ಕೆ ಆಧಾರವಾಗಿರುವ, ನಿತ್ಯನೂತನ ಬೆಳಕನ್ನೂ ಪರಮಾತ್ಮ ಶಕ್ತಿಯನ್ನೂ, ಎಲ್ಲೆಡೆಗೂ ಕಂಡು, ಅನುಭಾವಿ ಕವಿಯ ಹೃದಯ ಮಿಡಿಯುತ್ತದೆ. ವಿಶ್ವವ್ಯಾಪಕವಾದ ಆ ಪರಮಾತ್ಮ ಶಕ್ತಿಯಲ್ಲಿ ಅವನ ಭಾವ ನೆಲೆಗೊಳ್ಳುವುದರಿಂದ ಈ ಉಜ್ವಲಭಾವ ಅವನ ಅಂತಃಕರುಣದ ಮಿಡಿತಕ್ಕೆ ಸಿಕ್ಕು, ಸ್ಫೂರ್ತಿಯ ಬುಗ್ಗೆಯಂತೆ ಹೊರಹೊಮ್ಮುತ್ತದೆ. ಅದುವೆ ಅನುಭಾವ ಸಾಹಿತ್ಯವಾಗಿ

ಮೂಡಿ ಬಂದು ಸತ್ಯದರ್ಶನವನ್ನು ನೀಡುತ್ತದೆ. ಕವಿಯ ಕಾವ್ಯಫಲ ರಸಾನುಭೂತಿಯಿಂದ ಬರುವ ಸೌಂದರ್ಯ ದರ್ಶನವಾದರೆ ಅನುಭಾವಿ ಕವಿಯ ಸಾಹಿತ್ಯಫಲ ಸಮರಸಾನಂದದಿಂದ ಬರುವ ಪರಮಾನಂದ.

೧೨ನೆಯ ಶತಮಾನದಲ್ಲಿ ಶಿವಶರಣರ ಅನುಭಾವ ಮಾರ್ಗದಲ್ಲಿ 'ಪರಮಭಕ್ತೆ, ಶಾಂತಿಯುಕ್ತೆ, ಯತಿವಿರಕ್ತೆ' ಎಂದು ಪ್ರಖ್ಯಾತಳಾದ ಅಕ್ಕಮಹಾದೇವಿಯ ವಚನ ರಾಶಿ ಇಂಥದೊಂದು ಅನುಭಾವ ಸಾಹಿತ್ಯ. ಜನ್ಮತಃ ಪರಮಭಕ್ತಳಾದ ಅವಳ ಜೀವನದಲ್ಲಿ ಘಟಿಸಿದ ಒಂದು ವಿಚಿತ್ರ ನಿಮಿಷ, ಅವಳನ್ನು ಪರಮಾದರ್ಶಕ್ಕೆ ತಿರುಗಿಸಿತು. ಅವಳಲ್ಲಿ ಪರಮಾತ್ಮನ ಬಗೆಗಿದ್ದ ಶುದ್ಧ ಭಕ್ತಿ, ದೈವದತ್ತ ಶಕ್ತಿ ಪುಟನೆಗೆದು ಪ್ರತಿಭೆಯಾಗಿ ಅನುಭಾವ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು. ಅವಳ ಉನ್ಮನದ ಆಳದಲ್ಲಿ ಭಾವ ಗಂಭೀರತೆಯ ಭಿತ್ತಿಯಲ್ಲಿ ಮೂಡಿದ ಪರಮಾತ್ಮನ ದಿವ್ಯ ದರ್ಶನ ಪ್ರತಿಭಾಸ್ಪರ್ಶನದಿಂದ ಸ್ಫೂರ್ತಿಗೊಂಡು ಸುಂದರ ವಚನಗಳಾಗಿ, ಭಾವಗೀತಗಳಾಗಿ, 'ಯೋಗಾಂಗ ತ್ರಿವಿಧಿ'ಯಾಗಿ ಹೊರಬಂದಿವೆ. ಅವಳ ಜೀವನ ದರ್ಶನ ದಾರ್ಶನಿಕ ಸಾಹಿತ್ಯವಾಗಿದೆ. ಬಸವಣ್ಣನ ವಚನದಂತೆ 'ಶರಣರು ಮನದೆರೆದು ಮಾತನಾಡಿದರೆ ಲಿಂಗವನ್ನೇ ಕಾಣಬಹು'ದಷ್ಟೆ!

ಅಕ್ಕಮಹಾದೇವಿ ತನ್ನ ಯೋಗಾಂಗ ತ್ರಿವಿಧಿಯನ್ನು 'ತ್ರಿಪದಿ' ಛಂದಸ್ಸಿನಲ್ಲಿ ಅಂದರೆ ಮೂರು ಚರಣಗಳುಳ್ಳ ಪದ್ಯರೂಪದಲ್ಲಿ ರಚಿಸಿದ್ದಾಳೆ. ಈ ತ್ರಿಪದಿ ಛಂದಸ್ಸು ಜನತೆಯ ನಾಲಿಗೆಯ ಮೇಲೆ ಬದುಕಿಕೊಂಡು ಕನ್ನಡಿಗರ ಧಮನಿಯಲ್ಲಿ ಸಂಚರಿಸಿ, ಕನ್ನಡ ನುಡಿಯ ಸತ್ವವನ್ನು ಮೈಗೂಡಿಸಿಕೊಂಡು ರೂಪತಾಳಿದಂಥದು. ಇದರ ೩ನೆಯ ಚರಣವನ್ನು ಎರಡು ಸಲ ಹಾಡಿ ಪರಿಣಾಮ ಬೀರುವಲ್ಲಿ ಅದು ನಾಲ್ಕು ಚರಣಗಳನ್ನೂ ಪಡೆಯಬಹುದಾಗಿದೆ. ತ್ರಿವದಿ, ತ್ರಿವುಡೆ, ತ್ರಿವುಡೆ, ತ್ರಿಪದಿಕಾ ತ್ರಿವಿಧಿ ಎಂಬ ಹೆಸರುಗಳೆಲ್ಲ ತ್ರಿಪದಿಗೆ ಪರ್ಯಾಯ ನಾಮಗಳು. ಈ ತ್ರಿಪದಿ ಮೂಲತಃ ಅಂಶಗಣಾವಲಂಬಿ, ಅದು ಮಾತ್ರಾಗಣ ಬಂಧಕ್ಕೆ ತಿರುಗಿದುದು ೧೨ನೆಯ ಶತಮಾನದ ಬಸವಾದಿ ಪ್ರಮಥರ ಕ್ರಾಂತಿಕಾಲದಲ್ಲಿಯೆ. ಕಾರಣ ಮಹಾದೇವಿಯಕ್ಕನ 'ಯೋಗಾಂಗ ತ್ರಿವಿಧಿ' ಮಾತ್ರಾಗಣವನ್ನು ಆಶ್ರಯಿಸಿ ಮೂಡಿ ಬಂದಿದೆ. ಇದರಲ್ಲಿ ಗೇಯತೆ ವಿರಲವಾಗಿ ಕಂಡರೂ ಲಯಬದ್ಧವಾಗಿ ಹಾಡಲು ಬರುವಂತಿದೆ. ಈ ತ್ರಿವಿಧಿ ಭಕ್ತಿರಸಪ್ರಧಾನವಾಗಿದ್ದು ಅಕ್ಕನು ತನ್ನ ಅನುಭಾವದಲ್ಲಿ ಕಂಡ ತತ್ವಾನುಭವವನ್ನು, ಮತ್ತು ಶಿವಯೋಗ ಮಹಿಮೆಯನ್ನು ಬಿತ್ತರಿಸಿದ್ದಾಳೆ. ಸ್ವಾನುಭಾವದ ಚಿಕ್ಕ ಚಿಕ್ಕ ಭಾವಲಹರಿಗಳನ್ನು ಈ ಕಿರಿಗಾತ್ರದ ತ್ರಿಪದಿಯಲ್ಲಿ ತರಲು ಯತ್ನಿಸಿದ್ದಾಳೆ. ಅಲ್ಲಲ್ಲಿ ಭಾಷೆಯು ಶಿವಶರಣರ ಶಿವಯೋಗಾನುಭವದ ಸಾಂಕೇತಿಕ ಬೆಡಗನ್ನು ಹೊಂದಿಕೊಂಡು ಬರುತ್ತದೆ.

ಯೋಗಾಂಗ ತ್ರಿವಿಧಿಯಲ್ಲಿ ಚಿದಂಶನಾದ ಸಾಧಕನು ಶಿವಯೋಗಾಚರಣೆಯಿಂದ ಲಿಂಗವಾಗುವ ಬಗೆಯನ್ನು ವಿವರಿಸುತ್ತದೆ. ತ್ರಿವಿಧಿಯ ಪದ್ಯಗಳೆಲ್ಲ ತತ್ವದ ಸದನವಾಗಿವೆ. ಆರಂಭದಲ್ಲಿ ಆದಿಗುರುವೆನಿಸಿದ ಪರಶಿವನನ್ನು ನೆನೆದು, ದೀಕ್ಷಾ

ಗುರುವಿನ ಚದುರ ಮಲಿಗೆಗಳನ್ನು ಒಲಗೊಂಡು ಇಷ್ಟದೈವವಾದ ಚನ್ನಮಲ್ಲಿಕಾರ್ಜು ನನ್ನನ್ನು ಮನದಲ್ಲಿರಿಸಿ, ತನ್ನ ಭಾವಕ್ಕೆ ಹೊಳೆದಂತೆ 'ಅಜೀವ ಪರಮುರ ಭೇದಭಾವ' ವನ್ನು ವಿವರಿಸಲು ಸಿದ್ಧಳಾಗುತ್ತಾಳೆ.

ವೀರಶೈವ ಸಿದ್ಧಾಂತದ ಪ್ರಕಾರ ಏಕಮೇವಾದ್ವಿತೀಯವಾದ ಪರಶಿವಬ್ರಹ್ಮವು ಸ್ವಲೀಲಾನಂದ ಪರವಶವಾಗಿರಲು ತನ್ನ ಚಿದಂಶದ ನೆನಹುಮಾತ್ರದಿಂದ ಅಂಗ. ಲಿಂಗ ಎಂದು ಎರಡಾಯಿತು. ಅಂಗವೆ ಜೀವಾತ್ಮ ಲಿಂಗವೆ ಪರಬ್ರಹ್ಮ. ಲಿಂಗಗತವಾದ ಶಕ್ತಿ ಅಂಗನಲ್ಲಿ ಭಕ್ತಿಯಾಗಿ ಪರಿಣಮಿಸಿತು. ಈ ಶಕ್ತಿ ಭಕ್ತಿಗಳಲ್ಲಿ ಸಾಮರಸ್ಯ ತೋರು ವುದೆ ಲಿಂಗಾಂಗ ಸಾಮರಸ್ಯ. ಇದುವೆ ವೀರಶೈವ ಧರ್ಮದಲ್ಲಿ ಮೋಕ್ಷ ಮೋಕ್ಷಾರ್ಥ ವಾಗಿ, ಜೀವಾತ್ಮನು ಪರಮಾತ್ಮನಾಗುವ ಸಾಧನಾಮಾರ್ಗವೆಂದು ವೀರಶೈವ ಅನುಭಾವಿಗಳು ಷಟ್‌ಸ್ಥಲವನ್ನು ಬೋಧಿಸಿದ್ದಾರೆ. ಶುದ್ಧಾತ್ಮನಾದ ಅಂಗನಲ್ಲಿ ಪರ ಮಾತ್ಮನ ಶಕ್ತಿಯ ಭಕ್ತಿಯಾಗುತ್ತದೆ. ಕಾರಣ ಭಕ್ತಿಯ ವೀರಶೈವರಿಗೆ ಮುಕ್ತಿ ಪಂಚಮ ಪುರುಷಾರ್ಥ. ಸಾಧನಾಮಾರ್ಗದಲ್ಲಿ ಈ ಭಕ್ತಿಯು ಗಟ್ಟಿಗೊಳ್ಳಲೆಂದು ಷಟ್‌ಸ್ಥಲಮಾರ್ಗಕ್ಕೆ ಪೋಷಕವಾಗುವಂತೆ ಅಷ್ಟಾವರಣವೆ ಅಂಗ, ಪಂಚಾಚಾರವೆ ಪ್ರಾಣವೆಂದು ಭೋದಿಸಲಾಯಿತು. ಪರಶಿವಬ್ರಹ್ಮವು ಇಚ್ಛಾ—ಕ್ರಿಯಾ–ಜ್ಞಾನ ಶಕ್ತಿಯುತವಾಗಿದೆ. ಅಂತೆಯೆ ಅದು ಸರ್ವವ್ಯಾಪಕತ್ವ, ಸರ್ವಕರ್ತೃತ್ವ, ಸರ್ವಜ್ಞತ್ವ ಗುಣಗಳನ್ನು ಪಡೆದಿದೆ. ಪರಶಿವಬ್ರಹ್ಮನ ಅಂಶವಾದ ಆತ್ಮನಿಗೆ ದೇಹಸಂಬಂಧವಾಗಿ ಆಣವ—ಮಾಯಾ—ಕಾರ್ಮಿಕವೆಂಬ ಮಲತ್ರಯಗಳುಂಟಾದವು. ಪರಶಿವಬ್ರಹ್ಮನ ಶಕ್ತಿತ್ರಯಗಳು ಇಲ್ಲಿ ಸಂಕೋಚಗೊಂಡು ಕಿಂಚಿತ್ ವ್ಯಾಪಕತ್ವ ಕಿಂಚಿತ್ ಕರ್ತೃತ್ವ, ಕಿಂಚಿತ್—ಜ್ಞತ್ವಗಳಾದವು. ಇವೆ ಮಾನವನ ಸ್ಥೂಲ–ಸೂಕ್ಷ್ಮ–ಕಾರಣ ಶರೀರ ಗಳು ಪರಶಿವನಲ್ಲಿ ಲೀನವಾಗಬೇಕೆಂಬ ಲವಲವಿಕೆಯುಂಟಾಗಲು ಆತ್ಮನು ಅಂಗನೆ ನಿಸಿಕೊಳ್ಳುತ್ತಾನೆ. ಈತನ ತನುತ್ರಯಗಳು ತ್ಯಾಗಾಂಗ–ಭೋಗಾಂಗ–ಯೋಗಾಂಗ ವೆನಿಸುತ್ತದೆ. ಶ್ರೀಗುರುವಿನ ಅನುಗ್ರಹದಿಂದ ಮಲತ್ರಯಗಳನ್ನು ತ್ಯಾಗಮಾಡುವ ಸ್ಥೂಲತನುವೆ ಭೋಗಾಂಗ, ಶಿವನಲ್ಲಿ ಸಾಮರಸ್ಯ ಹೊಂದುವ ಕಾರಣ ತನುವೆ ಯೋಗಾಂಗವೆನಿಸುವದು. ಈ ಮೂರು ತನುಗಳು ಇಷ್ಟಪ್ರಾಣ–ಭಾವಲಿಂಗದಲ್ಲಿ ಬೆರೆತು ಪೂರ್ಣ ಲಿಂಗಾಂಗಸಾಮರಸ್ಯನ್ನು ಪಡೆಯುವವು. ಲಿಂಗಾಂಗಸಾಮರಸ್ಯದಲ್ಲಿ ಮಗ್ನನಾದ ಶರಣನ ಯೋಗಾಂಗ ಅಂದರೆ ಕಾರಣತನುವಿನ ಸೂಕ್ಷ್ಮ ಚೇತನವೆ ಅಕ್ಕಮಹಾದೇವಿಯ 'ಯೋಗಾಂಗ ತ್ರಿವಿಧಿ'ಯಾಗಿ ನಿಂತಿದೆ.

ಸರ್ವವ್ಯಾಪಿಯೂ ಅಗೋಚರ ಸ್ವರೂಪನೂ ಆದ ಪರಶಿವನನ್ನು ಅಕ್ಕಮಹಾ ದೇವಿ ತನ್ನಲ್ಲಿ ಕಂಡಿದ್ದಾಳೆ. 'ಆಕಾಶದೊಳಗಣ ಜ್ಯೋತಿಯ ಪ್ರಭೆ' 'ತುಂಬಿದ ಕೊಟನೊಳಗೆ ಸಂಭ್ರಮದ ಮುತ್ತು' 'ಬಟ್ಟಬಯಲೊಳಗೊಂದು ಮುಟ್ಟಬಾರದ ಘನ' 'ಕೋಟಿರವಿಶಶಿಗಳಿಗೆ ಮೀಟದ ಪ್ರಭೆ' ಎಂದು ಬಣ್ಣಿಸಿದ್ದಾಳೆ. ಇಂಥ ಪರಮನ ಆನಂದದಲ್ಲಿ ಓಲಾಡುವವನೆ ಶರಣ. ಈ ಅನುಭವ ಮಾನವನಿಗೆ ಲಭಿಸಬೇಕಾದರೆ ಮನವೆಂಬ ಮರ್ಕಟನೊಡಗೂಡಿ ಆಡುವ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳೆಂಬ

ನರಿಗಳನ್ನು ಸ್ವಾಧೀನದಲ್ಲಿರಿಸಬೇಕು; ದೇಹೋಹಂ ಭಾವವನ್ನು ನಾಶಮಾಡಿ ಲಿಂಗ ಭಾವದಲ್ಲಿ ಬೆರೆಯಬೇಕು; ಕಾಮದೊಡನೆ ಹುಟ್ಟಿಬೆಳೆದ ಅರಿಷಡ್ವರ್ಗದ ತಲೆಸೀಳಿ ಮುಕ್ತ್ಯಂಗನೆಯ ಕೈಹಿಡಿಯಬೇಕು; ಮೋಕ್ಷದ ಪಥ್ಯಮಾರ್ಗದಲ್ಲಿ ನಡೆಯಬೇಕು ಎಂಬುದನ್ನು

ಕೋಡಗದ ಒಡಗೂಡಿ ಆಡುವ ನರಿನಾಯಿ
ಗೀಡಾದ ಮನೆಯ ಮುಱಿದೆನು | ಮುತ್ತಿನಂದು
ಗೂಡಿನೊಳು ನಾನು ಮೆಱೆದೆನು.

ಒಡಹುಟ್ಟಿದೈವರ ಒಡನೆ ಶಿರಗಳನಱಿದು
ಮುಡದಿಯ ಕರವ ಹಿಡಿದೆನು | ಮುಂದಣ
ನಡುಬಟ್ಟೆಯೊಳಗೆ ನಡೆವೆನು.

ಎಂದು ಅಕ್ಕನು ರೂಪಕದಲ್ಲಿ ಹಾಡಿದ್ದಾಳೆ. ಶರೀರವೆಂಬ ಘಟಕ್ಕೆ ಕಣ್ಣು-ಕಿವಿ-ಮೂಗು-ಬಾಯಿ-ಗುದ-ಗುಹ್ಯಗಳು ಸೇರಿ ಒಂಬತ್ತು ರಂಧ್ರಗಳಿವೆ. ಹರಿವ ಮನವೂ ಅದರಲ್ಲಿದೆ. ಜ್ಞಾನಸ್ವರೂಪವಾದ ಪರವಸ್ತುವೆಂಬ ಮುತ್ತು ಅಲ್ಲಿದೆ. ಈ ಮುತ್ತನ್ನು ನಂಬಿ ನಡೆದವನೆ ಪ್ರಾಜ್ಞ. ಮಾತಿಗೆ ಸಿಲುಕದ ಘನವು ಮೂರಾಗಿದೆ(ತ್ಯಾಗಾಂಗ-ಭೋಗಾಂಗ-ಯೋಗಾಂಗ ಮತ್ತು ಇಷ್ಟ-ಪ್ರಾಣ-ಭಾವದೆಂದು). ಅದು ಪರವಸ್ತು ವಿನ ಪ್ರವೃತ್ತಿಯೆನಿಸಿ ಶಿವಾದ್ವೈತ ಸಿದ್ಧಾಂತವಾಗಿದೆ. ಅಂಗೈಯ್ಯ ಲಿಂಗದಲ್ಲಿ ದೃಷ್ಟಿಯ ನಟ್ಟು ನಿರಂತರ ಧ್ಯಾನಿಸಲು ಕೋಟಿಚಂದ್ರಸೂರ್ಯರಿಗೆ ಮಿಗಿಲಾದ ಮಹಾಜ್ಯೋತಿ ತೋರುವದು. ಆಕಾಶತತ್ವದ ಸ್ಥಾನವಾದ ಮಾನವನ ಮಸ್ತಕದಲ್ಲಿ ಅಮೃತಕುಂಭ ವಿದೆ. ಅದು ಉಕ್ಕಿ ಅಂಗವೆಂಬ ಭೂಮಿಯಮೇಲೆ ಸುಂದರ ಮಾನವರು ಶಂಭು ಲೋಕಕ್ಕೆ ತೆರಳುವದು ನಿಶ್ಚಯವೆನ್ನುತ್ತಾಳೆ ಅಕ್ಕ

ಅಂಬರದೊಳಗಳ ತುಂಬಿದ ಕೊಡನುಕ್ಕಿ
ಕುಂಭಿನಿಯಮೇಲೆ ಸುರಿಯಲು | ಮಾನವರು
ಶಂಭುಲೋಕಕ್ಕೆ ತೆರಳಿದರು.

ಈ ಅಮೃತಸಿದ್ಧಿಯ ಯೋಗವು ಲಿಂಗಾನುಸಂಧಾನಿಗೆ ಸಹಜವಾಗಿ ಲಭಿಸುವಂಥದು. ಸರ್ವಜ್ಞ ಕವಿಯೂ ಕೂಡ ಮಾನವನ ನೆತ್ತಿಯೊಳಗಡಗಿದ ಅಮೃತರಸದ ಸೂಚನೆ ಯನ್ನಿತ್ತು—

ನೆತ್ತಿಯೊಳಗಮೃತವನು ಹೊತ್ತಿಹುದು ಜಗವೆಲ್ಲ
ಅತ್ತಿತ್ತ ನೀರ ಬಯಸುವಾ ಯೋಗಿಗಿ
ನ್ನೆತ್ತಣದು ಯೋಗ ಸರ್ವಜ್ಞ

ಎಂದು ಯೋಗಿಗಳನ್ನು ಎಚ್ಚರಿಸಿದ್ದಾನೆ.

ಈ ಗುರಿಯನ್ನು ಸಾಧಿಸಲು ಸೂರ್ಯಚಂದ್ರರನ್ನು ಬಂಧಿಸಬೇಕು; ಕುಂಭಕ ಮಾಡಿ, ಆಧಾರದಲ್ಲಿ ಅಡಗಿದ ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸಬೇಕು. ಆಗ ಆಧಾರ ಮೊದಲಾಗಿ ಪಶ್ಚಿಮ ೯ಡೆಯಾದ ನವಚಕ್ರಗಳಲ್ಲಿ ಭ್ರಮರ, ವೀಣಾ,

ಘಂಟಾ, ಭೇರಿ, ಮೇಘ, ಪ್ರಣವ, ದಿವ್ಯ, ಸಿಂಹ ಮತ್ತು ಮಹಾನಾದಗಳೆಂಬ ಒಂಬತ್ತು ನಾದಗಳು ಕೇಳಿಬರುತ್ತವೆ. ಅಲ್ಲದೆ ಹಳದಿ, ಬಿಳಿ, ಕೆಂಪು, ಹಸಿರು ಕಪೋತ, ಎಳೆಮಿಂಚು, ಜ್ಯೋತಿ, ಮಹಾಜ್ಯೋತಿ, ಅಗಣಿತಜ್ಯೋತಿ ಎಂಬ ಜ್ಯೋತಿಗಳು ಕಾಣಬಹುದಾಗಿದೆ. ಅಥವಾ ಒಂಬತ್ತು ದ್ವಾರಗಳಲ್ಲಿರುವ ವಾಯು ವನ್ನು ಬಂಧಿಸಿ, ಮಧ್ಯನಾಡಿ ಎನಿಸುವ ಸುಷುಮ್ನೆಯಲ್ಲಿ ಮನವನ್ನು ಉನ್ಮನಗೊಳಿಸಿ ನೋಡಲು ಮಸ್ತಕದಲ್ಲಿರುವ ಕುಂಭದೊಳಗಿನ ಅಮೃತಸುರಿವುದೆನ್ನುತ್ತಾಳೆ ಅಕ್ಕ ಮಹಾದೇವಿ.

ಮೊರೆವ ನಾದವ ಕೇಳಿ ಉರಿಯ ಜ್ಯೋತಿಯ ನೋಡಿ
ಸುರಿವ ಅಮೃತವ ದಣಿದುಂಡ | ಕಾರಣ
ತೊರೆದೆನು ಜನನ ಮರಣಗಳ

ಒಂಬತ್ತು ದ್ವಾರದ ಇಂಬುಗಳ ಬಲಿವುತ್ತ
ತುಂಬಿ ಸುಷುಮ್ನೆಯೊಳು ಮನವ | ನೋಡಲ್ಕೆ
ಕುಂಭದೊಳಮೃತ ಸುರಿವುದು.

ಯೋಗತತ್ತ್ವೋಪನಿಷತ್ತಿನ ಕೊನೆಗೆ ಇದೆ ಬಗೆಯ ಅನುಭವದ ನಿರ್ದೇಶವಿದೆ.

ಕೂರ್ಮಃ ಸ್ವಪಾಣಿಪಾದಾದಿ ಶಿರಶ್ಚಾತ್ಮನಿ ಧಾರಯೇತ್
ಏವಂ ದ್ವಾರೇಷು ಸರ್ವೇಷು ವಾಯುಪೂರಿತರೇಚಿತಃ
ಘಟಮಧ್ಯೇ ಯಥಾ ದೀಪೋ ನಿವಾಂತಂ ಕುಂಭಕಂ ವಿದುಃ
ನಿಷಿದ್ಧೈರ್ನವಭಿರ್ದ್ವಾರೈರ್ನಿರ್ಜಿತೇ ನಿರುಪದ್ರವೇ
ನಿಶ್ಚಿತಂ ತ್ವಾತ್ಮಮಾತ್ರೇಣಾವಶಿಷ್ಟಂ ಯೋಗಸೇವಯೇತ್

ಅಂದರೆ "ಕೂರ್ಮವು ತನ್ನ ಅವಯವಗಳನ್ನೆಲ್ಲ ತನ್ನಲ್ಲಿ ಅಡಗಿಸಿಕೊಳ್ಳುತ್ತದೆ: ಹಾಗೆ ಮಾನವನು ನವದ್ವಾರಗಳಲ್ಲಿಯ ವಾಯುವನ್ನು ಬಂಧಿಸಿ ಕುಂಭಕವನ್ನಾಚರಿಸಿದರೆ, ಗಾಳಿಗೆಡೆಯಾಗದ ಕೊಡದಲ್ಲಿ ದೀಪವು ಶಾಂತವಾಗಿ ಉರಿವಂತೆ ಆತ್ಮನು ನಿಶ್ಚಿಂತ ನಾಗಿ, ಆತ್ಮನಿಂದುಳಿದ ಉಳಿಮೆಯನ್ನು ಸೇವಿಸಬೇಕು. ಇಂತು ಅಮೃತವನ್ನುಂಡು ಪರಮಾನಂದದಲ್ಲಿ ಮುಳುಗಿದವರಿಗೆ ಜನನ – ಮರಣಗಳ ಭಯವಿಲ್ಲ; ದುಃಖ ದುಮ್ಮಾನಗಳ ಕೋಟಲೆಯಲ್ಲಿ ಬಳಲಬೇಕಾಗಿಲ್ಲ; ಭವಸಾಗರವನ್ನೇ ಲೀಲಾಜಾಲ ವಾಗಿ ದಾಟಬಹುದಾಗಿದೆ.

ಈ ಜ್ಞಾನವು ಅನುಭವವೇದ್ಯವಾಗಬೇಕಾದರೆ ಸದ್ಗುರುವಿನ ಕೃಪೆ ಅವಶ್ಯ. ಚಿತ್ಕಳೆಯ ಸ್ವರೂಪವಾದ ಇಷ್ಟಲಿಂಗವನ್ನೀಯುತ್ತಾನೆ. ಹಸ್ತಮಸ್ತಕ ಸಂಯೋಗ ದಿಂದ ಪಶ್ಚಿಮದ್ವಾರವನ್ನು ತೆರೆದು ಸ್ವರೂಪವಿಸ್ಮೃತಿಗೀಡಾದ ಜೀವನನ್ನು ಎಚ್ಚರಿ ಸುತ್ತಾನೆ; ಪರಮನ ನೆಲೆಯನ್ನು ಅರುಹುತ್ತಾನೆ. ಸಾಧಕನಲ್ಲಿ ಸಾಧನೆಯು ಒಲಗೊಂಡಂತೆ ನಿವೃತ್ತಿಜ್ಞಾನವುಂಟಾಗುತ್ತದೆ. ಜ್ಞಾನೇಂದ್ರಿಯ, ವಾಯು, ವಿಷಯ, ಕರಣಗಳೆಲ್ಲವೂ ಸ್ವಾಧೀನಕ್ಕೆ ಬರುತ್ತವೆ. ಆಗ ಯೋಗಿಗೆ ವಿಶಿಷ್ಟ

ಅನುಭವಗಳಾಗುತ್ತವೆ. ಅವನಲ್ಲಿ ದಿವ್ಯಗಂಧ ಉದಿಸಿ ಸಚ್ಚಿತ್ತೆಂಬ ಭ್ರಮರ ಅದನ್ನಾಸ್ವಾದಿಸುತ್ತದೆ; ನವಚಕ್ರಗಳಲ್ಲಿಯ ನವಲಿಂಗಗಳು ಉನ್ಮನ ಚೈತನ್ಯ ಕೇಂದ್ರಗಳಾಗಿ ಬೆಳಗುತ್ತದೆ. ನವಶಕ್ತಿಯರು ಅವನ್ನು ಅಂಗೀಕರಿಸಿದುದು ವಿದಿತವಾಗುತ್ತದೆ; ಅದರಿಂದ ಭವಪಾಶ ಹರಿದು ಹೋಗುತ್ತದೆ; ಶಿರದಲ್ಲಿರುವ ಸೂರ್ಯ-ಚಂದ್ರ-ಅಗ್ನಿಗಳೆಂಬ ಮಂಡಲತ್ರಯಗಳು ಪ್ರಕಾಶಮಾನವಾಗಿ ಶೋಭಿಸುತ್ತವೆ. ಕೊನೆಗೆ 'ನಾನು ಲಿಂಗ'ವೆಂಬ ಅರಿವು ಆವಿರ್ಭವಿಸಿ ಲಿಂಗದ ನಡೆ, ಲಿಂಗದ ನುಡಿ ಗೋಚರಿಸುತ್ತದೆ. ಸರ್ವಾಂಗಲಿಂಗಿಯಾದ ಅಕ್ಕಮಹಾದೇವಿ

ನಡೆವೆನು ಲಿಂಗದ ಕೂಡೆ ನುಡಿವೆನು ಲಿಂಗದಪ್ಪೊಡನೆ
ಎಡೆವಿಡದೆ ಬಪ್ಪ ವಿಷಯದ | ಭೋಗಂಗಳ
ಕೊಡುವೆನು ಲಿಂಗಮುಖಗಳಿಗೆ

ಎಂದಿದ್ದಾಳೆ. ಶಿವೋಹಂ ಭಾವದ ಆಕೆಗೆ ಲೌಕಿಕ ವ್ಯಾಮೋಹಗಳು ಅಂಟಲಿಲ್ಲ. ನಶ್ವರವಾದ 'ಒಂಭತ್ತು ಚೌಕದಲಿ ಉಂಬುಡುವ ಮನೆಯನು

ನಂಬದೆ ಕಡೆಗೆ ತೊಲಗಿಸಿ | ಮುಂದಣ
ಸಂಭ್ರಮದ ಮನೆಗೆ ನಡೆದೆನು

ಎಂದು ಹಾಡಿದ್ದಾಳೆ. ಪರಮಾತ್ಮನಲ್ಲಿ ಅಚಲವಾದ ಶ್ರದ್ಧೆಯುಳ್ಳ ಆಕೆ ಶಿವಪ್ರಿಯೆಯಾಗಿದ್ದಳು. ಲೌಕಿಕ ಪ್ರಪಂಚಕ್ಕೆ ವೀರವಿರಾಗಿಣಿಯಾಗಿದ್ದಳು. ಆದ್ದರಿಂದ

ಉಟ್ಟ ಸೀರೆಯ ಸೀಳಿ ತೊಟ್ಟ ತೊಡಿಗೆಯ ಮುರಿದು
ಬಿಟ್ಟೆನು ನಾನು ಬಿಡುಮುಡಿಯ | ಎಲೆ ದೇವ
ಕೊಟ್ಟೆನು ಎನ್ನ ತನುಮನವ,

ಎಂದು ಅಕ್ಕಮಹಾದೇವಿ ತನುವಿನ ಅಜ್ಞಾನವೆಂಬ ಸೀರೆಯ ಸೀಳಿ, ನಾನು ನನ್ನದೆಂಬ ಅಹಂಕಾರ-ಮಮಕಾರ ತೊಡಿಗೆಯ ಮುರಿದು, ಸಂಕಲ್ಪ-ವಿಕಲ್ಪಗಳೆಂಬ ಮುಡಿಯ ಬಿಚ್ಚಿಬಿಟ್ಟಳು. 'ಶಿವನೇ, ನನ್ನ ತನುಮನವ ನಿನಗರ್ಪಿಸಿದೆ! ಷಟ್ ಕಮಲದೊಳಗಿನ ಷಡ್ವಿಧ ಲಿಂಗಗಳಿಗೆ ಷಡ್ವಿಧ ಇಂದ್ರಿಯಗಳ ಮುಖಾಂತರ ವಿಷಯಗಳನ್ನು ಷಡ್ವಿಧಭಕ್ತಿಯಿಂದ ಕೊಡುತ್ತಿರುವೆ' ಎಂದಳು. ಕಾರಣ ಅಂಗದಾಶ್ರಯ ಅಳಿದು ಲಿಂಗದಾಶ್ರಯ ಉಳಿಯಿತು. ಲಿಂಗದಲ್ಲಿ ಮನವು ಒಡವೆರೆದು ಒಂದಾಯಿತು; ಆಕೆಗೆ ಅಂಗಗುಣವೆಂಬುದಿಲ್ಲದಾಯಿತು. ಭವಗಳು ಹಿಂಗಿದವು. ಕಾಯವು ಗುರುವಾಯಿತು, ಪ್ರಾಣವು ಲಿಂಗವಾಯಿತು, ಅಂತರಾತ್ಮವು ಜಂಗಮವಾಯಿತು; ತನು-ಮನ-ಭಾವಗಳಿಲ್ಲವಾದವು. ಎಲ್ಲವೂ ಶ್ರೀಗುರುವಿನ ವರಪ್ರಸಾದವೆನ್ನುತ್ತಾಳೆ ಅಕ್ಕಮಹಾದೇವಿ—

ನಾನಾ ಜನ್ಮದೊಳಗೆ ನಾ ತೊಳಲುತಿರಲಾಗಿ
ನೀನೆನಗೆ ಬಂದು ಕೃಪೆಯಾದ | ಕಾರಣವು
ನಾ ನಿಮ್ಮ ಪಾದದೊಳೊಡವೆರೆದೆ.

ನಿಮ್ಮ ತೊತ್ತಿನ ತೊತ್ತು ನಿಮ್ಮ ಭೃತ್ಯರ ಭೃತ್ಯ
ನಿಮ್ಮಡಿಯ ನಾನು ಮಱಿಹೊಕ್ಕೆ । ಘನಗುರುವೆ
ನಿಮ್ಮ ಕೃಪೆಯಿಂದ ಸಲಹಯ್ಯ

ಎಂದು ಗುರುವನ್ನು ಆರಾಧಿಸಿದ್ದಾಳೆ. ಹೀಗೆ ಅಕ್ಕಮಹಾದೇವಿಯು ಆಧ್ಯಾತ್ಮದ ಅಂತಿಮಾವಸ್ಥೆಯನ್ನು ಮುಟ್ಟಿದ್ದಾಳೆ. ಕಾರಣ ಅವಳ ತನು-ಮನ-ಪ್ರಾಣ ಅರಿವುಗಳೆಲ್ಲ ಪರಮಾತ್ಮನಲ್ಲಿ ತಾದಾತ್ಮ್ಯಗೊಂಡು ಅನುಭಾವದ ಪರಮಸೀಮೆಯನ್ನು ಮುಟ್ಟಿವೆ. ಪರಿಪೂರ್ಣ ಜೀವನದ ಸಾಕಾರ ಅಧಿದೇವತೆ ಅವಳಾಗಿದ್ದಾಳೆ. ಅಂಗದ ವಿಕಾರವನ್ನು ಲಿಂಗಮುಖದಿಂದ, ಮನದ ಕಾಳಿಕೆಯನ್ನು ಅರಿವಿನಿಂದ, ಜೀವಭಾವನವನ್ನು ಶಿವಭಾವದಿಂದ, ಕರಣಗಳ ಕತ್ತಲೆಯನ್ನು ದಿವ್ಯಜ್ಞಾನದಿಂದ ಕಳೆದು ಪರಿಶುದ್ಧಳಾಗಿ ಜನನ-ಮರಣರಹಿತಳಾದುದು ವಿದಿತವಾಗುತ್ತದೆ. ಅಲ್ಲದೆ ಲಿಂಗದೊಳಗೆ ಅಂಗವಾಗಿ, ಮನದೊಳಗೆ ಮನವಾಗಿ, ಭಾವದೊಳಗೆ ಭಾವವಾಗಿ, ಅರಿವಿನೊಳಗೆ ಅರಿವಾಗಿ, ಲಿಂಗಾಂಗ ಸಾಮರಸ್ಯ ಹೊಂದಿದ್ದಾಳೆ, ಅಂತರಂಗದ 'ಕ್ರಿಯೆಗಳನ್ನೆಲ್ಲ ನಿಲ್ಲಿಸಿ ಕ್ರಿಯಾತೀತ'ಳಾಗಿ 'ನಾನು ನೀನೆಂಬ ಉಭಯವಳಿದು ಲಿಂಗದಲ್ಲಿ ಒಂದಾಗಿದ್ದಾಳೆ. ಇದರಿಂದ ಲಿಂಗದ ಪ್ರಭೆ ಅವಳ ರೋಮರೋಮಗಳಲ್ಲಿ ಇಳಿದು ಬಂದಿರಲು ಸಾಕು.

ಲೌಕಿಕ ಪ್ರಪಂಚದ ಚಾಣಾಕ್ಷಮತಿಗಳು, ಯೌವನ-ಧನ-ಸಂಪತ್ತಿ-ಪ್ರಭುತ್ವಗಳಿಂದ 'ಆರು ನಾನೆಂಬ' ವಿಚಾರವನ್ನು ಮರೆತವರು ಕೊಂಕು ನುಡಿಗಳಿಂದ ಯೋಗ ಜೀವನವನ್ನು ಕುರಿತು ಅಪಹಾಸ್ಯಗೈಯ್ಯಬಹುದು. ಶರಣರ ನಿಲವನ್ನು ಶರಣರು ಬಲ್ಲರು! ಎಲ್ಲರಿಗೂ ತಿಳಿಯುವದೆಂತು? ಜೀವ ಪರಮರ ಅವಿರಳ ಸಾಮರಸ್ಯವು ವರ್ಣನೆಗೆ ಅತೀತವಾದುದು. ಲಿಂಗಸುಖವನ್ನು ಬಲ್ಲವರು ಪರರಿಗೆ ಹೇಳುವರೆ?

ಚಿನ್ನ ಬಣ್ಣಗಳಂತೆ ರನ್ನ ದೀಪ್ತಿಗಳಂತೆ
ಭಿನ್ನವಿಲ್ಲದೆ ಬೆರೆದಿಹರು । ಹಂಗದೊಳು
ಪನ್ನಗಧರನ ಶರಣರು.

ಅಕ್ಕನ ಶಿವಲೀಲಾನಂದ ಭಕ್ತಿರಸವಾಗಿ ಇಲ್ಲಿ ಉಕ್ಕೇರಿದೆ. ಅವಳ ಶಿವಾನಂದವನ್ನು ಮನಸಾರೆ ಅನುಭವಿಸಿದ್ದಾಳೆ. ಕೋಗಿಲೆ ವಸಂತಮಾಸದಲ್ಲಿ ಹಿಗ್ಗಿ ಕೂಗುವಂತೆ ದೇವೋನ್ಮಾದದಿಂದ ಹಾಡಿದ್ದಾಳೆ. ನಿರ್ವ್ಯಾಜವಾದ, ನಿರ್ಮಲವಾದ, ನಿರಹಂಕಾರಯುತ ಶಿವಭಕ್ತಿಯನ್ನು ಕಾಣಬಹುದಾಗಿದೆ.

ಅಕ್ಕನ 'ಯೋಗಾಂಗತ್ರಿವಿಧಿ'ಯು ಕಾವ್ಯರಚನೆಯ ಹಂಬಲದಿಂದ ಮೂಡಿಬಂದುದಲ್ಲ; ರಾಜಾಶ್ರಯದ ಒಲುಮೆಗಾಗಿ ಕಟ್ಟಿ ಹಾಡಿದುದಲ್ಲ; ಕವಿಯ ಭಾವಗಳ ವಿದ್ಯುದಾಲಿಂಗನೆಯಿಂದ ಪ್ರತಿಭೆಯಾಗಿ ಹೊರಬಂದುದಲ್ಲ; ಇಷ್ಟದೈವವಾದ ಚನ್ನ-

ಮಲ್ಲಿಕಾರ್ಜುನನ ವರಪ್ರಸಾದವು ಅವಳ ದೇಹವನ್ನು ತುಂಬಿ ಹೊರಸೂಸಿದುದರಿಂದ ಉದಿಸಿ ಬಂದಿದೆ! ಈ ತ್ರಿವಿಧಿಯು ತನ್ನದೆ ಆದ ಲಯ–ಗತಿಯೊಡನೆ ನಾದಗೈಯುತ್ತಾ ಓದುಗರನ್ನು ಅನುಭವಾನಂದ ಸಾಗರದಲ್ಲಿ ಮುಳುಗಿಸುತ್ತದೆ. ಶುದ್ಧ ಪ್ರೇಮದ ಪರವಶತೆಯಲ್ಲಿ ಮಂತ್ರಮುಗ್ಧರನ್ನಾಗಿ ಮಾಡುತ್ತದೆ. ಜೀವನವನ್ನು ಪರಮಾರ್ಥದೆಡೆಗೆ ಒಯ್ಯುವ ಶಕ್ತಿ ಅದಕ್ಕಿದೆ. ಸ್ವಾನುಭಾವವೆ ನೆಲೆಯಾಗಿ, ಕಾವ್ಯ ರಸಗಂಗೆಯೆ ಶಕ್ತಿಯಾಗಿ ಈ ತ್ರಿವಿಧಿ ಮೂಡಿ ನಿಂತುದರಿಂದ ಆತ್ಮ ಪ್ರಭೆಯ ಸಾಕ್ಷಾತ್ಕಾರವನು ದಯಪಾಲಿಸುವಂತಿದೆ.



# ಮಧುರ ಚೆನ್ನರ ಅನುಭಾವ ಗೀತಗಳು

—ಡಾ. ಡಿ. ಎಸ್. ಕರ್ಕಿ

ಮಧುರ ಚೆನ್ನರು ಪ್ರಾಮುಖ್ಯವಾಗಿ ಅನುಭಾವಕವಿ. ಹಲಸಂಗಿ ಚೆನ್ನ ಮಲ್ಲಪ್ಪನವರ ಈ ಕಾವ್ಯನಾಮವು "ಮಧುರ" ವನ್ನು ಒಳಗೊಂಡಂತೆ "ಚನ್ನ"– ಅವರ ಕಾವ್ಯದ ಹೆಸರು "ನನ್ನ ನಲ್ಲ" "ಕವಿಚನ್ನ" ತನ್ನ ಮನೋದೆವತೆ ಬಗೆಗೆ ತಳೆದ ಭಾವವು ಹೀಗೆ ಕವಿಯ ನಾಮ ಹಾಗೂ ಅವರ ಕಾವ್ಯ ನಾಮ ಸಮೂಚಿತ ವಾಗಿ ಹೊಂದಿಕೊಂಡ ಬಗೆಯನ್ನು ಇಲ್ಲಿ ಕಾಣಬಹುದು ಇಂತು ಭಾವಸಮನ್ವಯ ವನ್ನು ಸೂಚಿಸುವಂತಿರುವ 'ಮಧುರ ಚೆನ್ನ'ರ 'ನನ್ನ ನಲ್ಲ' ಕಾವ್ಯದ ಸೂಚಿ ರುಚಿಯನ್ನು ಸುಳುಹುಗಾಣಿಸುವುದು ಈ ಬರಹದ ಗುರಿ.

೧೯೩೩ರಲ್ಲಿ ಬೆಳಕುಕಂಡ ನನ್ನ ನಲ್ಲ ಕಾವ್ಯದ ಪರಿಚಯ ನನಗೆ ಬಂದುದು ೧೯೩೭ರಲ್ಲಿ ಆ ಗಡುವಿನಲ್ಲಿ ನನ್ನ ಕಿವಿಗೆ ಸವಿ ಸೂಸಿದ ಮಧುರ ಚೆನ್ನರಭಾವ ಗೀತ ಗಳ ತನಿ ನೆನಹು ನನ್ನ ಮನದಲ್ಲಿ ಅಚ್ಚಳಿಯದೆ ಉಳಿದಿದೆ. ನಮ್ಮ ನಾಡಿನಲ್ಲಿ ನಮ್ಮ ಭಾವ ಗೀತೆಗಳ ಬಗೆಗೆ ಒಂದು ಹೊಸ ಉತ್ಸಾಹ ಸುರಿಸಿ ಬಂದಕಾಲ ಅದು. ಆ ನವೋದಯದ ಕಾಲದ ಬರದಲ್ಲಿ ಹಿರಿಯ ಕವಿ ಬೇಂದ್ರೆಯವರ ಕಿರಿ ಮಿತ್ರ-ರಾಗಿದ್ದ ಈ ಅನುಭಾವ ಕವಿಯ ಗೀತೆಗಳು ಲೋಕಪ್ರಿಯವಾಗ ತೊಡಗಿದ್ದವು. ಆ ಗೀತೆಗಳನ್ನು ನನ್ನ ಮಿತ್ರರು– ವಿಶೇಷತಹ ನನ್ನ ಕವಿ ಮಿತ್ರರಾಗಿದ್ದ ಇಂಚಲ ರವರು– ಇಂಚರದಲ್ಲಿ ಹಾಡುತ್ತಿದ್ದರು. ಅದರಿಂದಾಗಿ ಮಧುರ ಚೆನ್ನರ ಗೀತಗಳು ನನಗೆ ಇನ್ನಷ್ಟು ಮಧುರವಾಗಿ ಮನವನ್ನು ಸೂರೆಗೊಂಡಿವೆ.

ಮಧುರ ಚೆನ್ನರ ನನ್ನನಲ್ಲ ದೊಳಗಣ ನೀತ್ಯದಲ್ಲಿ ಭಕ್ತಿ, ಅನುಭಾವ, ಆಧ್ಯಾತ್ಮಗಳು ಮುಪ್ಪುರಿ ಗೊಂಡಿವೆ ಎಂದು ಹೇಳಬಹುದು. ಭಕ್ತಿಯಿಂದ ಅನುಭಾವದ ಮೂಲಕ ಆಧ್ಯಾತ್ಮ ಹೀಗೆ ಅವರ ಗೀತಗಳು ವಿಕಾಸ ಹೊಂದಿರುವದನ್ನು ಗುರುತಿಸಬಹುದು. ಪ್ರೀತಿ ಎಂಬುದು ಅಂತರಂಗದ ದೇವನತ್ತ ತಿರುಗಿದಾಗ ಭಕ್ತಿಯಾಗಿ ಹೀಗೆ ಉದಾತ್ತಗೊಂಡ ಪ್ರೀತಿ ಅವರ ನನ್ನ ನಲ್ಲದ ಮೊದಲ ಮೊದಲಿನ ಪದ್ಯದಲ್ಲಿ ಅಭಿವ್ಯಕ್ತವಾದ ರೀತಿಗೆ ಕೆಳಗಿನ ಪದ್ಯ

ಒಂದು ಹೃದ್ಯವಾದ ಸಿದರ್ಶನ. ಅವರ ಶೈಲಿಯ ಮೇಲೆ ಕೂಡಾ ಬೆಳಕು ಚೆಲ್ಲುವ ಪದ್ಯವಿದು !

ಆರದಾರತಿ ಹಿಡಿದು ಹಾರುತಿರುವಳಾಕೆ
ಹೊನ್ನಿ ಏ ಹೊನ್ನಿ ನೀನಾರೆ ಹೇಳೆ
ಯಾರಿಗಾರತಿ ಒಯ್ಯುವೆ ಹೇಳು
ನಾನು ಬರುವೆ ನನ್ನ ಅರಸ
ಇದ್ದಾನೊ ಅಲ್ಲಿಯಾರೆ ।।

ಮೂಲತಹ ಪ್ರೀತಿಯ ಬಗೆಗೆ ಈ ಕವಿ ತಳೆದ ಪ್ರಜ್ಞೆ ಗಮನಾರ್ಹವಾದುದು.

ದೇವ ಲೀಲೆಯೂ ಕಾಣೆ ಕರ್ಮ ಜಾಲವು ಕಾಣೆ
ಅದು ನಮ್ಮ ಬುದ್ಧಿಗಾಚಿನ ಮಾತು
ಯಾವುದು ಏನೇ ಇರಲಿ, ಪ್ರೀತಿಯಂಥವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು.

ಒಟ್ಟನಲ್ಲಿ ಪ್ರೀತಿಗೂ ಶೃಂಗಾರ ಭಕ್ತಿಗೂ ಅತೀ ಸಮೀಪದ ಸಂಬಂಧ ವಿರದಿದ್ದರೂ ಅವೆರಡರಲ್ಲಿ ಸ್ವಭಾವ ಸಂಬಂಧ ಉಂಟೆ–ಉಂಟು ಪರಿಶೀಲಿಸ ಬೇಕು;

"ಮನದೊಳಗೆ ನಿನ್ನ ನೆನಪಾದರಾಕ್ಷಣದೊಳಗೆ
ಮುಗಿಲೊಳಗೆ ಎಳೆಚಂದ್ರ ಮೂಡಿದಂತೆ
ಬನದೊಳಗೆ ಕೇರಳದ ಕೋಕಿಲೆಯ ಧ್ವನಿಯಂತೆ
ಗರಿಬಿಚ್ಚಿಗಂಡು ನವಿಲಾಡಿದಂತೆ"

ಹೀಗೆ ಭಕ್ತಿ–ಅನುಭಾವದ ಅನುವಿನಿಂದಾಗಿ ಅನುಭಾವದ ಸುಳಿಹು ದೊರತ ಕವಿಗೆ ತನ್ನ ವಿಶಿಷ್ಟ ಅನುಭಾವ ಇಲ್ಲಿ ಮೆಲ್ಲನೆ ಅನುಭಾವಕ್ಕೆ ಹವಣಗೊಳುತ್ತಿರುವ ದನ್ನು ಗುರುತಿಸ ಬಹುದು ಈ ಹವಣಿಕೆ ಕೆಳಗಿನ ಪದ್ಯದಲ್ಲಿ ಇನ್ನಿಷ್ಟು ನಿಚ್ಚಳವಾದ ನಿಲವ ತೋರಿದೆ ಆಧ್ಯಾತ್ಮ ಸಾಧನೆಯ ಕುರುಹ ತೋರಿದೆ ಹೀಗೆ

"ಬೆಳು ದಿಂಗಳ ಇರುಳಲ್ಲಿ ನಟ್ಟನಡು ರಾತ್ರಿಯಲ್ಲಿ
ಸಪ್ಪಳಿಲ್ಲದ ಶಾಂತ ಸೃಷ್ಟಿಯಲ್ಲಿ
ಬಿಳಿಯ ಟಿಂವಕ್ಕಿ ಮಾತಾಡುತ ಹೊರಟಂತೆ
ನಾವಾತ್ಮ ಯಾತ್ರಿಕರು ಅನಂತದಲ್ಲಿ"

ಆ ಬಳಿಕ "ದೇವ ಲೋಕದ ಜಾಣೆ" "ಭಾವ ಲೋಕ ವಾಣಿ" ಎಂದು ಮಧುರ ಚೆನ್ನರ ಭಾವಗೀತದ ಉನ್ನತವಾದ ನಿಲವನ್ನು ಸುಳ್ಳುಹಂಗಾಣಿಸಿದ್ದಾರೆ. ಮಧುರ ಚೆನ್ನರ ಭಕ್ತಿ ಶೃಂಗಾರವಾಗಿ ಅನುಭಾವಕ್ಕೆ ತಿರುಗಿ ಅದು ಉತ್ಕಟವಾಗಿ ಅಭಿವ್ಯಕ್ತವಾದ ರೀತಿಯನ್ನು ಮುಂದಣ ಚರಣಗಳಲ್ಲಿ ಕಾಣಬಹುದು.

"ಹದಿನಾರು ಸಾವಿರದ ಅಬ್ಜ ಕೋಟಿಗು ಮಿಕ್ಕಿ
ರಾಣಿಯರು ರಾಜ ಮಣಿಗೆ
ಪರ ನಾರಿಯರ ಬಳಗ ಮುತ್ತಿ ಮುಗಿ ಬರಲು
ಬಹನೆ ಬಿದ್ದೆನ್ನ ಎನ್ನ ಬಳಿಗೆ"

ನಲ್ಲನ ಶೋಧನೆ, ಸಾಧನೆ ಮುಂದು ವರೆದ ದಾರಿಯಲ್ಲಿ ಆಗುವ ಅನುಭವದ ತೀಕ್ಷಣತೆಯಲ್ಲಿ ಮನಕ್ಕೆ ನೋವನ್ನುಂಟು ಮಾಡುವ ರೀತಿಯಲ್ಲಿ ಮಧುರ ಚೆನ್ನರ ನುಡಿದ ಬಗೆಯಲ್ಲಿ ಮಧುರನ ಅನುಭವ ಪ್ರತಿ ಬಿಂಬಿತ ವಾಗಿದೆ.

ಕನ್ನಕ್ಕಿರುವ ತನಕ ಹೆಸರು ಹೇಳುವ ಹಿಗ್ಗು
ಕಂಡು ಕಾಣದ ಕಥೆಯ ಕೇಳಿ ಹಿಗ್ಗು
ಹೊನ್ನ ಶೂಲದ ಹರೆಯು ಹೊಮ್ಮಿ ಹೊರ ಚೆಲ್ಲಿದರೆ
ನಲ್ಲ ನಗಲಿಕೆ ಯಾಗ ಮನಕೆ ಕುಗ್ಗು

ಭಕ್ತಿಯ ದಿಶೆಯಲ್ಲಿ ಕವಿಕಂಡ ಬೆಳವಣಿಗೆಯ ಎರಡು ಸ್ಥಲಗಳ-ಕನ್ನಕ್ಕಿ ತನ ಹಾಗು ಹೊನ್ನಶೂಲದ ಹರೆಯ ಇವೆರಡರ ನಡುವಣ ವ್ಯತ್ಯಾಸವನ್ನು ಎಷ್ಟೊಂದು ಶಕ್ತಿಯುತವಾಗಿ ಅಭಿವ್ಯಕ್ತಿಸಿದೆ ಈ ಪದ್ಯ ಕವಿ ಭಾವದಲ್ಲಿ ನಾವು ಒಂದಿಸಿತು ಸುಳಿದಾಗಲೆ ಇದು ಹೊಳೆದೀತು. ಸಾಧನೆಯ ಮಾರ್ಗದಲ್ಲಿ ಮುಂದೆ ಮುಂದೆ ಸಾಗಿದಂತೆ ನಂಬಿಗೆಯ ಒಂದು ಘಟ್ಟವನ್ನು ಮುಟ್ಟುತ್ತೇವೆ ಆಗ ಆ ಬರಿಯ ಹಂಬಲ ಹರಿದಾಟ ನಿಂತು ಶಾಂತ ಚಿತ್ತದ ಒಂದು ಶ್ರದ್ಧೆಗೆ ಇಂಬು ದೊರೆಯುತ್ತದೆ ಈ ಒಂದು ನೆಲೆಯಲ್ಲಿ ಈ ಕವಿಗೆ ಆದ ಅನುಭವ ಹೇಗೆ ವ್ಯಕ್ತ ವಾಗಿದೆ !

"ಬರುವುದೇನುಂಟೊಮ್ಮೆ ಬರುವ ಕಾಲಕ್ಕೆ ಬಹುದು
ಬಯಕೆ ಬರುವುದರ್ ಕಣ್ ಸನ್ನೆ ಕಾಣು"

ಅನುಭವದ ವಲಯ ವಿಸ್ತಾರವಾಗಿ ವಿಶಿಷ್ಟವಾದ ಪ್ರಿತಿ ವಿಶಾಲವಾದ ಪ್ರೀತಿ ಯಾಗಿ ಪರಿಣಮಿಸಿದ ಒಂದು ನಿಶ್ಚಿತ ನಿಲವನ್ನು ಕವಿತಳೆದರು, ಎಂದು ಕಾಣು ತ್ತದೆ. ಆಗ ಅವರು ಮನಗಂಡ ಮಾತು ಹೀಗಿದೆ.

ದೇವಲೀಲೆಯು ಕಾಣೆ ಕರ್ಮ ಜಾಲವು ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೆ ಇರಲಿ ಪ್ರೀತಿಯಂಥವಸ್ತು
ಜಗದೊಳಗೆ ಇಲ್ಲ ಮನಗಂಡ ಮಾತು

ಸಂದೇಹ ದಾಚೆಗಿನ ಛಾಯೆ ಇಲ್ಲಿ ಮೈದೋರಿದೆ ಈ ತರುವಾಯ ಭಕ್ತಿ ಅನುಭಾವಕ್ಕೆ ನಿಶ್ಚಿತವಾಗಿ ತಿರುಗಿದ ಬಗೆಯನ್ನು ಈ ಕವಿಯ ಕೆಳಗಿನ ಪದ್ಯಛಾಯೆ ಗಾಣಿಸಿದೆ.

ಇಲ್ಲಿಯೂ ಮುಗಿಯದವ ಅಲ್ಲಿಯೂ ಮುಗಿಯದವ
ಎಲ್ಲಿಯೂ ಮುಗಿಯದ ಆಕಾಶ ತಂದೆ
ಎಲ್ಲಲ್ಲಿ ನನ್ನರಸ ನಿಹನೆಲ್ಲಿ ನಿನ್ನರಸ ನಿಹನೆಲ್ಲಿ ನನ್ನಾಶ್ರಯವು
ಕೈಮುಗಿವೆ ಹೇಳಿನ್ನನಂತ ತಂದೆ.

ಆನಂತರ ಅನುಭಾವದ ದಾರಿಯಲ್ಲಿ ಮೈದೋರಿದ ನೆಲೆಯನ್ನು ಕೆಳಗಣ ಪದ್ಯದಲ್ಲಿ ಕಾಣಬಹುದು.

ಬಣ್ಣದ ಹಣ್ಣುಗಳ ತಿಂದು ತೇಗಲು ಬಹುದು.
ಚಿತ್ರದ ಮಲ್ಲಿಗೆಯ ಮೂಸ ಬಹುದು.
ಮಣ್ಣಿ ಗೊಂಬೆಯ ಮೆಚ್ಚಿ ಮಾತ ನಾಡಿಸ ಬಹುದು

ನನ್ನ ನಲ್ಲನ ಸ್ಪರ್ಶವನ್ನು ಕವಿ ಅದೆಂತೋ ಅನುಭವಿಸಿದ ಆನಂದವು ಇಂಥದೇ ಎಂದು ಎಂತು ಹೇಳಬಹದು? ಆದರೂ ಕವಿ ಅದನ್ನು ಬಗೆಕಾಣಿಸಿದ ಬಗೆ ಹೀಗಿದೆ.

ಸುತ್ತ ಮುತ್ತು ಸ್ಪರ್ಶ ಒಳಗೂ ಹೊರಗೂ ಸ್ಪರ್ಶ
ಕೆಳಗೂ ಮೇಲೂ ಸ್ಪರ್ಶ ಮಧುರ ಸ್ಪರ್ಶ
ಅತ್ತ ಹೊರಳಲೂ ಸ್ಪರ್ಶ ಇತ್ತ ಹೊರಳಲೂ ಸ್ಪರ್ಶ
ಎತ್ತೆತ್ತಲೂ ಸ್ಪರ್ಶ ದಿವ್ಯ ಸ್ಪರ್ಶ.

ಸ್ಪರ್ಶೇಂದ್ರಿಯದ ಮೂಲಕ ಜನಿಸಿದ ಅನುಭವದ ಅನುಭಾವ ಅಷ್ಟಕ್ಕೆ ಉಳಿಯದೆ ಕಣ್ಣ ಮುಂದೆ ಬೆಳಕಾಗಿ ಹೊಳೆಯುದಿರುವದೇ? ಅಂಥ ಒಂದು ಬೆಳಕು ಬೆಳಗಿ ಬಂದರುಹಿನ ಪರಿಣಾಮವಿದು.

“ ತಂದೆ ನೀ ಕಣ್ತೆರದರಿಂದಿಗರುಣೋದವು
ಮುಂದೆ ಸೂರ್ಯೋದಯದ ಚಿಂತೆಯಿಲ್ಲ
ಅನುಭವ ಆಧ್ಯಾತ್ಮಗಳು ಒಂದಾಗಿ ನಿಂತ
ಪರಿಣಾಮವನಿಲ್ಲಿ ಗುರ್ತಿಸ ಬಹುದು
ನಿಶ್ಯಬ್ದ ! ನಿಶ್ಯಬ್ದ!! ಶಬ್ದದಾಚೆಗಿನ ಶಬ್ದ!!!
ನಿಶ್ಯಬ್ದ ವಿದ್ದರೂ ಮೌನವಲ್ಲ
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮ ವೆಂದರೂ ಶೂನ್ಯವಲ್ಲ.

“ ನನ್ನನಲ್ಲ ”ವೆಂಬ ತಮ್ಮ ಅನುಭಾವದ ಗೀತ ಸಂಕಲನದ ಹೆಸರಿನಲ್ಲಿಯೇ ಮಧುರ ಚೆನ್ನರು “ಅನುಭವದ ಅನುಭಾವಗಳ” ದೃಷ್ಟಿಯನ್ನು ಸೂಕ್ಷ್ಮವಾಗಿ ಸೂಚಿಸಿದ್ದಾರೆ. ನನ್ನನಲ್ಲ ಎಂಬ ಪ್ರಯೋಗಕ್ಕೆ ಬಸವಣ್ಣನವರ ವಚನದಲ್ಲಿ ತಳಹದಿಯುಂಟು.

"ಎಲ್ಲರ ಗಂಡರ ಪರಿಯಂತಲ್ಲನೋಡವ್ವಾ ನನ್ನ ನಲ್ಲ |
ಸುಳಿಯಲಿಲ್ಲ. ಸುಳಿದು ಶೃಂಗಾರವ ಮಾಡಲಿಲ್ಲ |
ತನ್ನೊಳಗೇ ಎನ್ನ ಬಚ್ಚಿಟ್ಟನಲ್ಲಾ" ||

ನಲ್ಲ ಎಂಬುದು ಬಸವಣ್ಣನವರು ಮನದಾಣ್ಮ ಎಂಬ ಅರ್ಥದಲ್ಲಿ ಬಳಸಿದ ಸಹಜ, ಸುಂದರ, ಸರಳ, ಮಧುರ ಅಚ್ಚ ಗನ್ನಡ ಶಬ್ದ. ಶಬ್ದ ಸರಳವಾದರೂ ಅರ್ಥದಲ್ಲಿ ಅದು ಹಿರಿದು ನನ್ನನಲ್ಲ ಎಂಬ ಪದದಲ್ಲಂತು ಅದು ಇನ್ನು ಮೃದು ಮಧುರವಾಗಿ ಪರಿಣಮಿಸಿದೆ.

ಮೇಲೆ ಕಾಣಿಸಿದ ಬಸವಣ್ಣನವರ ವಚನ ಆಧ್ಯಾತ್ಮವನ್ನು ತನ್ನೊಳಗೆ ಅಳವಡಿಸಿಕೊಂಡಿದೆ "ತನ್ನೊಳಗೆ ಎನ್ನಬಯಬಿಟ್ಟನಲ್ಲ'' ಎಂಬ ಮಾತು ಜೀವಾತ್ಮ ಪರಮಾತ್ಮಗಳ ಒಂದು ತನವನ್ನು ರೂಪಿಸಿ ದೀಪಿಸಿದೆ.

ವಚನಗಳು ಆದರಲ್ಲಿಯೂ, ಬಸವಣ್ಣನವರ ವಚನಗಳ ಸದ್ಭಾವದ ಹೊನಲು ಈ ಕವಿಯತ್ರಿ ಸುಳಿದು ಬಂದುದು ಸಹಜವೆ. ಈ ಬಗೆಗೆ ಮಧುರ ಚೆನ್ನರು ತಮ್ಮ ಕಾವ್ಯದ ಮೊದಲ ಪದ್ಯದಲ್ಲಿಯೇ ನೆನಹಿನ ನುಡಿಯನ್ನು ಹೀಗೆ ನುಡಿದುದುಂಟು.

"ಏನಮ್ಮ ಪ್ರತಿಭೆ ನೀನೇಸುದಿನವೆಲ್ಲಿದ್ದಿ ?
ಮತ್ತೆ ಹೇಗಿಲ್ಲಿಗೆ ಮರಳಿ ಬಂದೆ
ದಾನಮ್ಮ ನೀನೊಲಿಯೆ ಕೊರಡು ಕೊನರುವುದೆಂದೆ
ಬರಡು ಹಯನಾಗಲು ಬಲ್ಲುದೆಂದೆ

ಇಲ್ಲಿ ಈ ಪದ್ಯದ ಕೊನೆಯ ಎರಡು ಚರಣಗಳು ಬಸವಣ್ಣನವರ ವಚನ ಒಂದನ್ನು ನಮ್ಮ ಗಮನಕ್ಕೆ ತರುತ್ತವೆ. ಇಷ್ಟೇ ಅಲ್ಲ ಮಧುರ ಚೆನ್ನರು ಮನವರಿಕೆ ಮಾಡಿಕೊಂಡ ಶರಣರ ಅನುಭಾವದ ದಾರಿಯಲ್ಲಿ ನಡೆದವರು" ಎಂಬುದನ್ನು ತಾವೇ ಸುಸ್ಪಷ್ಟಗೊಳಿಸಿದ್ದಾರೆ. ''ಶರಣರ ಸವಿನುಡಿಗಳು" ಎಂಬ ವಚನ-ಕವನ ಒಂದರಲ್ಲಿ ವಚನ ಕವನದ ನಾಲ್ಕು ಪದ್ಯಗಳಲ್ಲಿ ಮೊದಲ ಪದ್ಯವನ್ನು ಈ ಬಗೆಗೆ ಇಲ್ಲಿ ಉದ್ಧರಿಸಿದರೆ ಸಾಕು.

'' ಮರದೊಳಗೆ ಬೆಂಕಿಯನು | ಉರಿಯದಂತಿರಿಸಿದ್ದೆ
ಬಿತ್ತಿನೊಳು ಗಿಡವನ್ನು | ಗೊತ್ತಾಗದಂತೆ ಇಟ್ಟೆ
ಸೊಂಪಿನಾ ತುಪ್ಪವನು | ಕಂಪಿಲ್ಲದಂದದಲಿ
ನೊರೆವಾಲೊಳಗಿರಿಸಿರುವ | ದೊರೆಯೆ ದೊರೆ ನೀನಾರು ?

ಅದೇನೆ ಇರಲಿ ನನ್ನನಲ್ಲ ಕಾವ್ಯದ ಕೊನೆಯಲ್ಲಿ ಭಾವ-ಅನುಭವ ಪೂರ್ಣವಾದ ಮಾತುಗಳೆ ಸೂಚಿಸು ವಂತಿವೆ ನೋಡಿ

ಭಾವ ಬುದ್ಧಿಗಳೆರಡೆ ತಿಳುವಳಿಕೆಗಾಧಾರ
ಭಾವಕ್ಕೆ ಬುದ್ಧಿಯೆ ಬಾಹ್ಯ ನೇತ್ರ
ಭಾವಕ್ಕೊಲಿಯದ ಬುದ್ಧಿ, ಬುದ್ಧಿಗೊಲಿಯದ ಭಾವ
ಇಲ್ಲೀ ಕಾಣಯ್ಯ ಸಂದೇಹ ಸೂತ್ರ.

ಭಾವ ಬುದ್ಧಿಗಳು ಒಂದಕ್ಕೆ ಒಂದು ಹೊಂದಿಕೊಂಡು ಸಾಗಬೇಕೆಂಬುದು ಇಲ್ಲಿಯ ಮನೀಷೆ.

ಈ ಬಗೆಗೆ 'ಕುವೆಂಪು' ಅವರು 'ಬುದ್ಧಿ ಭಾವಗಳ ವಿದ್ಯುದಾಲಿಂಗನ ಎಂದು ಒಂದು ಕಡೆಗೆ ಪದಪ್ರಯೋಗ ಮಾಡಿದ್ದನ್ನು ಇಲ್ಲಿ ನೆನಪಿಗೆ ತರಬಹುದು. ಸಾಧನೆಯ ದಾರಿಯಲ್ಲಿ ಕವಿ ಕಂಡ ಸಿದ್ಧಿಯನ್ನು 'ನನ್ನನಲ್ಲ' ಕಾವ್ಯದ ಕೆಳಗಣ ಪದ್ಯಗಳು ಕನ್ನಡಿಸುವಂತಿವೆ.

ಹೊರಗೆ ತನುಮನ ಕೂಡಿ ಪಲವು ದಿನವಾಯ್ತು
ಆತ್ಮಾತ್ಮಗಳ ಮುಖವು ಕೂಡೀತೀಗ
ಒರತೆಯ ನೀರಿಗೂ ಗರುಕೆಯ ಬೇರಿಗೂ
ಮೇಳು ಕೂಡಿತು ನನಗೆ ನಿನಗೆ ಹೀಗೆ

ಜನರಾಡಿಕೊಳಬಹುದು ನನಗೂ ನಿನಗೂ ಕೂಡಿ
ಅವರೇನು ಬಲ್ಲರೋ ಒಳನಿಧಾನ
ನನಗೆ ನೀನತಿ ಮಧುರ
ನಿನಗೆ ನಾ ಬಲು ಚೆನ್ನ
ಹೀಗಂತಲೇ ನಾನು ಮಧುರ ಚೆನ್ನ

ಮಧುರ ಚೆನ್ನರು ತಿಳಿಗನ್ನಡದಲ್ಲಿ ಸರಳ ಹಾಗೂ ಸುಂದರ ರೀತಿಯಲ್ಲಿ ರಚಿಸಿದ ಈ ಕಾವ್ಯದ ರಸರುಚಿರಾಗ ಪರಾಗಗಳ. ಪರಿಯನ್ನು ಇಂತೆಂದು ಉಪಮಿಸುವುದು ಹೇಗೆ ಅವರವರ ನಿಲುಮೆಗನುಸಾರವಾಗಿ ಅವರವರು ಈ ಕಾವ್ಯದ ರಸ–ರುಚಿಗಳನ್ನು ಸವಿಯಬಹುದಾಗಿದೆ. ಈ ಕಾವ್ಯದ ಸೌರಭವನ್ನು ಸವಿಯ ಬಲ್ಲವರು ಸಂತೃಪ್ತಿ ಪಡೆದರೆ ಅದು ಸಹಜವೇ.

**ಮಧುರ ಚೆನ್ನರು ಬಳಸಿದ ಛಂದಸ್ಸು :**

ಮಧುರ ಚೆನ್ನರು ಬಳಸಿದ ಛಂದಸ್ಸನ್ನು ಕುರಿತು ಇಲ್ಲಿ ಎರಡು .ಮಾತು ಹೇಳಬೇಕು. ಅವರ ಗೀತೆಗಳಲ್ಲಿ ಮುಕ್ಕಾಲು ಮೂರು ವೀಸ ಪಾಲು ನುಡಿದು ಲಯ ಲಲಿತ ಲಯ ಮಧುರ ಚೆನ್ನರ ಚಿತ್ತ ವೃತ್ತಿಗೆ ಚೆನ್ನಾಗಿ ಹೊಂದಿಕೊಂಡ ಲಯ ಅದು 'ನನ್ನನಲ್ಲ' 'ಮಧುರ ಗೀತ, 'ಕೆಸರಿನೊಳಗಿನ ಕಮಲ' 'ಶಾರದೆಗೆ' 'ಶೃತಿ ಅಶೃತಿ ವೀನಾರಾವ' ಮೌನ ಕೋಕಿಲೆಗೆ ಎಲ್ಲವೂ ಲಲಿತ ಲಯದ ಛಂದೋ ಬಂಧು

ಗಳು, ಅವುಗಳಲ್ಲಿ 'ಶಾರದೆ' ಎಂಬ ಕವಿತೆ ಅರ್ಧ ವಾರ್ಧಿಕ ಷಟ್‌ಪದಿಯ ರೂಪ ದಲ್ಲಿದೆ. ಸರಸ್ವತಿಯು, ಶಾರದೆ, ಭಾರತಿ, ರಸವತಿ, ನುಡಿವೆಣ್ಣೆ, ಕವಿ ಮಧುರಕರ ನಾಥಾಯ, ಚಿತ್ರಕಾಯೆ ಎಂದು ಕವಿ ಶಾರದೆಗೆ ರಸರಾಗದೊಡನೆ ನಮನಗಳನ್ನು ಸಲ್ಲಿಸಿದ್ದಾನೆ.

ಶ್ರುತ–ಅಶ್ರುತ ವೀನಾರಾವ ಮೌನ ಕೋಕಿಲೆಗೆ ಈ ಗೀತೆಗಳು ಲಲಿತ ಗತಿಯ ಇನ್ನೂ ಬೇರೆ ಪ್ರಬೇಧಗಳಲ್ಲಿ ನೀನಾದ ಗೊಂಡಿದೆ. ಇವೆಲ್ಲವೂಗಳಲ್ಲಿ ಕವಿಯ ನಾದ-ಪ್ರಜ್ಞೆ ಅಭಿವ್ಯಕ್ತವಾಗಿದೆ. ಮಂದಾನಿಲಯದಲ್ಲಿ ಸ್ಪಂದಿಸಿದ ಕವಿತೆಗಳಲ್ಲಿ ರೋಹಿಣಿ, ನೋಂಪಿ, ಸಂಧ್ಯಾ, ಉಷಾದೇವಿ ಮಾವಿನಗೊಲ್ಲೆ-ಇವುಗಳನ್ನು ಹೆಸರಿಸ ಬಹುದು ರಮ್ಯ ಸೃಷ್ಟಿ ಕೊಳಗಳ ನಾಡಿನೊಳಗಿಂದ ಒಂದಾದ 'ಪ್ರಕೃತಿ ಗೀತೆ'ಗಳಲ್ಲಿ ಉತ್ಸಾಹ ಲಯವು ಮೂರ್ನಾಲ್ಕು ವಿವಿಧ ಗತಿಗಳಲ್ಲಿ ಶೃತಿಗೂಡಿದೆ ಕನ್ನಡ ಛಂದದ ಗಂಗೋತ್ರಿಯಾದ ತ್ರಿಪದಿಯಲ್ಲಿ ಕೂಡಾ ಮಧುರ ಚೆನ್ನರು ತಮ್ಮ ವಿಶಿಷ್ಟ ಗತಿ ಯನ್ನು ತೋರಿದ್ದಾರೆ. "ದೇವತಾ ಪೃಥ್ವಿ" ಎಲ್ಲಿ ಅಂತೂ ಈ ಕವಿ ತ್ರಿಪದಿಯನ್ನ ತುಂಬ ಹದುಳವಾಗಿ ಬಳಸಿದ್ದಾರೆ. ಒಟ್ಟನಲ್ಲಿ ಮಧುಠ ಚೆನ್ನರ ಕಾವ್ಯ ಮಧುರ ನಾದ ಪ್ರವಾಹ.

ಶಬ್ದ ಶಬ್ದದಲ್ಲಿ ಭಾವ ಭಾವದ ನಿರ್ಭರತೆಯನ್ನು ಅರ್ಥ ಅರ್ಥದ ಸ್ವಾರಸ್ಯ ವನ್ನು ತುಂಬಿದ್ದಾರೆ ಈ ಮಧುರ ಕವಿ.

> ನಗೆಯ ನೊರೆಯಲಿ ಹಗಲ ಹೆಣೆದು
> ಹೊತ್ತಿಹ ಹೊಳೆಹೆ
> ಮುಗಿಲಲ್ಲಿ ಮುತ್ತುಗಳ ಮೂಡಿಸುವ ಮಂತ್ರವೆ
> ಜಗಕೆ ಕಣ್ಗಳ ಕೊಟ್ಟ ಕಲನಾದ ಕೌಮುದಿಯೆ
> ಶಾರದೆಗೆ ಶರಣು ಶರಣು"

ಎಂದು ಶಾರದೆಯನ್ನು ನೆನೆದ ಈ ಕವಿ ತಮ್ಮ ವೈಶಿಷ್ಟ ಪೂರ್ಣವಾದ ಶೈಲಿ ಯಲ್ಲಿ ತುಂಬಿ ತುಂಬಿ ತುಳುಕುವನಾದ ಲಹರಿಯಲ್ಲಿ ಉತ್ಕೃಷ್ಟವಾದ ಭಾವ ಗೀತೆ ಗಳನ್ನು ವಿರಚಿಸಿದ ಈ ಕವಿಗೆ ಯಾರು ತಾನೆ ಶರಣು ಶರಣು ಎನ್ನರು.

# ಅನುಭಾವ - ಒಂದು ಚಿಂತನೆ

—ಪ್ರೊ. ದೇವೇಂದ್ರಕುಮಾರ ಹಕ್ಕಾರಿ

'ಅನುಭಾವವೆಂಬುದು ಅಂತರಂಗದ ರತ್ನ' ಎಂದು ಸಾರಿದ ಶರಣರು ಅದರ ವಾಸ್ತವ ನಿದರ್ಶನ ಕೊಡುವಾಗ 'ಅದು ಶಿಶು ಕಂಡ ಕನಸಿನ ಹಾಗೆ, ಮೂಗ ಸವಿದ ಸಕ್ಕರೆಯಂತೆ' ಎಂದು ಮೌನ ತಾಳುತ್ತಾರೆ. ಅನುಭಾವ ಮಾತಿನ ಮಾತಿಗೆ, ಅರ್ಥದ ಪದರಿಗೆ ಸಿಲುಕುವುದೂ ಅಲ್ಲ, ಸಿಲುಕುವುದೂ ಇಲ್ಲ. ವ್ಯಕ್ತಿತ್ವದ ವಿಕಾಸದಲ್ಲಿ ಅಂತರಂಗದ ಪರಿಶೋಧನೆ, ತನ್ನನ್ನು ತಾನು ಅರಿತುಕೊಳ್ಳುವುದು ವ್ಯಕ್ತಿಗೆ ಆಗತ್ಯ. ಸ್ಟೋಯಿಕ್ ಪಂಥದ ಅನುಭಾವಿ ಮಾರ್ಕ್ಸ್ ಅರೀಲಿಯಸ್ 'ಸ್ವಲ್ಪ ತಾಳು ನಿನ್ನ ಅಂತರಂಗದಲ್ಲಿ ಇಣುಕಿ ನೋಡು' ಎಂದು ಹೇಳುತ್ತಾನೆ. ಸ್ವವಿಮರ್ಶೆಯಿಂದ ಸ್ವಪ್ರಜ್ಞೆ – ಅದರ ಮೂಲಕ ಆತ್ಮಪ್ರಜ್ಞೆ ಹೀಗೆ ಈ ದಾರಿ ಮುಂದುವರೆಯುತ್ತದೆ.

ಆಕಾಶಕಾಯದ ಕ್ಷೀರಪಥದಲ್ಲಿ ಮುನ್ನಡೆಯುತ್ತಿರುವ ಮನುಷ್ಯ ಇಂದು ಅನೇಕ ಅದ್ಭುತಗಳನ್ನೂ ಸೃಷ್ಟಿಸಿದ್ದಾನೆ. ಸೃಷ್ಟಿಯ ರಹಸ್ಯಗಳನ್ನು ಭೇದಿಸಿ, ವಿಜ್ಞಾನ ಸಾಧನೆಯ ತೀಕ್ಷ್ಣ ಹಿಡಿತದಲ್ಲಿದ್ದಾನೆ. ಕಡಲ ಕೊರೆದು ತೈಲ ನಿಕ್ಷೇಪಗಳನ್ನು ಕಂಡಿದ್ದಾನೆ. ಮುಗಿಲನ್ನೇರಿ ವಿಶ್ವಕಾಯಕವನ್ನೂ ಮುಟ್ಟಿದ್ದಾನೆ. ಅಂತರಿಕ್ಷಯಾನ, ಕ್ಷಿಪಣಿಗಳ ತುರಾತುರಿ ಮುಂತಾದವುಗಳ ಮೂಲಕ ಇಡೀ ವಿಶ್ವ ತುಂಬ ಸಂಕೋಚನಗೊಳ್ಳುತ್ತಿದೆ. ಇಷ್ಟಾದರೂ ಮಹಾ ಅನುಭವಿಗಳ 'ಎಲ್ಲನರಿದು ಫಲವೇನಯ್ಯ ತನ್ನ ತಾನರಿಯಬೇಕಲ್ಲದೆ' ಎನ್ನುವ ಪ್ರಶ್ನೆ ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ.

ಭೌತಿಕ–ಸಮೃದ್ಧಿ–ಸಾಧನೆಯ ಭರದಲ್ಲಿ ಮಾನವ ತನ್ನನ್ನು ತಾನು ಮರೆತನೇ ಅನ್ನಿಸುತ್ತದೆ. ಅಥವಾ ಅದರ ಝಗಝಗಿಸುವ ಹೊಳಪಿನಲ್ಲಿ ಆತ್ಮವಿಸ್ಮೃತಿ ಉಂಟಾಗಿರಬಹುದೇ ? ವ್ಯಕ್ತಿ ತನ್ನ ಸ್ವರೂಪದ ಎಚ್ಚರದಲ್ಲಿ ಆ ಅರಿವಿನ ಬೆಳಕಿನಲ್ಲಿ ತನ್ನ ಜೀವನ ಕ್ರಿಯೆಗಳನ್ನು ನಿರ್ವಹಿಸದೆ ವಿಶ್ವದ ಅಗಣಿತ ವಸ್ತು ಪ್ರಪಂಚದ ಜ್ಞಾನವನ್ನು ಮಾತ್ರ ಅರಸುತ್ತ ಹೊರಟ ಹಾಗಿದೆ. 'ತನ್ನಿರವು' ಆತನಿಂದ ಹೊಳಾಗಿ ಪರಮಗುರಿ ಮರೆಮಾಚಿದೆ ಅರಿವು–ಮರವೆಗಳ ಮಂಜುಮುಸುಕಿದ ಹಾದಿಯಲ್ಲಿ

ಅತಿರಭಸದವೇಗದಿಂದ ಹೊರಟ ಆತನಿಗೆ ತನ್ನನ್ನು ತಾನು ಅರಿತುಕೊಳ್ಳುವ ಪುರುಸೊತ್ತು ಇಲ್ಲದಾಗಿದೆ. ಅಷ್ಟೇ ಅಲ್ಲ ಸೃಷ್ಟಿಯ ಅದ್ಭುತ ಶಕ್ತಿಗಳಿಂದಾಗಿ ಆತನಲ್ಲಿ ಸ್ಪರ್ಧೆಯ ಮನೋಭಾವ ಮತ್ತು ಭೀಕರ ಪರಿಸರ ಉಂಟಾಗಿವೆ ಪರಸ್ಪರ ಮಾರಕ ರೀತಿ ನೀತಿ ರೂಪುಗೊಳ್ಳುತ್ತಿವೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಮಾನವತೆಯನ್ನು ಹೂಳುವ ದೈತ್ಯ, ಭೀಭತ್ಸ ಯತ್ನಗಳೂ ಕಗ್ಗೊಲೆ, ಶೋಷಣೆಗಳೂ ಪ್ರಪಂಚದ ಕೆಲವು ಭಾಗದಲ್ಲಿ ನಡೆದೇ ಇವೆ ಜೀವನ ಮೌಲ್ಯ ಮಾನವತಾ ವಾದಗಳು ಕೇವಲ ಬರಡುಮಾತುಗಳಾಗಿ ಮಾನವ ಜನಾಂಗವನ್ನು ಧರ್ಮಶೂನ್ಯಸ್ಥಿತಿಗೆ ಕೊಂಡೊಯ್ಯುವ ಹೊಂಚು ಯಾವುದೋ ಒಂದು ಪಾತಳಿಯಲ್ಲಿ ಹಾತೊರೆಯುತ್ತಿರುವ ಹಾಗಿದೆ. ಇದಕ್ಕೆಲ್ಲ ಕಾರಣ ಒಂದೆ. ಮನುಷ್ಯ ಆತ್ಮದ ಅರಿವಗೆ ಆಗತ್ಯವಾದ ಧರ್ಮ ಮಾರ್ಗ, ಭಕ್ತಿಪಥದಿಂದ ದೂರಸರಿದು, ಉನ್ನತ ಮೌಲ್ಯಗಳಿಂದ ಕಳಚಿಕೊಂಡಿದ್ದಾನೆ. ಎಷ್ಟು ಶಾಸ್ತ್ರ ಅರಿತರೇನು ? ಎಷ್ಟು ವೈಜ್ಞಾನಿಕ ಸಂಶೋಧನೆ ಮಾಡಿದರೇನು ? ಮಾನವ ಸಮುದಾಯಗಳು ಮಾನವರು ಪರಸ್ಪರ ಪ್ರೀತಿ ವಿಶ್ವಾಸಗಳಿಂದ ಕೂಡಿ ನೆಮ್ಮದಿಯಿಂದ ಬಾಳದೆ ಹೋದರೆ ?

ಜೀವನವನ್ನು ಅಖಂಡವಾಗಿ ಪರಿವೀಕ್ಷಿಸಿ ಇಡಿಯಾಗಿ ಬದುಕಿದ ಶರಣರು, ಸಂತರು ಸ್ವಾನುಭಾವದಿಂದ ಸಾಧನೆಯಿಂದ ಮಾನವಕೋಟಿಯ ಕಲ್ಯಾಣ ಬಯಸಿದವರು ಭಕ್ತಿಯ ಅನುಭಾವದ ಹಾದಿಯನ್ನು ತೆರೆದುಕೊಟ್ಟವರು. ಅಂತರಂಗದ ರತ್ನ ಪ್ರಕಾಶದ ಕಡೆಗೆ ನಮ್ಮ ಗಮನ ಸೆಳೆದುದಷ್ಟೇ ಅಲ್ಲ ಆರುನಾನೆಂದು ವಿಚಾರಿಸು ಎಂದುಕೇಳಿ ಆಂತರಿಕ ಚಿಂತನೆಗೆ ಅಣಿಗೊಳಿಸಿದರು.

ಭಕ್ತನ ಅನುಭಾವಿಯ ಹಾದಿ ಸುಲಭಸುಗಮ ಸಾಧ್ಯವಲ್ಲ. ಅದು ಜಟಿಲ ಮತ್ತು ಕ್ಲಿಷ್ಟ. ಕ್ಷಣ ಕ್ಷಣಕ್ಕೆ ಹೋಗುತ್ತಲೂ ಕೊರೆಯುತ್ತದೆ. ಬರುತ್ತಲೂ ಕೊರೆಯುತ್ತದೆ. ಅವಧಾನ, ನಿತ್ಯಾವಧಾನ ಅನುಭಾವದ ಉಸಿರಾದರೆ, ತನ್ನ ತಾನು ಸಾಧಿಸುವುದೇ ಅನುಭಾವಿಯಗುರಿ.

'ನಾನು ನೀನು, ನನ್ನದು ಎನ್ನುವ ನುಡಿ ವ್ಯಕ್ತಿಯನ್ನು ಒಂದು ಸೀಮಿತ ಸಂಕುಚಿತ ನೆಲೆಯಲ್ಲಿ ಕಟ್ಟುತ್ತವೆ. ನಾನು ಬದುಕುತ್ತೇನೆ ನೀನೂ ಬದುಕು ನಾನು ಎಲ್ಲರಿಗೂ ಬೇಕು, ಎಲ್ಲವರೂ ನನ್ನವರೇ' ಎನ್ನುವುದೇ ಹೊರತು 'ಎಲ್ಲದೂ ನನ್ನದು ಎಲ್ಲರೂ ನನಗಾಗಿ' ಎನ್ನುವುದಲ್ಲ.

ಸ್ವಾರ್ಥ ಸಮರ್ಪಣೆಯಿಂದ ಮೊದಲುಗೊಂಡು ಅಹಂಕಾರ ನಿರಸನವಾಗಿ ಪ್ರೀತಿ ವಾತ್ಸಲ್ಯಗಳ ನವುರಾದ ಪರಿಮಳ ಹೃದಯದಲ್ಲಿ ಸೂಸಿದಾಗ ಅದು ಭಕ್ತಿ ಅನುಭಾವದ ಪ್ರಥಮ ಸೋಪಾನ.

ಅನುಭಾವ ವಿಶೇಷತಃ ಚಿತ್ತದ ಸಾತ್ವಿಕ ಸಂಚಾಲಕ ಶಕ್ತಿ ಮಾನವನ, ಪ್ರಾಪಂಚಿಕ ಸಂಕುಚಿತ ಸೀಮೆಗಳನ್ನು ಮೀರಿ, ಆತ್ಮಜ್ಞಾನಕ್ಕಾಗಿ, ವ್ಯಕ್ತಿಯಲ್ಲಿ–ಪರಮಸತ್ಯದ ಆವಿಷ್ಕಾರಕ್ಕಾಗಿ, ಆತ ತನ್ನ ಸಮಸ್ತ ಕ್ರಿಯೆಗಳನ್ನು ಹಮ್ಮುವಂತೆ

ಪ್ರೇರೇಪಿಸುತ್ತದೆ; ನಿಜದ ನಿಲವಿನ ಅರಿವಿಗಾಗಿ ತನ್ನನ್ನು ತಾನು ಸಮರ್ಪಿಸಿಕೊಳ್ಳು ವಂತೆ ಮಾಡುತ್ತದೆ ಕ್ರಿಯೆಗಳು ಕೇವಲ ಸ್ವಾರ್ಥಕ್ಕಾಗಿ ಅಲ್ಲ; ಅಥವಾ ಬರೀ ಪ್ರಾಪಂಚಿಕ ಭೋಗ ವಿಲಾಸಗಳ ಭ್ರಾಂತಿಗಾಗಿಯೂ ಅಲ್ಲ; ಸಾಮಾಜಿಕ ಚಿಂತನೆ ಮಾನವಕಲ್ಯಾಣ, ಪರಿಶುದ್ಧ ಪ್ರೇಮಗಳ ಅಭಿವ್ಯಕ್ತಿಯೂ ಆತನ ಕ್ರಿಯೆಗಳ ಮೂಲಕ ಉಂಟಾಗಿ ಬದುಕಿನ ಪರಿಸರದಲ್ಲಿ ಶುಚಿ, ಸದಭಿರುಚಿಗಳು ಹೊಮ್ಮಬೇಕು.

ಅನುಭಾವಿಯ ಕ್ರಿಯೆಗಳಿಗೆ ಚೇಷ್ಟಾಶಕ್ತಿ ಆವನ ಹೃದಯ; ಅದು ಮಮತೆ ವಾತ್ಸಲ್ಯಗಳ ನೆಲೆ; ಕೋಮಲ ಮಧುರಭಾವನೆಗಳ ಸೆಲೆ ವ್ಯಕ್ತಿಯ ಅಸ್ತಿತ್ತ್ವದ ಅತ್ಯಂತ ಆಂತರಿಕ ನಿಲವು ಈ ಒಂದು ಚಿಂತನಾಂಶದ ಅನುಭಾವಿಯು ಕೈಕೊಳ್ಳುವ ಕ್ರಿಯೆಗಳಲ್ಲಿ ಸಹಜ ಮೂಡುವುದರಿಂದ ವ್ಯಕ್ತಿ ವ್ಯಕ್ತ್ಯತೀತ ಶಕ್ತಿಯಾಗಿ ಪಲ್ಲಟ್ಟ ಗೊಳ್ಳುತ್ತಾನೆ, ಪರಿವರ್ತಿತನಾಗುತ್ತಾನೆ. ನಿತ್ಯ ನಿತ್ಯ ಪ್ರಾಯಶ್ಚಿತ್ತ 'ಸ್ಥಿತಿಯನ್ನು ಮೀರಿ ಅರಳುತ್ತಾನೆ ಅನುಭಾವಿಯ ವಿಕಸಿತ ಹೃದಯ ಅತೀತವಸ್ತುವಿಗೆ ಸಮ್ಮುಖ ವಾಗುತ್ತದೆ. ಅಸ್ತಿತ್ತ್ವ ಸಮಸ್ತದ ಶಕ್ತಿ ಮತ್ತು ತೇಜಸ್ಸು 'ತಾನು' ಎನ್ನುವ ಅನುಭವ ಆತನಿಗೆ ಉಕ್ಕುತ್ತದೆ. ಆತನ ಆತ್ಮಕ್ಕೆ ಹಂತಹಂತವಾಗಿ ಅನಂತತೆಯ ಹಸಿವು. ಸ್ವಾರ್ಥದ ಸೀಮೆಗಳು ಕಳಚಿ,ಅತೀಂದ್ರಿಯ ಪ್ರಜ್ಞೆ ಆತನಲ್ಲಿ ಸ್ಫುರಿಸಿ ಆತ ಪರಮ ಶಕ್ತಿಯ ಅತೀತ ಚೈತನ್ಯದ ಸೌರಮಂಡಲವಾಗುತ್ತಾನೆ. ಲೌಕಿಕ ಆತಂಕ ಸಂಕಟಗಳನ್ನು ಸಹಿಸಬಲ್ಲ, ಸಂಘರ್ಷಗಳನ್ನು ಎದುರಿಸಿ ಜೀರ್ಣಿಸಿಕೊಳ್ಳ ಬಲ್ಲ ಉನ್ಮಾದ ವಿವಶತೆಗಳನ್ನು ನಿಯಂತ್ರಿಸಿಕೊಳ್ಳಬಲ್ಲ, ಉದಾತ್ತ ಚಿತ್ತ ಆತನಲ್ಲಿ ಆವಿಷ್ಕಾರಗೊಳ್ಳುತ್ತದೆ. ಮುಗಿಲು ಹರಿದು ಬಿದ್ದರೆ ಮಜ್ಜನವೆಂಬೆ' ಎನ್ನುವ ಧೀರೋದಾತ್ತತೆಯಿಂದ ಸ್ಫೂರ್ತಿಗೊಂಡ ಪ್ರಾಣ 'ಶಿರಹರಿದು ಬಿದ್ದರೆ ನಿಮಗೆ ಅರ್ಪಿತವೆಂಬೆ' ಎನ್ನುವ ಅಚಲತೆಯನ್ನು ಹೊಂದುತ್ತದೆ. ಆದ್ದರಿಂದ ಅನಂತ ಸತ್ಯದ ಸಾಹಸಮಯ ಅನ್ವೇಷಣೆ ಅನುಭಾವದ ಹಾದಿಯಾಗುತ್ತದೆ. ಅನುಭಾವ ಎನ್ನುವುದು ಪರಮಸತ್ಯದ ವಿಜ್ಞಾನ, ನಿರಪೇಕ್ಷ ಚೈತನ್ಯದ ದಿವ್ಯಸಾಮರಸ್ಯದ ರಹಸ್ಯ "Not to known about, but to be is the mark."

ವಸ್ತು ಮತ್ತು ಗುರಿ ಒಂದಾಗುವ ಈ ಅಮೃತ ಪಥದಲ್ಲಿ ಹುಟ್ಟಿಲ್ಲದ ಮಹಾ ಬೆಳಗು, ಆ ಮಹಾಬೆಳಗಿನ ನಿಬ್ಬೆರಗಿನಲ್ಲಿ ಜೀವಾತ್ಮ ಪರಮಾತ್ಮ 'ಶರಣಸತಿ ಲಿಂಗ ಪತಿ' ಏಕಕ.

"ಮನ ಮನವನೊಳಕೊಂಡ ಘನ ಘನವನೆಂತೆಂಬೆ ?<br>
ತನ್ನಲ್ಲಿ ತಾನೆ ಆಯಿತ್ತು....ಅಂತು ಇಂತು ಎನಲಿಲ್ಲ"<br>
'ಲಿಂಗವೆನ್ನೇ ಲಿಂಗೈಕ್ಯವೆನ್ನೆ ಏನೂ ಎನ್ನೆ' ಎನ್ನುವ ಘನವತಾನೆ<br>
ಪರಮ ಚೈತನ್ಯವೇ ತಾನಾದ ಸ್ವಸ್ವರೂಪದರ್ಶನವೇ

ಅನುಭಾವಿಯ ಅಂತಿಮಗುರಿ ಅರಿವಿನ ಈ ಬೆಳಕಿನಲ್ಲಿ ನಮ್ಮ ಇಂದಿನ ಸಾಧನೆ ಗಳು ನಿರ್ದೇಶಿತವಾದಾಗಲೇ ಮಾನವ ಕಲ್ಯಾಣ.

# ಆತ್ಮ ಸಾಕ್ಷಾತ್ಕಾರ

ಪ್ರೊ. ಬಿ. ಬಿ. ಮಹೀಶವಾಡಿ.

ನೀನೊಲಿದರೆ ಕೊರಡು ಕೊನರುವುದಯ್ಯ, ನೀನೊಲಿದರೆ ಬರಡು ಹಯನಹುದಯ್ಯ–ಎಂದು ಬಸವಣ್ಣನವರ ಅನುಭಾವದ ನುಡಿಯಿದೆ. ಅಂದರೆ ದೈವಕೃಪೆಯಿಂದ ಅಸಾಧ್ಯವೂ ಕೂಡ ಸಾಧ್ಯವಾಗುತ್ತದೆ. ಒಲುಮೆ, ಪ್ರೀತಿ, ದೈವಕೃಪೆ, ವರದಾನವೆಂಬುದು ಈ ಜೀವನದಲ್ಲಿ ಅಮೃತ ಸ್ವರೂಪದ್ದು. ಆ ಸ್ಪರ್ಶದಿಂದ, ದರ್ಶನವಾಗಬೇಕಾದುದು ಆಗುತ್ತದೆ; ದೊರೆಯಬೇಕಾದುದು ದೊರೆಯುತ್ತದೆ.

ಅದನ್ನು ಹೊಂದುವ ಬಗೆ ಹೇಗೆ? ಭಕ್ತಿ ಇಲ್ಲವೆ ಜ್ಞಾನ ಮಾರ್ಗದಿಂದ ಅದನ್ನು ಹೊಂದಬಹುದು. ಈ ದಿಸೆಯಲ್ಲಿ ವೀರವಾಣಿ ಹೊಸ ಬೆಳಕನ್ನು ನೀಡುತ್ತಿದೆ. ಈ ಲೋಕ ಚಿರಂತನವಾದುದು, ಸತ್ಯವಾದುದು, ಸ್ವತಂತ್ರವಾದುದು, ಸದಾಕಾಲ ಇರುವಂತಹದು. ಅದನ್ನು ಯಾರೂ ಸೃಷ್ಟಿಸಿಲ್ಲ, ರಕ್ಷಿಸಿಲ್ಲ ಸಂಹರಿಸಿಲ್ಲ. ಸೃಷ್ಟಿ-ಸ್ಥಿತಿ-ಲಯಾದಿಗಳಿಗೆ ಎಂದೂ ಅದು ಒಳಗಾಗದು. ಜೀವ–ಅಜೀವ (ಪುದ್ಗಲ)–ಧರ್ಮ–ಅಧರ್ಮ–ಕಾಲ–ಆಕಾಶವೆಂಬ ಷಡ್‌ದ್ರವ್ಯದಿಂದ ಲೋಕವಾಗಿದೆ. ಹುಟ್ಟು-ಬದುಕು-ಸಾವುಗಳ ಲಕ್ಷಣ ಮೇಲುಮುಖದಲ್ಲಿ ಕಾಣವುದಾದರೂ, ಲೋಕವು ಅದರಿಂದ ಅತೀತವಾಗಿದೆ. ನಿತ್ಯ ಬದಲಾವಣೆ ಹೊಂದುತ್ತಿದ್ದರೂ ಅದು ನಿರಂತರ ಸ್ವರೂಪ ಉಳ್ಳುದಾಗಿದೆ.

ಷಡ್‌ದ್ರವ್ಯಗಳಲ್ಲೆಲ್ಲ ಜೀವದ್ರವ್ಯ ಅತಿ ಮುಖ್ಯವಾದುದು. ಉಳಿದ ದ್ರವ್ಯಗಳೊಂದಿಗೆ ಸೇರಿ, ಪುದ್ಗಲದೊಂದಿಗೆ ಸೇರಿ ಪಡಬಾರದ ರೂಪವೈವಿಧ್ಯ, ಸುಖದುಃಖಗಳನ್ನು ಹೊಂದುವುದಾದರೂ ಅವುಗಳೆಲ್ಲದರಿಂದ ಅದು ಅತೀತವಾಗಿದೆ. ಸರ್ವಸಾಮರ್ಥ್ಯವುಳ್ಳುದಾಗಿದೆ. ಅನಂತ ಚತುಷ್ಟಯು ಅದರ ಧರ್ಮವಾಗಿದೆ. ಜೀವ ಮತ್ತು ಆತ್ಮ ಬೇರೆಬೇರೆ ವಸ್ತುಗಳಲ್ಲ. ಅದು 'ಜೀವಾತ್ಮ'ನೆಂದು ಒಂದೇ ಹೆಸರಿನಿಂದ ಕರೆಯುವ ಒಂದೇ ವಸ್ತು. ಅಷ್ಟಾದಶದೋಷಗಳನ್ನು ಕಳೆದುಕೊಂಡು ಜೀವಾತ್ಮನೇ ಪರಮಾತ್ಮ ಸ್ವರೂಪವನ್ನು ಹೊಂದುವುದು ಪರಮಾದರ್ಶ. ಜೀವಾತ್ಮನು ತನ್ನನ್ನೂ ತಾನು ನೋಡುವುದೇ ಆತ್ಮ ಸಾಕ್ಷಾತ್ಕಾರ. ದೇವಸಾಕ್ಷಾತ್ಕಾರವೆಂದರೆ ಬೇರಲ್ಲ; ಅದೇ ಆತ್ಮ ಸಾಕ್ಷಾತ್ಕಾರ.

ನರ–ತಿರಿಯಕ್–ಸ್ವರ್ಗ–ನರಕಗಳೆಂಬ ಚತುರ್ಗತಿಯಿಂದ ತಪ್ಪಿಸಿಕೊಂಡು ಜನನ-ಜೀವನ-ಮರಣಗಳ ಸುತ್ತಿನಲ್ಲಿ ಸಿಕ್ಕದೆ, ಕರ್ಮರಹಿತನಾಗಿ ಆತ್ಮಾನುಭವ ವನ್ನು ಅನುಭವಿಸುವುದೇ ತನ್ನ ನಿಜಸ್ವರೂಪ ಸಾಕ್ಷಾತ್ಕಾರ ಮಾಡಿಕೊಳ್ಳುವುದು. ಅಂಥ ಮುಕ್ತಾತ್ಮರು ಸಿದ್ಧಶಿಲೆಯಲ್ಲಿ ನಿರಂತರ ಸುಖವನ್ನು ಅನುಭವಿಸುವರು. ಅದೇ ಮೋಕ್ಷ. ಎಲ್ಲಗಳ ಎಲ್ಲೆಯನೆ ದಾಟಿ, ಸರ್ವಸಂಗ ಪರಿತ್ಯಾಗಗೈದವನೆ ಮುಕ್ತನು, ಲೋಕಾಂತಿಕನು.

ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಲು ಆತ್ಮನು ಎಂದು ನಿರ್ಧರಿಸು ತ್ತಾನೆಯೋ ಅಂದೇ ಅವನ ಗತಿ ಬದಲಿಸುತ್ತದೆ. ಚಿರಂತನ ಮುಕ್ತಿ ಸುಖದ ತತ್ವ ಪ್ರೀತಿ ಎಂದು ಜೀವಿಯ ಮನಕ್ಕೆ ನಾಟುತ್ತದೆಯೋ ಅಂದೇ ಸಮ್ಯಕ್ತ್ವ ಉಂಟಾ ಗುತ್ತದೆ.

ಸಮ್ಯಕ್ತ್ವವೇ ನಿಜವಾದ ಒಲುಮೆ, ಪ್ರೀತಿ. ಜಗತ್ತಿನಲ್ಲಿ ಇನ್ನೊಂದು ವಸ್ತುವಿನಿಂದ ತನಗೆ ಕೃಪೆ, ವರ ಎಂಬುವುದಿಲ್ಲ. ತನ್ನನ್ನು ತಾನೆ ಪ್ರೀತಿ ಮಾಡು ವುದೇ ಕೃಪೆ, ತನ್ನನ್ನು ತಾನು ತಿಳಿದು ಆತ್ಮಸಾಕ್ಷಾತ್ಕಾರ ಹೊಂದುವುದೇ ವರ. ತನ್ನನ್ನು ತಾನು ತಿಳಿದು ನೋಡುವುದೇ ಸಮ್ಯಗ್ ದರ್ಶನ, ನೋಡಿದ್ದನ್ನು ನಿಂತು ಗುರುತಿಸುವುದೇ ಸಮ್ಯಗ್‌ಜ್ಞಾನ. ಅದರಂತೆ ನಡೆಯುವುದೇ ಸಮ್ಯಕ್ ಚಾರಿತ್ರ ಸಮ್ಯಗ್ ದರ್ಶನ-ಜ್ಞಾನ-ಚಾರಿತ್ರಗಳಿಂದ ಮೋಕ್ಷಪ್ರಾಪ್ತಿಯಾಗುವುದು.

'ತತ್ವ ಪ್ರೀತಿ ಮನಕ್ಕೆ ಪುಟ್ಟಲದು ಸಮ್ಯಕ್ತ್ವಂ' ಜೀವಾಜೀವ ಬಂಧ ಆಶ್ರವ ಸಂವರ ನಿರ್ಜರ ಮೋಕ್ಷಗಳೆಂದು ಸಪ್ತ ತತ್ವಗಳುಂಟು. ಅವುಗಳನ್ನು ಅರಿತು ವರ್ತಿಸುವುದೆ ತತ್ವಪ್ರೀತಿ, ಆ ಪ್ರೀತಿಯಿಂದ ಸಮ್ಯಗ್‌ದರ್ಶನ. ಅದೇ ಒಲುಮೆ ಪ್ರೀತಿ, ಕೃಪೆ, ವರ. ಅನ್ಯರಿಂದಲ್ಲ ತನ್ನಿಂದ ತನಗೆ ತನ್ನ ದರ್ಶನವಾಗಬೇಕು. 'ನೀನು' ಒಲಿದರೆ ಇಲ್ಲಿ 'ನಿನ್ನೊಳಗಿನ ನಿಜರೂಪವಾದ ದೇವತ್ವ'ವೆಂದು ತಿಳಿಯ ಬೇಕು. ಬೇರೆ ಹೊರಗಿನ ಯಾರ ರೂಪವೂ ಅಲ್ಲ, ಆತ್ಮರೂಪ; ಆತ್ಮದರ್ಶನವೇ ಸಮ್ಯಗ್ ದರ್ಶನ.

ಒಮ್ಮೆ ಸಮ್ಯಗ್‌ದರ್ಶವಾದರೆ ಸಾಕು, ಕೊರಡು ಕೊನರುವುದು; ಬರಡು ಹಯನಾಗುವುದು. ಇದು ಸಕಲ ಮಾನವರನ್ನು ಉದ್ಧಾರ ಮಾಡುವ ಮಹಾ ಸ್ಪರ್ಶ. ಇದರಿಂದ ಅಶಕ್ಯವು ಶಕ್ಯವಾಗುವುದು ಅಸಾಧ್ಯವು ಸಾಧ್ಯವಾಗುವುದು.

ಆತ್ಮಸಾಕ್ಷಾತ್ಕಾರ ಸಾಧಕನ ಪ್ರಥಮ ಮೆಟ್ಟಲು. ಸಕಲವನ್ನು ಅರಿತು ಸರ್ವಜ್ಞತ್ವವನ್ನು ಹೊಂದುವುದು ಅವನ ದ್ವಿತೀಯ ಮೆಟ್ಟಲು, ತಾನು ಅರಿತು ದನ್ನು ವಿಶ್ವಕ್ಕೆ ವಿವರಿಸಿ ಭಾರ ಕಳೆದುಕೊಳ್ಳುವುದು (ನಿರಾಭಾರಿಯಾಗುವುದು) ಅವನ ತೃತೀಯ ಮೆಟ್ಟಲು. ಆಮೇಲೆ ಇನ್ನೇನು ? ಮೋಕ್ಷ.

ಅದನ್ನು ವೀರನ ವಾಣಿಯಲ್ಲಿ ಹೇಳುವುದಾದರೆ ಸಮ್ಯಗ್‌ದರ್ಶನ, ಸಮ್ಯ-ಗ್‌ಜ್ಞಾನ, ಸಮ್ಯಕ್ ಚಾರಿತ್ರವೆಂಬ ರತ್ನತ್ರಯವೇ ಮೋಕ್ಷ ಮಾರ್ಗವನ್ನು ತಿಳಿಸುವುದು. ಅವುಗಳ ಸಂಪಾದನೆಯೆ ಸಾರ್ಥಕ್ಯವನ್ನು ತರುವುದು ಅದುವೇ ಮುಕ್ತಿ.

ಅಕ್ಷರ, ಲೆಕ್ಕ, ಗಂಧರ್ವ, ಜ್ಯೋತಿಷ್ಯ, ಆತ್ಮವಿದ್ಯೆ, ತರ್ಕ, ವ್ಯಾಕರಣ, ಅಮರಸಿಂಹ, ಛಂದಸ್ಸು, ನಿಘಂಟು, ಶಾಲಿಗೋತ್ರ, ಗೃಹವಾದ, ಗಾರುಡಿ, ದ್ಯೂತ, ವೈದಿಕಶಾಸ್ತ್ರ, ಸಾಮುದ್ರಿಕ ಶಾಸ್ತ್ರ, ಲಕ್ಷಣ ಶಾಸ್ತ್ರ, ಅಶ್ವಪರೀಕ್ಷೆ, ಗಜಶಿಕ್ಷೆ, ಗೋಕರ್ಣ, ದಾಡಾಬಂಧ, ಮೂಲಿಕಾಸಿದ್ಧಿ, ಭೂಚರತ್ವ, ಅತೀತ, ಅನಾಗತ, ವರ್ತಮಾನ, ಸ್ಥೂಲ, ಸೂಕ್ಷ್ಮ, ಇಂದ್ರಜಾಲ, ಮಹೇಂದ್ರಜಾಲ, ಉಡ್ಯಾಣ ಚೇಷ್ಟೆ, ಪರಕಾಯ ಪ್ರವೇಶ, ದೂರದೃಷ್ಟಿ, ದೂರಶ್ರವಣ, ಋಗ್ಯಜುಸ್ಸಾಮಾ-ಥರ್ವಣ, ಶ್ರುತಿ, ಸ್ಮೃತಿ, ಆಯುರ್ದಾಯ, ನಷ್ಟಮುಷ್ಟಿ, ಚಿಂತನೆ, ಚೋರವಿದ್ಯೆ, ಅಮೃತೋದಯ, ಭಾಷಾಪರೀಕ್ಷೆ, ವೀಣಾವಿದ್ಯೆ, ಅಗ್ನಿಸ್ತಂಭನ, ಜಲಸ್ತಂಬನ ವಾಯುಸ್ತಂಬನ, ವಾದ, ವಶ್ಯ, ಅಂಜನಾಸಿದ್ಧಿ, ಘುಟಿಕಾಸಿದ್ಧಿ, ಮಂತ್ರತಂತ್ರ ಸಿದ್ಧಿ,—ಇವೆಲ್ಲ ಕಲಿತಡೇನೋ ? ಚೌಷಷ್ಟಿ ವಿದ್ಯಾಕಳಾವಿದನೆನಿಸಿಕೊಂಬಸಲ್ಲದೆ, ಲಿಂಗವಂತನೆನಿಸಿಕೊಂಬುದಿಲ್ಲ. ಲಿಂಗವುಳ್ಳ ಶಿವಭಕ್ತಂಗೆ ಇವರೆಲ್ಲ ಕೂಡಿ ಸರಿಬಾರರೆಂದ ಕಲಿದೇವರದೇವ.

ವೇದ ವಿಪ್ರರ ಬೋಧೆ.
ಶಾಸ್ತ್ರ ಸಂತೆಯ ಮಾತು.
ಪುರಾಣ ಪುಂಡರ ಗೋಷ್ಠಿ.
ಆಗಮ ಅನೃತದ ನುಡಿ.
ತರ್ಕ ವ್ಯಾಕರಣ ಕವಿತ್ವ ಪ್ರೌಢಿಮೆ,
ಇದು ಕಾರಣ ತನ್ನೊಳಗನರಿದ ಅನುಭವದಿಂದ
ಘನವಲ್ಲೆಂದ ಕಲಿದೇವರದೇವ.

# ನಮ್ಮ ಭಾಷಾ ಬೋಧನ ಪದ್ಧತಿ : ಕೆಲವು ಸಮಸ್ಯೆಗಳು

-- ಮಹಿಮ.

ಭಾಷಾಬೋಧನೆ ಎಂದು ? ಯಾವಾಗ ? ಪ್ರಾರಂಭವಾಯಿತೆನ್ನುವುದನ್ನು ಹೇಳಲಾಗುವುದಿಲ್ಲ. ಅದು ಭಾಷೆಯ ಉಗಮದಷ್ಟೇ ಹಳೆಯದು. ಈ ಲೇಖನದ ಉದ್ದಿಶ್ಯ ನಮ್ಮ ಮಾಧ್ಯಮಿಕ ಪ್ರೌಢಶಾಲೆಗಳಲ್ಲಿರುವ ಭಾಷಾ ಬೋಧನಪದ್ಧತಿ ಅರೆ ಕೊರೆಗಳ ಬಗ್ಗೆ ತಿಳಿಯುವುದಾಗಿದೆ. ಅನೇಕ ಭಾಷೆಗಳ ತೌರಾದ ಭಾರತದಲ್ಲಿ ಭಾಷಾಬೋಧನ ಸಮಸ್ಯೆ ಅನೇಕ ತೊಡಕುಗಳನ್ನು ಹೊಂದುತ್ತಲೇ ಬಂದಿದೆ ಬಹು ಪಾಲು ಅವಿದ್ಯಾವಂತರಿಂದ ಕೂಡಿದ ನಮ್ಮ ದೇಶದ ಪರಿಸ್ಥಿತಿ ಹಿತಕರವಾಗಿಲ್ಲ. ನಾವೇ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕಾಗಿದೆ. ಭಾಷಾ ಬೋಧನೆ ಜ್ಞಾನ ಪ್ರಸಾರದ ಕಾರ್ಯಕ್ಕೆ ತಳಹದಿ. ನಾವು ಏನನ್ನು ಬೋಧಿಸಬೇಕಾದರೂ ಮಧ್ಯೆ ಬಂದು ನಿಲ್ಲುವುದು ಭಾಷೆಯೇ. ಆದ್ದರಿಂದ ಈ ಬೋಧನಕಾರ್ಯ ಸುಗಮ ವಾಗಬೇಕಾದರೆ ನಾವು ನಮ್ಮ ಬೋಧನ ಕ್ರಮವನ್ನು ಕುರಿತು ವಿಶ್ಲೇಷಿಸಬೇಕಾ ಗುತ್ತದೆ. ಆ ದಿಸೆಯಲ್ಲಿ ಈ ಲೇಖನ ಒಂದು ಪ್ರಯತ್ನ ಮಾತ್ರ. ಕೆಲವು ಉಪ ಶೀರ್ಷಿಕೆಗಳಲ್ಲಿ ಭಾಷಾಬೋಧನೆಗೆ ಪೂರಕವಾದ ಕೆಲವು ವಿಚಾರಗಳನ್ನು ಹೀಗೆ ವಿಶ್ಲೇಷಿಸಬಹುದು.

## ೧. ಭಾಷೆ ಮತ್ತು ಭಾಷಾಜ್ಞಾನ :

ಬೋಧಕನಿಗೆ ಭಾಷೆಯ ಬಗ್ಗೆ ವಿಶೇಷ ಜ್ಞಾನವಿರಬೇಕಾಗುತ್ತದೆ. ಭಾಷಾ ಬೋಧನೆ ಒಂದು ನಿಖರವಾದ ಶಾಸ್ತ್ರ, ಎಲ್ಲಾ ಬೋಧಕರೂ ಭಾಷಾ ಬೋಧಕರಾಗ ಲಾರರು. ಕಾರಣ ಭಾಷಾಬೋಧನೆ ಇತರ ಕಲೆಗಳಂತೆ ಒಂದು ಉತ್ತಮ ಕಲೆ ಯಾಗಿದೆ. ಭಾಷಾಬೋಧನೆ ಎನ್ನುವುದು ನೀರಸಜ್ಞಾನದ ಪ್ರಸಾರವಲ್ಲ, ಮನುಷ್ಯನ ದಿನನಿತ್ಯದ ಬದುಕಿನ, ಆಲೋಚನೆಯ ಅವಿಭಾಜ್ಯ ಅಂಗ. ಹಾಗಾಗಿಯೇ ಭಾಷೆ ಒಂದು ಜೀವಂತಕ್ರಿಯೆ. ಇದನ್ನರಿಯದ ಭಾಷಾಬೋದನೆ ವ್ಯರ್ಥವಾಗುತ್ತದೆ. ಭಾಷೆಯ ಸೂತ್ರಗಳನ್ನು ವಿವರಿಸುವದಾಗಲಿ, ವ್ಯಾಖ್ಯಾನಿಸುವದಾಗಲಿ ಭಾಷೆಯಾಗ

ಲಾರದು. ಲಿಂಗ, ವಚನ, ವಿಭಕ್ತಿಪ್ರತ್ಯಯ, ಕಾಲ, ನಾಮಪದ ಮುಂತಾದವು ಭಾಷೆಯ ರಚನೆಯನ್ನು ವಿವರಿಸಬಲ್ಲವೆ ವಿನಃ ಭಾಷೆಲ್ಲ. ಆದ್ದರಿಂದಲೇ ಭಾಷಾವಿಜ್ಞಾನಿಗಳು ಭಾಷೆಯ ಬಗೆಗೆ ಕಲಿಸುವ ಬೋಧನೆಯನ್ನು ತಿರಸ್ಕರಿಸಿ ಭಾಷೆಯನ್ನು ಕಲಿಸುವ ಬೋಧನೆಯನ್ನು ಪುರಸ್ಕರಿಸಿದರು. ಭಾಷೆಯನ್ನುವುದು ಒಂದು ಜನಾಂಗದ ಸಂಸ್ಕೃತಿ, ಆಸೆ-ಆಕಾಂಕ್ಷೆಗಳ ವಿಚಾರಗಳ ಪ್ರತಿರೂಪವಾಗಿರುತ್ತದೆ. ಜನಾಂಗದ ವಿಸ್ತಾರ ನೆಲಸುವಿಕೆಯಲ್ಲಿರುವ ಅನೇಕ ರೂಪ, ಸ್ವರೂಪಗಳನ್ನು ಒಗ್ಗೂಡಿಸಿಕೊಂಡಿರುತ್ತದೆ. ಅವುಗಳನ್ನು ಅರಿಯದೆ ಭಾಷೆಯ ಬೋಧನೆ ಅಪೂರ್ಣವಾಗುತ್ತದೆ.

ಭಾಷೆಯನ್ನುವುದು ಅನೇಕ ಧ್ವನಿಸಂಕೇತಗಳ ವ್ಯವಸ್ಥೆ. ಈ ಧ್ವನಿಸಂಕೇತಗಳಿಗೂ ಆ ಸಂಕೇತಗಳು ಪ್ರತಿನಿಧಿಸುವ ವಸ್ತುವಿಗೂ ಮೂಲಭೂತ ಸಂಬಂಧವಿರುವುದಿಲ್ಲ. ಅವು ಯಾದೃಚ್ಛಿಕವಾಗಿರುತ್ತವೆ. ಅಂತೆಯೇ ಭಾಷೆಯನ್ನು ಸೀಮಿತ ಚೌಕಟ್ಟಿನಲ್ಲಿ ವಿವರಿಸುವ ಸಾಧ್ಯತೆ ಇದೆ. ಭಾಷಾ ರಚನೆ ಅನೇಕ ಪದಗಳನ್ನು ಹೊಂದಿರುತ್ತದೆ. ಈ ಪದಗಳನ್ನು ಭಾಷಾಬೋಧಕ ಅರಿತಿರಬೇಕಾಗುತ್ತದೆ. ಅನೇಕ ಜನ ಭಾಷಾಬೋಧಕರು ಅರಿತಿರುವಂತೆ ಬರೆಹದ ಭಾಷೆಯಷ್ಟೇ ಭಾಷೆಯಾಗುವುದಿಲ್ಲ. ಮಾತು ಮೊದಲು, ನಂತರ ಬರೆಹ ಬರೆಹ. ಮಾತಿನ ಎಲ್ಲ ಸ್ವರೂಪವನ್ನೂ ವಿವರಿಸಲಾರದು.* ಬರೆಹದ ಭಾಷೆಯನ್ನಷ್ಟೇ ವಿವರಿಸುವ ಭಾಷಾಬೋಧನೆ ನಿಷ್ಪ್ರಯೋಜಕವಾದುದು. ಆದರಿಂದ ಬೋಧಕನಿಗೆ ಭಾಷೆಯ ಬಗ್ಗೆ ವಿಶೇಷ ಜ್ಞಾನವಿರಬೇಕಾಗುತ್ತದೆ. ಮೂಲಭೂತವಾದ ಭಾಷೆಯಸ್ವರೂಪವನ್ನರಿಯದ ಬೋಧಕನ ಬೋಧನೆ ಕುರುಡ ಪ್ರಪಂಚ ತೋರಿಸಲು ಹೊರಟಂತೆ.

## ೨. ಮಾತೃಭಾಷೆ, ಸ್ವಭಾಷೆ, ಅನ್ಯಭಾಷೆ :

ಭಾಷಾ ಬೋಧಕನಿಗೆ ಮಾತೃಭಾಷೆ, ಸ್ವಭಾಷೆ ಮತ್ತು ಅನ್ಯಭಾಷೆ ಇರುವ ಅಂತರದ ಅರಿವು ಬೇಕಾಗುತ್ತದೆ. ಮಾತೃಭಾಷೆಯೆಂದರೆ ಭಾಷೆಯಾಡುವವನ ಮನೆಯ ಭಾಷೆ ಎಂದರೆ ತಪ್ಪಾಗಲಾರದು. ತನ್ನ ತಾಯಿ ಅಥವಾ ಇತರ ಅತೀ ಹತ್ತಿರದವರಿಂದ ಕಲಿತು ದಿನನಿತ್ಯದ ಬದುಕಿನಲ್ಲಿ ಸರಳವಾಗಿ ಬಳಸಬಹುದಾದ ಮೊದಲ ಭಾಷೆ ಮಾತೃಭಾಷೆಯಾಗುತ್ತದೆ. ಕೆಲವು ದ್ವಿಭಾಷಾ, ತ್ರಿಭಾಷಾ, ಬಹುಭಾಷಾ ಪರಿಸರದಲ್ಲಿ ಮಾತೃಭಾಷೆಯೊಂದಿಗೆ ಇನ್ನೂ ಕೆಲವು ಭಾಷೆಗಳನ್ನು ಒಬ್ಬ ವ್ಯಕ್ತಿ ಪರಿಸರದಿಂದ ಕಲಿಯುವ ಸಾಧ್ಯತೆಯುಂಟು. ಅಂತಹ ಪರಿಸರದಲ್ಲಿ ಕಲಿತು ಮಾತೃಭಾಷೆಯಂತೇ ಉಪಯೋಗಿಸಬಹುದಾದ ಒಂದು ಅಥವಾ ಅನೇಕ ಭಾಷೆಗಳನ್ನು ಸ್ವಭಾಷೆ (Native Language) ಅಥವಾ L, ಎನ್ನಬಹುದು. ಉದಾಹರಣೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ, ಕನ್ನಡ ಎರಡೂ ಕೆಲವರ ಸ್ವಭಾಷೆಯಾಗಿರುತ್ತವೆ. ಆದರಲ್ಲಿ ಒಂದು ಮಾತೃಭಾಷೆಯಾಗಿರುತ್ತದೆ, ಇನ್ನೊಂದು

* ಡಾ. ಹಾ. ಮಾ. ನಾಯಕರ "KANNADA Literary and Colloquial, A study of two Styles" ಪುಸ್ತಕವನ್ನು ನೋಡಿರಿ.

ಸ್ವಭಾಷೆಯಾಗಿರುತ್ತದೆ. ಇದರಿಂದ ಒಂದಂಶ ವ್ಯಕ್ತವಾಗುತ್ತದೆ. ಎಲ್ಲ ಮಾತೃಭಾಷಿಗಳೂ ಸ್ವಭಾಷಿಗಳಾಗಬಹುದು. ಆದರೆ ಎಲ್ಲ ಸ್ವಭಾಷೆಗಳೂ ಮಾತೃಭಾಷೆಗಳಾಗಲಾರವು. ಮಾತೃಭಾಷೆ ಅಥವಾ ಸ್ವಭಾಷೆಯಾಗದೆ ಕೇವಲ ಸೀಮಿತ ಉದ್ದಿಶ್ಯದಿಂದ ಕಲಿತಭಾಷೆ ಅನ್ಯಭಾಷೆ (Foreign Language) ಅಥವಾ $L_2$ ಆಗಿರುತ್ತದೆ. ಉದಾಹರಣೆಗೆ ನಾವು ಕಲಿಯುವ ಇಂಗ್ಲೀಷ್, ರಷ್ಯನ್ ಮುಂತಾದವು ಅನ್ಯಭಾಷೆ ($L_2$ಗ)ಳಾಗಿರುತ್ತವೆ. ಅನ್ಯಭಾಷೆಗಳೆಂದರೆ ವಿದೇಶಗಳ ಭಾಷೆ ಎಂದು ಅರ್ಥಕೊಡಬೇಕಾಗಿಲ್ಲ. ಕನ್ನಡಿಗರು ಶಾಲೆಯಿಂದ ಕಲಿಯುವ ಹಿಂದಿಯೂ ಅವರಿಗೆ ಅನ್ಯಭಾಷೆಯೇ.

ಭಾಷಾಬೋಧಕ ತಾನು ಬೋಧಿಸುತ್ತಿರುವ ಭಾಷೆ ಯಾವುದು ಎನ್ನುವುದನ್ನು ತಿಳಿದಿರಬೇಕಾಗುತ್ತದೆ. ಕಾರಣವೆಂದರೆ ಮಾತೃಭಾಷೆಯ ಬೋಧನೆ ಅನ್ಯಭಾಷೆಯ ಬೋಧನೆಗಿಂತ ಭಿನ್ನವಾಗಿರುತ್ತದೆ. ಏಕೆಂದರೆ ಮಾತೃಭಾಷೆ ಕಲಿತಯುವವನು ಆಗಲೇ ಆ ಭಾಷೆಯನ್ನು ಬಳಸುವ ಸಾಮರ್ಥ್ಯ ಪಡೆದಿರುತ್ತಾನೆ. ಅವನು ಕೇವಲ ಬರೆಯುವ, ಓದುವ ಮತ್ತು ಭಾಷಾರಚನೆಯನ್ನರಿಯುವ ಶಕ್ತಿ ಪಡೆಯಬೇಕಾಗಿರುತ್ತದೆ. ಆದರೆ ಅನ್ಯ ಭಾಷೆ ಕಲಿಯುವವನು ಭಾಷೆಗೆ ಸಂಪೂರ್ಣ ಹೊಸಬನಾಗಿರುತ್ತಾನೆ ಹಾಗಾಗಿ ಅವನು ಮಾತನಾಡುವ ಓದುವ, ಬರೆಯುವ, ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಪಡೆಯಬೇಕಾಗುತ್ತದೆ. ಈ ಅಂತರವನ್ನು ಅಧ್ಯಾಪಕರು ರಚಿಸದಿದ್ದರೆ ಅವನು ಬೋಧನೆ ವ್ಯರ್ಥವಾಗುತ್ತದೆ. ನನಗನ್ನಿಸುವಂತೆ ನಮ್ಮ ಅನೇಕ ಶಾಲೆಯ ಅಧ್ಯಾಪಕರು ಈ ವಿಚಾರವನ್ನು ಅರಿಯಬೇಕಾಗಿದೆ.

### ೩. ಭಾಷಾಬೋಧನೆ ಮತ್ತು ಪದ್ಧತಿಗಳು :

ಭಾಷಾಬೋಧನ ಪದ್ಧತಿಗಳು ಹಲವಾರಿವೆ. ಅವುಗಳಲ್ಲಿ ಪರಂಪರಾಗತ ವಿಧಾನವೆಂದು ಹೆಸರಾಗಿರುವ ವ್ಯಾಕರಣ–ಭಾಷಾಂತರ ಪದ್ಧತಿ (Grammar-Translation Method)ಯೂ ಒಂದು. ಇದು ಪುರಾತನ ವಿಧಾನವಾದರೂ ನಮ್ಮ ಸಾವಿರಾರು ಶಾಲೆಗಳಲ್ಲಿ ಜೀವಂತವಾಗಿದೆ. ಭಾಷೆಯ ವ್ಯಾಕರಣದ ಸೂತ್ರಗಳನ್ನು ಅನೇಕ ವ್ಯಾಖ್ಯೆಗಳಲ್ಲಿ ವಿವರಿಸುವುದೂ, ಮಾತೃಭಾಷೆಯಿಂದ ಅನ್ಯಭಾಷೆಗೆ ಅನ್ಯಭಾಷೆಯಿಂದ ಮಾತೃಭಾಷೆಗೆ ( S→T Language T→S Language ) ಅನುವಾದಿಸುವುದಕ್ಕೆ ಈ ಪದ್ಧತಿ ಆದ್ಯತೆ ನೀಡುತ್ತದೆ. ಬರೆಹದ ಭಾಷೆಯನ್ನಷ್ಟೇ ಪ್ರಮುಖ ಎಂದು ಪರಿಗಣಿಸದ ಈ ವಿಧಾನ ಅನೇಕ ದೇಶಗಳಲ್ಲಿ ಪ್ರಸಿದ್ಧಿ ಕಳೆದುಕೊಂಡಿದೆ.

ವ್ಯಾಕರಣ ಭಾಷಾಂತರ ಪದ್ಧತಿಯನ್ನು ವಿರೋಧಿಸಿಕೊಂಡ ವಿಧಾನವೇ ನೇರ ಪದ್ಧತಿ ( Direct Mathod ). ಈ ಪದ್ಧತಿಯು ಸನ್ನಿವೇಶದ ಹಿನ್ನೆಲೆಯಲ್ಲಿ ಭಾಷೆ ಬೋಧಿಸುವುದಕ್ಕೆ ಆದ್ಯತೆ ಕೊಟ್ಟಿತು. ಕಲಿಯಬೇಕಾದ ಭಾಷೆಯ ನೇರ ಉಪಯೋಗವನ್ನು ಸಮರ್ಥಿಸಿತು. ಈ ಪದ್ಧತಿ ಆಡುಮಾತಿಗೆ ಹೆಚ್ಚು ಆದ್ಯತೆ ನೀಡಿ

ಭಾಷಾಬೋಧನೆಯ ಮಹತ್ವವನ್ನು ತಿಳಿಸಿತು. ಭಾಷಾರಚನೆಗಳನ್ನು ಸರಿಯಾಗಿ ವಿವರಿಸವೆ ಈ ಪದ್ಧತಿ ಮುಂದಿನ ಸಂಶೋಧನೆಗಳಿಗೆ ದಾರಿಮಾಡಿಕೊಟ್ಟಿತು. ನಂತರ ಬಂದ ರಚನಾತ್ಮಕ ಪದ್ಧತಿ (Structural Method) ಶ್ರಾವಣ ಮೌಖಿಕ ಪದ್ಧತಿ (Audio-Lingual Method) ಗಳು ಸುಧಾರಿತ ವಿಧಾನಗಳನ್ನು ಬಳಕೆಗೆ ತಂದವು. ಅಮೇರಿಕೆಯ ರಚನಾತ್ಮಕ ಭಾಷಾ ವಿಜ್ಞಾನಿಗಳು (Structural Linguists) ಈ ದಿಸೆಯಲ್ಲಿ ಸಂಶೋಧನೆ ನಡೆಸಿದರು. 19 ಮತ್ತು 20ನೇ ಶತಮಾನದಲ್ಲಿ ಬೆಳವಣಿಗೆ ಹೊಂದಿದ ಭಾಷಾ ವಿಜ್ಞಾನವೂ ಅನೇಕ ಅಮೂಲ್ಯ ವಿಷಯಗಳನ್ನು ನೀಡಿದೆ. ಅವುಗಳಲ್ಲಿ ಧ್ವನಿಶಾಸ್ತ್ರ (Phonelics) ವೈದೃಶ್ಯವಿಶ್ಲೇಷಣೆ ( Contrastive Analysis )ಯ ಬಳಕೆ ಮುಂತಾದವು ಸೇರಿಕೊಂಡಿವೆ.

## ೪. ಭಾಷಾಬೋಧನೆ ಮತ್ತು ಭಾಷಾಸಾಮಗ್ರಿ :

ಭಾಷಾಬೋಧಕನಿಗೆ ಭಾಷಾಸಾಮಗ್ರಿಯೇ ಜೀವಾಳ. ಬೋಧಕ ಬಳಸುವ ಪಠ್ಯಪುಸ್ತಕಗಳು ಈ ಭಾಷಾಸಾಮಗ್ರಿಯನ್ನು ಎಷ್ಟು ಚೆನ್ನಾಗಿ ಕೊಡಬಲ್ಲವೋ ಅಷ್ಟು ಯಶಸ್ವಿ ಭೋಧನೆಯಾಗುತ್ತದೆ. ಒಂದು ಭಾಷೆಯ ರಚನೆಗೂ ಮತ್ತೊಂದು ಭಾಷೆಯ ರಚನೆಗೂ ರಚನಾತ್ಮಕ ವ್ಯತ್ಯಾಸಗಳನ್ನು ಅರಿಯುವಲ್ಲಿ ಮತ್ತು ವಿವರಿಸು ವಲ್ಲಿ ಹೆಚ್ಚು ಶ್ರಮವಹಿಸಬೇಕಾಗುತ್ತದೆ. ವರ್ಣನಾತ್ಮಕ ಭಾಷಾವಿಜ್ಞಾನ (Descriptive Linguistics) ಈ ರಚನಾತ್ಮಕ ಭಿನ್ನತೆಗಳನ್ನು ವಿವರಿಸುವಲ್ಲಿ ಹೆಚ್ಚು ಸಹಕಾರಿಯಾಗಿದೆ. ಧ್ವನಿ, ಧ್ವನಿಮಾ, ಆಕೃತಿಮಾ, ವಾಕ್ಯಗಳನ್ನು ವಿವರಿ ಸುವ ಉಪಶಾಸ್ತ್ರಗಳನ್ನು ವರ್ಣನಾತ್ಮಕ ಭಾಷಾ ವಿಜ್ಞಾನ ನೀಡುತ್ತದೆ. ಈ ಎಲ್ಲ ಶಾಸ್ತ್ರಗಳನ್ನು ಅಭ್ಯಸಿಸಿ ಭಾಷೆಯ ಆಂತರಿಕ ಹಾಗೂ ಬಾಹ್ಯರಚನೆಗಳಿಗನುಗುಣ ವಾಗಿ ವ್ಯಾಕರಣ ಸಿದ್ಧಪಡಿಸಬೇಕಾಗುತ್ತದೆ. ಅದರ ಬದಲು ಒಂದು ಭಾಷೆಯ ಮಾದರಿ ವ್ಯಾಕರಣ ಇಟ್ಟುಕೊಂಡ ಬೇರೆಭಾಷೆಗಳಿಗೆ ಆ ಸೂತ್ರಗಳನ್ನು ಅಳವಡಿಸು ವುದಲ್ಲ ಬೋಧಕನ ಭಾಷಾಸಾಮಗ್ರಿ ಆ ಭಾಷೆಯ ಆಡುನುಡಿ, ಪ್ರಭೇದಗಳು ಮತ್ತು ಶಿಷ್ಯಭಾಷೆಯನ್ನು ಒಳಗೊಂಡಿರಬೇಕಾಗುತ್ತದೆ. ಯಾವುದೋ ಒಂದನ್ನು ವಿವರಿಸಿದರೆ ಅದೇ ಸಂಪೂರ್ಣಭಾಷೆಯಾಗಲಾರದು. ಬೋಧಕನ ಭಾಷಾ ಸಾಮಗ್ರಿ ಕಲಿಯುವವನ ಉದ್ದಿಶ್ಯವಾಗಲಿ, ಕಲಿಯುವವನಿಗೆ ಕಲಿಕೆಯ ಉದ್ದಿಶ್ಯವಾಗಲಿ ಇರುವುದಿಲ್ಲ. ಇದನ್ನು ಈಗಲೂ ನಮ್ಮ ಶಾಲೆಗಳು ಪ್ರತಿನಿಧಿಸುತ್ತಿವೆ ಎಂದರೆ ಅತಿ ಶಯೋಕ್ತಿಯಾಗಲಾರದು.

## ೫. ಭಾಷಾಬೋಧಕ ಮತ್ತು ಬೋಧನಾ ಉಪಕರಣಗಳು :

ಭಾಷಾಬೋಧನೆಯ ಪ್ರಾಮುಖ್ಯತೆಯನ್ನು ಅನೇಕ ದೇಶಗಳು ಅರಿತಿವೆ. ಹಾಗಾಗಿ ಈ ಶಾಸ್ತ್ರ ಸಿಖರವಾದ ಶಾಸ್ತ್ರವಾಗಿ ಬೆಳೆಯತೊಡಗಿದೆ. ನಮ್ಮದೇಶದ ಶಾಲೆ ಗಳ ಪರಿಸ್ಥಿತಿಯಲ್ಲಿ, ಮೊದಲಿನ ಸ್ಥಿತಿಗಿಂತ ಬದಲಾವಣೆ ಕಂಡುಬರುತ್ತಿಲ್ಲ ಎಷ್ಟೋ

ಶಾಲೆಗಳಲ್ಲಿ ಮಕ್ಕಳಿಗೆ ಕುಳಿತುಕೊಳ್ಳಲು ಮಣೆಗಳೇ ಇಲ್ಲದ ಪರಿಸ್ಥಿತಿ ಇದೆ. ಶಾಲೆಗಳ ಕಟ್ಟಡಗಳಿಲ್ಲ. ಇದ್ದರೂ ಇಂದೋ ನಾಳೆಯೋ ಅನ್ನುವಂತಿದೆ. ಅಧ್ಯಾಪಕರ ಕೊರತೆಯಂತೂ ಸಾಮಾನ್ಯ ಸಮಸ್ಯೆಯಂತೆ ಇದೆ. ಅಧ್ಯಾಪಕ ಬೋಧನೆಯ ಪ್ರಥಮ ಉಪಕರಣ ಅವನಿಲ್ಲದ ಶಾಲೆಗಳು ಶಾಲೆಗಳೇ ಅಲ್ಲ. ನಮ್ಮ ಶಾಲೆಗಳು ಶೈಕ್ಷಣಿಕ, ಆರ್ಥಿಕ ದುಸ್ಥಿತಿಯಲ್ಲಿ ತೊಳಲಾಡುತ್ತಿವೆ. ಕೆಳಗೆ ಹೆಸರಿಸಿದ ಅನೇಕ ಬೋಧನಾ ಉಪಕರಣಗಳು ಬೋಧನೆಗೆ ಲಭ್ಯವಾಗುವುದಿರಲಿ ಅವುಗಳನ್ನು ಅಧ್ಯಾಪಕರೇ ನೋಡಿಲ್ಲ. ಕಪ್ಪುಹಲಗೆ ಮತ್ತು ಚಾಕ್‌ಪಿಸ್ (ಸೀಮೆಸುಣ್ಣ) ಅಷ್ಟೇ ಅದ್ಯಾಪಕರ ಬೋಧನಾ ಉಪಕರಣಗಳಾಗಿವೆ. ಚಿತ್ರಗಳನ್ನು (Picture) ಆಗಾಗ್ಗೆ ಬೋಧನೆಗೆ ಬಳಸುತ್ತಾರೆ. ಹೊಳಪುಬಿಲ್ಲೆ (Flash Cards), ಚಲನಚಿತ್ರ (Motion Pitctures)ಗಳು, ಮೇಲ್ಪ್ರಕ್ಷೇಪಕ (Ovrehead Projector) ಫಲಕ—ಪ್ರಕ್ಷೇಪಕ (Slide Project) ಅಪಾರದರ್ಶಕ ಪ್ರಕ್ಷೇಪಕ (Opaque Project) ಧ್ವನಿಮುದ್ರಕ (Tape Recordor), ಬೋಧನ ಯಂತ್ರಗಳು (Teaching Machines), ದೂರದರ್ಶನ (Television) ಭಾಷಾಪ್ರಯೋಗಾಲಯ (Language Laboratary) ಮುಂತಾದವುಗಳ ಪರಿಚಯ ಅನೇಕ ಅಧ್ಯಾಪಕರಿಗಿಲ್ಲ. ಭಾಷಾ ಬೋಧನೆ ಹೆಚ್ಚು ಪರಿಣಾಮಕಾರಿಯಾಗಲು ಮತ್ತು ಅಧ್ಯಾಪಕರು ವಿನಿಯೋಗಿಸುವ ಶಕ್ತಿಯನ್ನು ಕಡಿಮೆಮಾಡಲು ಈ ಉಪಕರಣಗಳ ಪಾತ್ರ ಹಿರಿದಾಗಿದೆ. ಈ ಉಪಕರಣಗಳ ಬಳಕೆ ನಮ್ಮ ಶಾಲೆಗಳಲ್ಲಿ ಬರಬೇಕಾದರೆ ಶತಮಾನಗಳುರುಳಬೇಕಾಗಬಹುದು.

## ೬. ಭಾಷಾಬೋಧಕ ಮತ್ತು ವಿದ್ಯಾರ್ಥಿ :

ಭಾಷಾಬೋಧಕನೆಂದರೆ ಯಾರು ? ಈ ಪ್ರಶ್ನೆಗೆ ಉತ್ತರ ಸುಲಭವಾಗಿ ದೊರೆಯಲಾರದು. ನಮ್ಮ ಶಾಲೆಗಳಲ್ಲಿ ಭಾಷೆಯನ್ನು ಭೋಧಿಸಲೆಂದೇ ಅಧ್ಯಾಪಕರನ್ನು ನೇಮಿಸಿರುವುದಿಲ್ಲ. ಒಬ್ಬನೇ ಅಧ್ಯಾಪಕ ಸಮಯಕ್ಕನುಗುಣವಾಗಿ ಎಲ್ಲ ವಿಷಯಗಳನ್ನೂ ಭೋಧಿಸುತ್ತಾನೆ ಈ ವಿಚಾರ ನಮ್ಮ ಶಾಲೆಗಳ ನಿಜವಾದ ದುಸ್ಥಿತಿಯನ್ನು ಬಯಲಿಗೆಳೆಯುತ್ತದೆ. ಬೋಧಕನಿಗೆ ಕೆಲವು ವಿಶೇಷಾರ್ಹತೆಗಳಿರಬೇಕಾಗುತ್ತದೆ. ಅದರಲ್ಲಿ ಮೊದಲನೆಯದು ಭಾಷೆಯಜ್ಞಾನ, ಎರಡನೆಯದು ಭೋಧನೆಯ ಬಗ್ಗೆ ಪರಿಣತೆ, ಮೂರನೆಯದಾಗಿ ತನ್ನ ಸ್ವಂತದೃಷ್ಟಿ. ಈ ಮೂರನ್ನು ಉಪಯೋಗಿಸಿಕೊಂಡು ಬೋಧಿಸಿದಾಗ ಬೋಧನೆ ಯಶಸ್ವಿಯಾಗುತ್ತದೆ. ಭಾಷೆಯ ಬಗೆಗೆ ಹೇಳುವವ ಭಾಷೆಯ ಅಧ್ಯಾಪಕನಾಗಲಾರ. ಭಾಷೆಯನ್ನು ಕಲಿಸುವವನು ಭಾಷೆಯ ಅಧ್ಯಾಪಕನಾಗುತ್ತಾನೆ. ಭಾಷೆಯ ಬಗೆಗೆ ಹೇಳುವವನು ಭಾಷೆಯ ಸಾಹಿತ್ಯ ಇತಿಹಾಸ ಮುಂತಾದವನ್ನು ಕುರಿತು ಹೇಳಬಹುದು; ಅದೇ ಭಾಷಾಬೋಧನೆ

ಯಾಗುವುದಿಲ್ಲ. ವಿದ್ಯಾರ್ಥಿಯ ಬಗ್ಗೆ ವಿಚಾರ ಮಾಡಿದಾಗ, ಯಾರು ಭಾಷೆಯನ್ನು ಕಲಿಯಬೇಕೆಂಬ ಇಚ್ಛೆಯನ್ನುಹೊಂದಿ ಆಸಕ್ತಿಯಿಂದ ಕಲಿಯುತ್ತಾರೋ ಅವರು ನಿಜವಾದ ವಿದ್ಯಾರ್ಥಿ ಎನ್ನಬಹುದು. ಭಾಷೆಕಲಿಯುವ ವಿದ್ಯಾರ್ಥಿಗೆ ತನ್ನ ಕಲಿಕೆಯ ಉದ್ದಿಶ್ಯವಿರುತ್ತದೆ. ಅದಕ್ಕನುಗುಣವಾಗಿ ತಾನು ಪ್ರಗತಿ ಸಾಧಿಸುತ್ತಾನೆ. ಕೆಲವರು ಅಧ್ಯಾಪಕ ಪ್ರಮುಖನಾದ (Teacher Centered) ತರಗತಿಗಳನ್ನು ಒಪ್ಪದೆ ವಿದ್ಯಾರ್ಥಿ ಪ್ರಮುಖ (Student Centered) ತರಗತಿಗಳನ್ನು ಇಚ್ಛಿಸುತ್ತಾರೆ. ಭಾಷಾಬೋಧನಾ ಉಪಕರಣಗಳನ್ನು ಉಪಯೋಗಿಸಿಕೊಂಡು ವಿದ್ಯಾರ್ಥಿ ಪ್ರಮುಖ ತರಗತಿಗಳನ್ನು ಸೃಜಿಸಬಹುದು, ಅದ್ಯಾಪಕನ ಶ್ರಮವನ್ನು ಕಡಿಮೆ ಮಾಡಬಹುದು.

## ೭. ಅನಿಸಿಕೆಗಳು ః

ನಮ್ಮ ಶಿಕ್ಷಣ ಶಾಸ್ತ್ರಜ್ಞರು ನಮ್ಮ ಬೋಧನೆಯಲ್ಲಿರುವ ಕುಂದುಕೊರತೆಗಳನ್ನು ಅರ್ಥಮಾಡಿಕೊಂಡಿಲ್ಲವೇ? ಅವುಗಳನ್ನು ಬಗೆಹರಿಸಲು ಅನೇಕ ತೊಂದರೆಗಳಿವೆ ನಮ್ಮ ಶಾಲೆಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕು. ಅದನ್ನು ಕಲಿಯಲು ನಮುಗಿರುವ ಅವಕಾಶಗಳೆಷ್ಟು! ಅನೇಕ ವರ್ಷಗಳನ್ನು ವ್ಯಯ ಮಾಡಿದಮೇಲೂ ವಿದ್ಯಾರ್ಥಿ ಇಂಗ್ಲೀಷ್‌ನ್ನು ಬಳಸಲು ಅಸಮರ್ಥನಾಗುತ್ತಾನೆ. ಡಾ. ಮೈಕೇಲ್‌ವೆಸ್ಟ್‌ರು ಹೇಳುವಂತೆ ಭಾರತದ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಓದಲು ಚೆನ್ನಾಗಿ ಬರುತ್ತದೆ, ಆದರೆ ಬರೆಯುಲು ಮಾತನಾಡಲು ಬರುವುದಿಲ್ಲ. ಈ ಮಾತಿನಿಂದಲೇ ಭಾಷಾಬೋಧನೆಯ ನಿರರ್ಥಕತೆಯನ್ನರಿಯಬಹುದು. ಬೋಧಕ ಶ್ರವಣ (Listning), ಮಾತನಾಡುವ (Speaking), ಓದುವ (Reading), ಬರೆಯುವ(Writing) ತಂತ್ರಗಳ್ನು ಕಲಿಸಬೇಕಾಗುತ್ತದೆ. ಅವನ ಬೋಧನೆ ಈ ಎಲ್ಲ ಅಂಶಗಳನ್ನು ಒಳಗೊಂಡಿರಬೇಕಾಗುತ್ತದೆ. ನಮ್ಮಶಾಲೆಗಳಲ್ಲಿ ಈಗಲೂ ಯಶಸ್ವಿಯಾಗಿ ಬೋಧನೆಗೊಳ್ಳುತ್ತಿರುವ ವ್ಯಾಕರಣ-ಭಾಷಾಂತರ ಪದ್ಧತಿ (Grammar Translation Method) ಕೇವಲ ಓದುವ ಬರೆಯುವ ತಂತ್ರಗಳಿಗೆ ಪ್ರಾಧಾನ್ಯತೆ ಕೊಟ್ಟಿದೆ. ಇಂತಹ ಬೋಧನೆ ಎಷ್ಟರಮಟ್ಟಿಗೆ ಸಹಾಯ ಮಾಡಬಲ್ಲದು? ಅಧ್ಯಾಪಕರಿಗೆ ಭಾಷಾಬೋಧನೆಯಲ್ಲಿ ಪರಿಣತಿ ನಿಡಬೇಕಾಗುತ್ತದೆ. ಈ ಕೆಲಸವನ್ನು ಸರ್ಕಾರ ಆಸ್ಥೆವಹಿಸಿ ಮಾಡಬಹುದು ನಮ್ಮ ದೇಶದ ಸ್ಥಿತಿಯಲ್ಲಿ ಕಡಿಮೆ ವೆಚ್ಚದ ಬೋಧನಾ ಉಪಕರಣಗಳನ್ನು ಶಾಲೆಗಳಿಗೆ ನೀಡುವುದರಿಂದ ಅಧ್ಯಾಪಕ ಪರಿಣಾಮಕಾರಿಯಾಗಿ ಬೋಧಿಸಬಹುದು ಧ್ವನಿಮುದ್ರಕ (Tape Recorder), ದೂರದರ್ಶನ (Television) ಮುಂತಾದವನ್ನು ಕೊಂಡುಕೊಳ್ಳಲಾಗುವುದಿಲ್ಲ. ದೂರದರ್ಶನವನ್ನು

ಎಲ್ಲಕಡೆಯೂ ಬಳಸಲಾಗುಪದಿಲ್ಲ ಬೋಧನೆಯ ಸುಧಾರಣೆಯು ಬಗ್ಗೆ ಸರ್ಕಾರ ಬೋಧಕರು ಮತ್ತು ಪ್ರಜೆಗಳು ಕಾರ್ಯನಿರತರಾಗಬೇಕು ಆಗ ಮಾತ್ರ ಸುಧಾರಣೆ ಸಾಧ್ಯ.

ಸಹಾಯಕ ಗ್ರಂಥಗಳು

1. Language Teaching-Robert Lado, (1964)
2. Teching Foreign-Language skills-Wilga M. Rivers (1968)
3. ಅನ್ಯಭಾಷಾಬೋಧನೆ—ಡಾ. ವಿಲ್ಯಂ/ಮಾಡ್ತ (1977)



ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವ
ನೆಂತೊಲಿವನಯ್ಯಾ ?

ಕೆರೆ ಹಳ್ಳ ಭಾವಿಗಳು ಮೈದೆಗೆದರೆ,
ಗುಳ್ಳೆ ಗೊರಚೆ ಚಿಪ್ಪುಗಳು ಕಾಣಬಹುದು,
ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ,
ಲಿಂಗವೆ ಕಾಣಬಹುದು.

ಯೋಜನೆ–ಪ್ರಯೋಜನೆ

ಒಂದೇ ವರ್ಷದ ಯೋಜನೆಯಿದ್ದರೆ ಬತ್ತವನ್ನು ಬಿತ್ತಿರಿ.
ಹತ್ತು ವರ್ಷದ ಯೋಜನೆಯಿದ್ದರೆ ಗಿಡವನ್ನು ನೆಡಿರಿ.
ಆದರೆ ನೂರು ವರ್ಷಗಳ ಯೋಜನೆಯಿದ್ದರೆ ಮನುಷ್ಯನನ್ನು
ಶಿಕ್ಷಿತನಾಗಿಸಲು ಪ್ರಾರಂಭಿಸಿರಿ.

—ಹುಆನ್‌ತ್ಸೆ

# ಸಂಪ್ರದಾಯ ಮತ್ತು ಮೂಢನಂಬಿಕೆ

— ಕು. ಚಿತ್ರಾ ಜೋಶಿ

ಸಂಪ್ರದಾಯ ಹಾಗೂ ಮೂಢನಂಬಿಕೆ ಈ ಎರಡೂ ಅಂಶಗಳಲ್ಲಿ ಆಳವಾದ ವ್ಯತ್ಯಾಸವಿದೆ. ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ಕೆಲ ವಿಶಿಷ್ಟ ರೂಢಿಗಳಿರುತ್ತವೆ ಅಥವಾ ಪ್ರತಿಯೊಂದು ಜನಾಂಗದ ಮೂಲಸ್ಥಾಪಕರು ಕೆಲ ನಿಯಮಗಳನ್ನು ಸಿದ್ಧಪಡಿಸಿ ಇಟ್ಟಿರುತ್ತಾರೆ. ಇದರಿಂದ ಮುಂಬರುವ ಪೀಳಿಗೆಗಳಿಗೆ ಮತ್ತೆ ಹೊಸ ಪದ್ಧತಿಗಳನ್ನು ನಿರ್ಮಿಸುವ ಆವಶ್ಯಕತೆ ಬೀಳದೆ ಹಿಂದಿನಿಂದ ಬಂದ ರೂಢಿಗಳನ್ನೇ ಅವರು ಪಾಲಿಸಿಕೊಂಡು ಹೋಗುತ್ತಾರೆ ಇವು ಸಂಪ್ರದಾಯಗಳು.

ಇನ್ನು ಕೆಲವೊಂದು ಪದ್ಧತಿಗಳನ್ನು ನಮ್ಮ ಪೂರ್ವಜರು ತಮ್ಮ ಅನುಕೂಲಕ್ಕಾಗಿಯೇ ಅಥವಾ ಮತ್ತಾವುದೋ ಕಾರಣಕ್ಕಾಗಿಯೇ ನಿರ್ಮಿಸಿಕೊಂಡರು. ಅವು ಮುಂದಿನ ಪೀಳಿಗೆಗೆ ಯಾವ ರೀತಿಯಿಂದಲೂ ಉಪಯೋಗಕ್ಕೆ ಬಾರದಂಥವುಗಳು ಆದರೆ ಈ ಪದ್ಧತಿಗಳೂ ಕೂಡಾ ಸಂಪ್ರದಾಯದ ಜೊತೆಯಲ್ಲೇ ಬೆಳೆದು ಬಂದು ಜನರು ಇವುಗಳನ್ನೂ ಕೂಡಾ ಪಾಲಿಸಲು ತೊಡಗಿದರು. ಆ ಪದ್ಧತಿಗಳ ಹಿಂದಿನ ಉದ್ದೇಶವನ್ನು ಜನರು ಆಲೋಚಿಸಲೇ ಇಲ್ಲ. ಇಂತಹ ಪದ್ಧತಿಗಳನ್ನೇ ನಾವು ಮೂಢನಂಬಿಕೆಗಳೆಂದು ಕರೆಯುತ್ತೇವೆ. ಹಿಂದಿನಿಂದಲೂ ಬಂದಂಥ ರೂಢಿ, ಪರಂಪರೆಗಳನ್ನು ಪಾಲಿಸಿಕೊಂಡು ಹೋಗುವದು ಸಂಪ್ರದಾಯವಾದರೆ, ಆ ರೂಢಿಗಳನ್ನು, ಅದು ಒಳ್ಳೆಯದಾಗಿರಲಿ ಕೆಟ್ಟವೇ ಆಗಿರಲಿ, ಪಾಲಿಸಿಕೊಂಡು ಹೋಗುವುದು ಮೂಢನಂಬಿಕೆಯೆನಿಸುತ್ತದೆ. ಈ ದೃಷ್ಟಿಯಿಂದ ಸಂಪ್ರದಾಯ ಒಳ್ಳೆಯದು, ಆದರೆ ಅದು ಮೂಢನಂಬಿಕೆಯಾಗಿ ಪರಿವರ್ತಿತವಾದರೆ ಮಾತ್ರ ಹಾನಿಕರವಾಗುತ್ತದೆ.

ಸಂಪ್ರದಾಯಗಳು ಹಾಗೂ ಮೂಢನಂಬಿಕೆಗಳು ಇವೆರಡೂ ಪೂರ್ವಕಾಲದಿಂದ ಸಾಗಿ ಬಂದ ಪದ್ಧತಿಗಳೇ ಆಗಿರುವುದರಿಂದ ಇವುಗಳಲ್ಲಿ ಸಂಪ್ರದಾಯಗಳಾವವು ಹಾಗೂ ಮೂಢನಂಬಿಕೆಗಳಾವವು ಎಂಬುದನ್ನು ಗುರುತಿಸುವುದು ಹೇಗೆ? ಈ ರೂಢಿಗಳ ಬಗೆಗೆ ಸ್ವಲ್ಪ ಆಲೋಚಿಸಿದರೆ ಅದು ತಾನಾಗಿಯೇ ಸ್ಪಷ್ಟವಾಗುತ್ತದೆ. ನಮ್ಮ ಜೀವನಕ್ಕೆ ಅನುಕೂಲವಾಗುವಂಥ ಪದ್ಧತಿಗಳನ್ನಷ್ಟೇ ಇಟ್ಟುಕೊಂಡು ಉಳಿದವುಗಳನ್ನು ತ್ಯಜಿಸಿಬಿಡಬಹುದು. ಕಾಲ ಬದಲಾದಂತೆ ಪರಿಸರವೂ ಬದಲಾಗುತ್ತ

ಹೋಗುವುದರಿಂದ ಆಯಾ ಪರಿಸರಕ್ಕೆ ತಕ್ಕಂತೆ ನಮ್ಮ ಆಚಾರ ವಿಚಾರಗಳು ಬದ ಲಾಗುವದು ಸಹಜ. ಬದಲಾದ ಪರಿಸರಕ್ಕೆ ಯೋಗ್ಯವಾದ ಪದ್ಧತಿಗಳನ್ನು ನಾವು ಅಳವಡಿಸಿಕೊಂಡರೆ ಸಾಕು, ನಮ್ಮ ಜೀವನ ಸುಗಮವಾಗಿ ಸಾಗುತ್ತದೆ. ಕೆಲ ಆಚಾ ರಗಳು ಆಗಿನ ಕಾಲಕ್ಕೆ ಮಾತ್ರ ಉಪಯುಕ್ತವಾಗುವಂತಹವಿರುತ್ತವೆ. ಅಂತಹವು ಗಳನ್ನು ಈಗ ನಾವು ತ್ಯಜಿಸಿಬಿಡಬಹುದು. ಕೆಲ ಪದ್ಧತಿಗಳನ್ನು ನಮ್ಮ ಅನುಕೂ ಲಕ್ಕೆ ತಕ್ಕಂತೆ ಪರಿವರ್ತಿಸಿಕೊಳ್ಳಬಹುದು. ಸಂಪ್ರದಾಯಗಳನ್ನು, ಅನುಸರಿಸಲೇ ಬೇಕೆಂಬ ನಿರ್ಬಂಧವಿಲ್ಲ. ಯೋಗ್ಯವಾಗಿ ಕಂಡವುಗಳನ್ನು ಪಾಲಿಸಬಹುದು, ಉಳಿದವುಗಳನ್ನು ಬಿಟ್ಟುಬಿಡಬಹುದು.

ಸನಾತನ ಸಂಪ್ರದಾಯಗಳು ಹೆಚ್ಚಾಗಿ ಮಾನಸಿಕ ವ್ಯಾಪಾರವನ್ನವಲಂಬಿಸಿ ದಂತಹವು. ದೇವರು, ದೈವ ಮುಂತಾದ ಅದೃಶ್ಯಶಕ್ತಿಗಳಲ್ಲಿ ನಂಬಿಕೆ ಇಡುವು ದನ್ನು ಈ ಸಂಪ್ರದಾಯಗಳು ಬೋಧಿಸುತ್ತವೆ. ಒಂದು ಕಾಲದಲ್ಲಿ ದೈವವೇ ಜನ ಭವಿಷ್ಯವನ್ನು ನಿರ್ಧರಿಸುವ ಸಾಧನವಾಗಿತ್ತು. ದೈವವೆಂಬ ಅದೃಶ್ಯಶಕ್ತಿಯನ್ನು ನಿರ್ಮಿಸಿದುದರ ಉದ್ದೇಶ ಇಷ್ಟೇ : ಕೈಗೊಂಡ ಕಾರ್ಯ ಎಷ್ಟೇ ಪ್ರಯತ್ನಪಟ್ಟರೂ ಕೂಡಾ ನೆರವೇರದೇ ಇದ್ದಾಗ ಮನಸ್ಸಿಗೆ ಖೇದವುಂಟಾಗುವದು ಸಹಜವಾದುದು. ಆ ಕಾರ್ಯ ನೆರವೇರುವುದು ದೇವರ ಅಥವಾ ದೈವದ ಮನಸ್ಸಿಗೆ ಬರಲಿಲ್ಲ ಎಂದು ಹೇಳಿ ಮನಸ್ಸನ್ನು ಸಮಾಧಾನಗೊಳಿಸಿಕೊಳ್ಳುವದುಂಟು. ಆದರೆ ದೈವದ ಮೇಲೆ ಭಾರ ಹಾಕಿ ಕೈಕಟ್ಟಿಕುಳಿತುಕೊಳ್ಳಲು ಯಾವ ಗ್ರಂಥದಲ್ಲೂ ಬೋಧಿಸಿಲ್ಲ. ಇತ್ತೀ ಚಿಗೆ ನಮ್ಮ ಜನ ಕೆಲ ಒಳ್ಳೆಯ ಸಂಪ್ರದಾಯಗಳನ್ನು ಅವುಗಳ ಹಿಂದೆ ಅಡಗಿದ ಉದಾತ್ತ ತತ್ವಗಳನ್ನು ತಿಳಿಯದೆ ಮೂಢನಂಬಿಕೆಗಳೆಂದು ಭಾವಿಸುವದು ಕಂಡು ಬರುತ್ತದೆ. ಧರ್ಮದ ಆಚರಣೆಯಲ್ಲಿ ನಂಬಿಕೆ ಇಡುವುದೂ ಅಂಧಶ್ರದ್ಧೆ ಎಂದು ಜನ ಈಗ ಭಾವಿಸುತ್ತಿರುವಂತೆ ಕಾಣುತ್ತದೆ. ಆದರೆ ಪ್ರತಿಯೊಂದು ಧರ್ಮದ ಆಚರಣೆಯ ಹಿಂದೆ ಒಂದು ಉದಾತ್ತ ತತ್ವ ಅಡಗಿರುವದು. ಅವುಗಳನ್ನು ನಾವು ವಿಶ್ಲೇಷಿಸಿ ನೋಡಿದಾಗ ತಿಳಿಯುತ್ತದೆ. ಉದಾಹರಣೆಗೆ ಈಗ ನಾವು ಆಚರಿಸುತ್ತಿ ರುವ ಹಬ್ಬಗಳನ್ನು ಕೇವಲ ಅಂಧ ಸಂಪ್ರದಾಯಗಳೆಂದು ಭಾವಿಸಬಾರದು. ಹಬ್ಬಗಳು ಜನಾಂಗದ ಐಕ್ಯಕ್ಕೆ ಹಿರಿಯ ಸಾಧನಗಳಾಗಿವೆ.

ನಾಗರಿಕತೆ ಬೆಳೆದಂತೆ ಮೂಢ ನಂಬಿಕೆಗಳು ಬಹುಮಟ್ಟಿಗೆ ಕಡಿಮೆಯಾಗುತ್ತ ನಡೆದಿದ್ದರೂ ಹಳ್ಳಿಗಳಲ್ಲಿ ಅವುಗಳ ಪ್ರಭಾವ ಇನ್ನು ಗಾಢವಾಗಿರುವದು ಕಂಡು ಬರುತ್ತದೆ. ಅಜ್ಞಾನಿ ಜನರ ಮೂಢನಂಬಿಕೆಗಳಿಂದ ಎಷ್ಟೋ ಹಾನಿಕಾರಕ ಸಂಗತಿಗಳು ಜರುಗಿದ್ದೂ ಉಂಟು. ಎಷ್ಟೋ ನಾಗರಿಕರೆನಿಸಿಕೊಂಡ ಜನರೂ ಕೂಡಾ ಈ ಮೂಢನಂಬಿಕೆಯುಳ್ಳವರಾಗಿದ್ದಾರೆ ಎಂದು ತಿಳಿದಾಗ ಆಶ್ಚರ್ಯವೆನಿ- ಸುತ್ತದೆ. ಇಂಥ ಮೂಢನಂಬಿಕೆಗಳಿಗೆ ಅನೇಕ ಉದಾಹರಣೆಗಳನ್ನು ಕೊಡ ಬಹುದು. ದಾರಿಯಲ್ಲಿ ನಡೆಯುತ್ತಿರುವಾಗ ಬೆಕ್ಕು ಅಡ್ಡ ಹಾಯ್ದುಹೋದರೆ ಅಶುಭವೆಂದು ತಿಳಿದು ಹಿಂದಿರುಗಿ ಮನೆಯದಾರಿ ಹಿಡಿಯುವ ಜನ ಈಗಲೂ ಇದ್ದಾರೆ. ನಮ್ಮ ಹಿರಿಯರನ್ನು, ಅವರು ಹೊರಗೆ ಹೊರಟಾಗ ಎಲ್ಲಿಗೆ ಹೊರಟೆ

ದ್ದೀರಿ ಎಂದು ಕೇಳಿದ ಕೂಡಲೇ ಸಿಟ್ಟಗೇಳುತ್ತಾರೆ. ಇವೆಲ್ಲಾ ಕೇವಲ ಮೂಢ ನಂಬಿಕೆಗಳೇ ಹೊರತು ಮತ್ತೇನೂ ಅಲ್ಲ. ಈ ಮೂಢನಂಬಿಕೆಗಳ ವಿಚಾರವಾಗಿ ಸ್ವಾರಸ್ಯವಾದ ಕತೆಯೊಂದನ್ನು ಹೇಳುತ್ತಾರೆ. ಒಬ್ಬ ಮನುಷ್ಯ ಪೂಜೆ ಮಾಡು ವಾಗ ಬೆಕ್ಕೊಂದು ಬಂದು ತೊಂದರೆ ಕೊಡತ್ತಿತ್ತಂತೆ. ಆಗ ಆ ಮನುಷ್ಯ ಪೂಜೆಗೆ ಕುಳಿತುಕೊಳ್ಳುವ ಮೊದಲು ಆ ಬೆಕ್ಕನ್ನು ಒಂದು ಬುಟ್ಟಿಯಲ್ಲಿ ಮುಚ್ಚಿಟ್ಟು ನಂತರ ಪೂಜೆ ಪ್ರಾರಂಭಿಸುತ್ತಿದ್ದನಂತೆ. ಆತನ ನಂತರ ಅವನ ಮಗನೂ ತಂದೆಯನ್ನನು ಸರಿಸಿ ಬೆಕ್ಕನ್ನು ಮುಚ್ಚಿಡುತ್ತಿದ್ದನಂತೆ. ಹೀಗೆ ಆತನ ನಂತರದವರೆಲ್ಲರೂ ಬೆಕ್ಕನ್ನು ಹುಡುಕಿ ತಂದು ಪೂಜೆಗೆಮೊದಲು ಮುಚ್ಚಿಡಲು ಪ್ರಾರಂಭಿಸಿದರು. ಹೀಗಿವೆ ಅಂಧ ಸಂಪ್ರದಾಯಗಳು ! ಈ ಅಂಧ ಸಂಪ್ರದಾಯಗಳ ರೌದ್ರಮುಖ ತೀರ ಭಯವನ್ನು ಹುಟ್ಟಿಸುವಂಥದಾಗಿದೆ. ಪ್ರಾಣಿಬಲಿ ಕೊಡುವ ಪರಿಪಾಠ ಇನ್ನು ಹಳ್ಳಿಗಳಲ್ಲಿವೆ. ನರಬಲಿ ಕೊಟ್ಟ ಉದಾಹರಣೆಗಳೂ ಕೂಡಾ ನಮ್ಮಲ್ಲಿ ಅನೇಕವಿದೆ. ಮಳೆ ಬರಲಿಲ್ಲವೆಂದು ತನ್ನ ಮಗನನ್ನೇ ಬಲಿ ಕೊಟ್ಟ ಅಮಾನುಷ ಕೃತ್ಯ ಜರುಗಿದೆ ಈ ಅಜ್ಞಾನ–ಅಂಧಶ್ರದ್ಧೆಯ ಕಾರಣದಿಂದಾಗಿ.

ಭಾರತೀಯ ಸನಾತನ ಸಂಪ್ರದಾಯಗಳು ಬಹು ಅರ್ಥಮಯವಾಗಿವೆ. ಅವುಗಳ ಹಿಂದೆ ಇರುವ ಅರ್ಥ ಬಹುವಿಶಾಲವಾದುದಾಗಿದೆ. ದೇವರಲ್ಲಿ ನಂಬಿಕೆ ಇಡಬೇಕು ಎಂದು ಹೇಳುತ್ತದೆ ಸಂಪ್ರದಾಯ. ಈ ಅಂಶ ನಮ್ಮ ಮನಶ್ಶಾಂತಿಗೆ ಕಾರಣವಾಗುವುದಲ್ಲದೆ ಆತ್ಮವಿಶ್ವಾಸವನ್ನು ಒದಗಿಸುತ್ತದೆ. ಅಂತಃಶಕ್ತಿಯ ಹೆಚ್ಚಳಕ್ಕೆ ಕಾರಣವಾಗುತ್ತದೆ. ಹಬ್ಬಗಳನ್ನು ಆಚರಿಸಬೇಕೆಂದು ಹೇಳುತ್ತವೆ ಸಂಪ್ರದಾಯ, ಬಂಧುಬಳಗದವರೆಲ್ಲ ಒಂದೆಡೆ ಕಲೆತು ಸಂತೋಷಪಡಲು ಇದು ಒಳ್ಳೆಯ ಅವಕಾಶ. ಯುಗಾದಿ ಹಬ್ಬದಲ್ಲಿ ಬೇವು ಹಾಕಿದ ನೀರಿನ ಸ್ನಾನ ಮಾಡುವರಲ್ಲದೆ ಬೇವು–ಬೆಲ್ಲವನ್ನು ತಿನ್ನುವರು. ಬೇವಿನ ಕಹಿಯಿಂದ ದೇಹದ ಒಳಗಿನ ಹಾಗೂ ಹೊರಗಿನ ಕ್ರಿಮಿಗಳು ನಾಶವಾಗುವವು. ನಮ್ಮ ಕೆಲಸಂಪ್ರ ದಾಯಗಳ ಹಿಂದೆ ಇಂಥ ವೈಜ್ಞಾನಿಕದೃಷ್ಟಿ ಅಡಗಿರುವುದನ್ನು ನಾವುಕಾಣುತ್ತೇವೆ. ಧಾರ್ಮಿಕ ವಿಧಿಗಳನ್ನು ಮೂಢಸಂಪ್ರದಾಯಗಳೆಂದು ಭಾವಿಸಲಾಗದು. ಮಡಿ ಮೈಲಿಗೆಗಳ ಮೂಲ ಉದ್ದೇಶ ಸ್ವಚ್ಛತೆ. ಆದರೆ ಮುಂದೆ ಬಂದಂತೆಲ್ಲ ಆ ಉದ್ದೇಶ ಮರೆಯಾಗಿ ಹೋದುದನ್ನು ನಾವು ಕಾಣುತ್ತೇವೆ.

ಇಪ್ಪತ್ತನೆಯ ಶತಮಾನದ ವೈಚಾರಿಕ ಯುಗದಲ್ಲಿ ಪ್ರತಿಯೊಂದು ಆಚರಣೆ ಯನ್ನೂ ಅದು ಸರಿಯೋ ತಪ್ಪೋ, ಅಥವಾ ಅದನ್ನು ನಿರ್ಮಿಸಿದುದರ ಮೂಲ ಉದ್ದೇಶವೇನು ಎಂದು ತಿಳಿದು ನೋಡುವ ಅವಶ್ಯಕತೆ ಇದೆ. ಸಾಂಪ್ರದಾಯಿಕ ಆಚರಣೆಗಳನ್ನು ಕೇವಲ ಅಂಧ ಶ್ರದ್ಧೆಗಳೆಂದು ಭಾವಿಸಿ ಅವುಗಳನ್ನು ಬಿಟ್ಟುಬಿಡದೆ ವಿಚಾರಿಸಿನೋಡಿ ತಮಗೆ ಸರಿ ಕಂಡವುಗಳನ್ನು ಬಿಡಬಹುದು.

ಆದರೂ ಇಷ್ಟುಮಾತ್ರ ಹೇಳಬಹುದು, ಸಂಪ್ರದಾಯಗಳು ನಮ್ಮ ಸಂಸ್ಕೃ ತಿಯ ವಾಹಕಗಳಾಗಿವೆ.

# ಕನ್ನಡ ನಾಡಿನಲ್ಲಿ ಅಶೋಕನ ಶಿಲಾ ಶಾಸನಗಳು

ಎಸ್. ಕೆ. ಕೊಪ್ಪಾ.

ಕ್ರಿ. ಪೂ. ೩ ನೆಯ ಶತಮಾನದ ವೇಳೆಗಾಗಲೇ ಕರ್ನಾಟಕ ತನ್ನದೇ ಆದ ವೈಶಿಷ್ಟ್ಯಗಳಿಂದಲ್ಲದಿದ್ದರೂ ಮೌರ್ಯರ ಒಂದು ಪ್ರಮುಖ ರಾಜಕೀಯ ಘಟಕವಾಗಿ ರೂಪುಗೊಂಡಿತ್ತು. ಮೌರ್ಯ ಅರಸು ಚಂದ್ರಗುಪ್ತ ಗುರು ಭದ್ರಬಾಹು ಮುನಿ-ಯೊಂದಿಗೆ ದಕ್ಷಿಣದ ಶ್ರವಣಬೆಳ್ಗೊಳಕ್ಕೆ ಬಂದು, ಇಲ್ಲಿಯೇ ನಿರ್ವಾಣ ಹೊಂದಿದ ನೆಂಬ ಸಾಂಪ್ರದಾಯಕ ನಂಬಿಕೆ ಅಲ್ಲಿಯ ೭ ನೆಯ ಶತಮಾನದ ಶಾಸನವೊಂದರಲ್ಲಿ ಚಿತ್ರಿತವಾಗಿದೆ. ಆದರೆ ಈ ಚಂದ್ರಗುಪ್ತ ಮೌರ್ಯ ಅರಸರಲ್ಲಿ ಯಾರೆಂಬ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿರುವದರಿಂದ ಈಗ ನಮ್ಮ ನಾಡಿನಲ್ಲಿ ಖಚಿತವಾದ ಲಿಖಿತ ದಾಖಲೆಗಳು ಸಿಗುವುದು ಕ್ರಿ. ಪು. ೩ನೆಯ ಶತಮಾನದಿಂದ ಮಾತ್ರ ಇತಿಹಾಸವನ್ನು ರೂಪಿಸುವಲ್ಲಿ ಶಾಸನಗಳ ಪಾತ್ರ ತುಂಬಾ ಹಿರಿದು. ಅವುಗಳನ್ನು ಡಾ| ಆರ್. ಸಿ. ಹಿರೇಮಠರು 'ನಮ್ಮ ಪ್ರಾಚೀನ ಸಂಸ್ಕೃತಿಯ ಮೂಕಸಾಕ್ಷಿ' ಗಳೆಂದು ಕರೆದರೆ ಡಾ| ಎಂ. ಎಂ. ಕಲ್ಬುರ್ಗಿಯವರು 'ಪ್ರಾಚೀನ ಬದುಕಿನ ಸಮಸ್ತ ಸಂವೇದನೆಗಳ ಪ್ರಾಮಾಣಿಕಧ್ವನಿ' ಎಂದಿದ್ದಾರೆ. ಎರಡು ಸಾವಿರ ವರ್ಷಗಳಾಚೆ ಯಿಂದ ಪ್ರಾರಂಭವಾಗುವ ಕನ್ನಡನಾಡಿನ ಶಾಸನ ಪ್ರಪಂಚ, ಸಂಖ್ಯೆ ಮತ್ತು ಸತ್ವದೃಷ್ಟಿಯಿಂದ ಭಾರತದಲ್ಲಿ ದ್ವಿತೀಯಸ್ಥಾನ ಪಡೆಯುತ್ತದೆ; ಸದ್ಯತಿಳಿದಮಟ್ಟಿಗೆ ಇಲ್ಲಿ ದೊರಕಿರುವ ಮೊಟ್ಟಮೊದಲ ಬರಹಗಳು ಕ್ರಿ. ಪು. ೩ನೆಯ ಶತಮಾನದ ಬ್ರಾಹ್ಮಿಲಿಪಿಯಲ್ಲಿರುವ, ಪ್ರಾಕೃತಭಾಷೆಯ ಅಶೋಕನ ರಾಜಶಾಸನಗಳು (Edicts) ಭಾರತದ ಬೇರೆ ಬೇರೆ ಭಾಗಗಳಲ್ಲಿ ದೊರೆಯುವ ಅವನ ಶಾಸನಗಳು ಉತ್ತರದ ಅಪಘಾನಿಸ್ಥಾನ, ನೇಪಾಳ, ಪೂರ್ವಕ್ಕೆ, ಬಂಗಾಲ ಬಿಹಾರದಿಂದ ದಕ್ಷಿಣದ ಕರ್ನಾಟಕದವರೆಗೆ ಹಬ್ಬಿನಿಂತಿವೆ. ಇವುಗಳನ್ನೆಲ್ಲ ಉಪಯೋಗಿಸಿಕೊಂಡು ನಮ್ಮ ನಾಡಿನ ಇತಿಹಾಸ ರಚಿಸುವ ಕಾರ್ಯ ಈಗ ನಡೆಯಬೇಕಾಗಿದ್ದು, ನಡೆದಿದೆ.

ಮೌರ್ಯರು ಕಲಿಂಗದೇಶದೊಡನೆ ನಡೆಸಿದ ಯುದ್ಧ (ಕ್ರಿ. ಪು. ೨೬೩) ಅಶೋಕನ ಜೀವನದಲ್ಲಿ ಒಂದು ಕ್ರಾಂತಿಕಾರಕವಾದ ಘಟನೆಯೆಂದು ಹೇಳಬಹುದು ಅದು ಅವನ ಜೀವನ ಗುರಿಯನ್ನು ಬದಲಿಸಿ ಬದುಕಿನ ಹೊಸ ಬಾಗಿಲನ್ನೇ ತೆರೆಯಿ-ಸಿತು. ಇದರಿಂದ ಪ್ರೇರಿತನಾದ ಆತ ನಾಡಿನಲ್ಲೆಲ್ಲ ಧರ್ಮದಯೆ ಸಹಾನುಭೂತಿ ಗಳ ಮಹತ್ವವನ್ನು ಸಾರಲು ಕಂಕಣಬದ್ಧನಾದ. ಅದರ ಫಲ ಆತನ ರಾಜಶಾಸನ ಗಳು. ತನ್ನ ಮನವಿ ಕಳಕಳಿ ದೇಶದ ಪ್ರಜೆಗಳಿಗೆಲ್ಲ ತಿಳಿಯಲಿ ತಲುಪಲಿ ಎಂದು ನಾಡಿನ ಮೂಲೆಮೂಲೆಗಳಲ್ಲಿ ಶಾಶ್ವತವಾಗಿರುವಂತೆ ಕಗ್ಗಲ್ಲಿನ ಬಂಡೆಗಳ ಮೇಲೆ, ಶಿಲಾಸ್ತಂಭಗಳ ಮೇಲೆ ಹಾಗೂ ಗವಿಗಳಲ್ಲಿ ಶಾಸನಪ್ರತಿಗಳನ್ನು ಕೊರೆಯಿಸಿದ. ಆತನ ಶಾಸನಗಳು ಪ್ರಾದೇಶಿಕ ಭಿನ್ನತೆಯಿಂದ ಖರೋಷ್ಠಿಲಿಪಿ, ಗ್ರೀಕ್ ಮತ್ತು ಅರೈಮಿಕ ಲಿಪಿಭಾಷಾ ವ್ಯತ್ಯಾಸಗಳನ್ನು ಬಿಟ್ಟರೆ ಅವೆಲ್ಲವುಗಳೂ ಬ್ರಾಹ್ಮಿಲಿಪಿ ಪ್ರಾಕೃತಭಾಷೆಯಲ್ಲಿವೆ. ಕರ್ನಾಟಕದಲ್ಲಿಯ ಶಾಸನಗಳಿಗೂ ಬ್ರಾಹ್ಮಿಲಿಪಿ, ಪ್ರಾಕೃತಭಾಷೆ ಬಳಸಿದುದನ್ನು ನೋಡಿದರೆ ಆ ಕಾಲಕ್ಕೆ ಈ ಭಾಗದಲ್ಲಿ ಅದು ಸರ್ವಸಾಮಾನ್ಯವಾಗಿರಬೇಕು. ಅಶೋಕನ ಕಾಲಕ್ಕೆ ಕನ್ನಡಭಾಷೆಯ ಸ್ವರೂಪ ಯಾವ ತೆರನಾಗಿತ್ತೆಂಬುದು ಇಲ್ಲಿಯ ಶಾಸನಗಳಿಂದ ನಮಗೆ ಗೊತ್ತಾಗುವುದಿಲ್ಲ. ಅಷ್ಟೇ ಏಕೆ ಮುಂದಿನ ಕ್ರಿ. ಶ. ನಾಲ್ಕುಶತಮಾನಗಳ ಅವಧಿಯಲ್ಲಿಯೂ ಅದರ ನಿಕೃಷ್ಟ ರೂಪ ತಿಳಿಯುವುದಿಲ್ಲ. ಕ್ರಿ. ಪು. ೩ರರಿಂದ ಕ್ರಿ. ಶ. ೪ನೆಯ ಶತಮಾನದವರೆಗೆ ಅಂದರೆ ಏಳುನೂರು ವರ್ಷ ಸುಧೀರ್ಘಾವಧಿಯ ಶಾಸನಗಳೆಲ್ಲವೂ ಪ್ರಾಕೃತವಾದುದರಿಂದ ನಮ್ಮ ನಾಡುನುಡಿಗಳು ಕನ್ನಡವೆಂಬ ವೈಶಿಷ್ಟ್ಯದಿಂದ ಬದುಕಿರುವುದು ಸಂಶಯಾಸ್ಪದವೆನಿಸುತ್ತದೆ. ಒಂದು ವೇಳೆ ಕನ್ನಡವೆಂಬ ಪ್ರತ್ಯೇಕ ಭಾಷೆ ಆ ಕಾಲಕ್ಕೆ ಇದ್ದಿದ್ದರೆ ಸರ್ವಜನರಿಗೂ ತನ್ನ ಸಂದೇಶ ತಿಳಿಯಲಿ ತಲುಪಲಿ ಎಂದು ಬಯಸಿದ ಅಶೋಕ ಆ ಭಾಷೆಯಲ್ಲಿಯೇ ಶಾಸನ ಬರೆಯಿಸುತ್ತಿದ್ದನೆನ್ನುವಲ್ಲಿ ಯಾವ ಸಂದೇಹವೂ ಇಲ್ಲ. ತನ್ನ ನಾಡಿನ ಜನತೆಗಷ್ಟೇ ಅಲ್ಲದೆ ಬೇರೆಭಾಷೆಯ ಗಡಿನಾಡ ಜನರಿಗಾಗಿಯೂ ಶಾಸನ ಬರೆಯಿಸಿದ್ದನ್ನು ಗಮನಿಸಿದರೆ ಆತನ ಉದ್ದೇಶ ನಮಗೆ ಸ್ಪಷ್ಟವಾಗುತ್ತದೆ.

ಇಂದು ದೇಶದ ತುಂಬೆಲ್ಲ ದೊರೆತ ಅಶೋಕನ ಶಿಲಾಶಾಸನಗಳನ್ನು ವಿಷಯ ವೈವಿಧ್ಯ ಮತ್ತು ಸ್ವರೂಪಗಳ ದೃಷ್ಟಿಯಿಂದ : ಪ್ರಮುಖ ಶಿಲಾಸಾಸನ, ಲಘುಶಿಲಾ ಶಾಸನ, ಸ್ತಂಭಶಾಸನ, ಲಘುಸ್ತಂಭಶಾಸನ, ಗವಿಶಾಸನ; ಗ್ರೀಕ್ ಮತ್ತು ಅರೈಮಿಕ್ ಶಾಸನಗಳೆಂದು ಆರುವಿಧವಾಗಿ ವರ್ಗೀಕರಿಸಲಾಗಿದ್ದು; ಅವುಗಳಲ್ಲಿ ಲಘು ಶಿಲಾಶಾಸನಗಳೇ ಮೊದಲು (ಕ್ರಿ. ಪು. ೨೫೯-೨೫೭) ಕೆತ್ತಲ್ಪಟ್ಟವೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಆಶ್ಚರ್ಯವೆಂದರೆ ಈ ವರೆಗೆ ಕರ್ನಾಟಕದಲ್ಲಿ ದೊರೆತ ಅಶೋಕನ ಶಿಲಾಶಾಸನಗಳೆಲ್ಲವೂ ಲಘುಶಿಲಾಶಾಸನಗಳ ಮಾದರಿಗೆ ಸೇರಿದವುಗಳು. ಇತ್ತೀಚೆಗೆ ಬಳ್ಳಾರಿಜಿಲ್ಲೆಯ ನಿಟ್ಟೂರಿನಲ್ಲಿ ಸಂಶೋಧಿಸಿ ಪ್ರಕಟಿಸಿದ ಎರಡು ಅಶೋಕ ಶಾಸನಗಳನ್ನು ಸೇರಿಸಿದರೆ ಭಾರತದಲ್ಲಿ ಒಟ್ಟು ಇವು

ಗಳ ಸಂಖ್ಯೆ ಹದಿನೇಳು. ದಕ್ಷಿಣ ಭಾರತಕ್ಕೆ ಸೀಮಿತವಾದವುಗಳು ಹತ್ತು. ಇದರಲ್ಲಿ ಕರ್ನಾಟಕದವು ಎಂಟು. ಒಟ್ಟು ಲಘುಶಿಲಾಶಾಸನಗಳಲ್ಲಿ ಸುಮಾರು ಅರ್ಧದಷ್ಟನ್ನು ಪಡೆದದ್ದು ಕರ್ನಾಟಕದ ಹೆಮ್ಮೆ. ಇಲ್ಲಿ ಅವು :

| | |
|---|---|
| ೧) ಬ್ರಹ್ಮಗಿರಿ<br>೨) ಸಿದ್ಧಾಪೂರ<br>೩) ಜಟಂಗರಾಮೇಶ್ವರ | ಚಿತ್ರದುರ್ಗದ ಜಿಲ್ಲೆಯ, ಮೊಳಕಾಲ್ಮೂರ ತಾಲೂಕು. |
| ೪) ಮಸ್ಕಿ<br>೫) ಗವಿಮಠ<br>೬) ಪಾಲ್ಕಿಗುಂಡ | ರಾಯಚೂರ ಜಿಲ್ಲೆಯ, ಲಿಂಗಸೂರು-(ಮಸ್ಕಿ) ಮತ್ತು ಕೊಪ್ಪಳ ತಾಲ್ಲೂಕು |
| ೭) ನಿಟ್ಟೂರು<br>೮) ನಿಟ್ಟೂರು | ಬಳ್ಳಾರಿಯ ಜಿಲ್ಲೆಯ, ಶಿರಗುಪ್ಪ ತಾ. |

ಹೀಗೆ ಮೂರು ಜಿಲ್ಲೆಗಳಲ್ಲಿ ದೊರಕಿದ್ದು, ಮೊದಲಿನ ಮೂರನ್ನು ೧೮೯೨ ರಲ್ಲಿ ಅಂದಿನ ಮೈಸೂರ ಸಂಸ್ಥಾನದ ಪುರಾತತ್ವಶಾಖೆಯ ಮುಖ್ಯಾಧಿಕಾರಿಗಳಾಗಿದ್ದ ಬಿ. ಎಲ್. ರೈಸ್‌ರವರು ಕಂಡುಹಿಡಿದು ಪ್ರಕಟಿಸಿದರು. ಮಸ್ಕಿಶಾಸನವನ್ನು ಚಿನ್ನದ ಗಣಿಗೆ ಸಂಬಂಧಿಸಿದ ಇಂಜನಿಯರ ಸಿ. ಬೀಡನ್ ೨೭-೧-೧೯೧೫ ರಂದು ಕಂಡರು. ಅದೇ ವರ್ಷ ಅಂದು ಕನ್ನಡದ ಪ್ರಸಿದ್ಧ ಶಾಸನತಜ್ಞರೆನಿಸಿದ ಶ್ರೀ ಹೊಸಕೋಟೆ ಕೃಷ್ಣಶಾಸ್ತ್ರಿಗಳು ಅದರ ಮೂಲ ಪಾಠ ಮತ್ತು ಭಾಷಾಂತರ ವನ್ನು ಪ್ರಕಟಿಸಿದರು. ಗವಿಮಠ ಮತ್ತು ಪಾಲ್ಕಿಗುಂಡ ಶಾಸನಗಳನ್ನು ಕೊಪ್ಪಳದ ನಾರಾಯಣಶಾಸ್ತ್ರಿ ಮತ್ತು ಹೈದರಾಬಾದ ಸಂಸ್ಥಾನದ ಪುರಾತತ್ವಶಾಖೆಯ ಮುಖ್ಯಸ್ಥರಾದ ಯಾಝುದಾನಿಯವರು ೧೯೩೧ ರಲ್ಲಿ ಬೆಳಕಿಗೆ ತಂದರು. ಇತ್ತೀಚೆಗೆ ನಿಟ್ಟೂರಿನ ಚಿಕ್ಕುಡ್ಡಪ್ಪ ಬೆಟ್ಟದಲ್ಲಿ ದೊರೆತ ಎರಡು ಲಘುಶಿಶಿಲಾಶಾಸನಗಳನ್ನು ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ಮತ್ತು ಮತ್ತು ಪ್ರಾಚ್ಯಶಾಸ್ತ್ರ ವಿಭಾಗದ ಮುಖ್ಯಸ್ಥರೂ, ಭಾರತೀಯ ಕಲಾ ಇತಿಹಾಸ ಸಂಸ್ಥೆಯ ನಿರ್ದೇಶಕರೂ ಆದ ಡಾ| ಎಸ್. ಶೆಟ್ಟರ ಮತ್ತು ಅವರ ಸಹೋದ್ಯೋಗಿಗಳು ಅಗಸ್ಟ ೨೫-೧೯೭೭ ರಂದು ಸಂಶೋಧಿಸಿ ಸಾರಸ್ವತ ಪ್ರಪಂಚಕ್ಕೆ ನೀಡಿದರು.

ಹಿಂದೆ ಹೇಳಿದ ಚಿತ್ರದುರ್ಗ ಮತ್ತು ರಾಯಚೂರು ಜಿಲ್ಲೆಗಳ ಮೂರು ಮೂರು ಶಿಲಾಶಾಸನಗಳ ಗುಂಪನ್ನು ನೋಡಿದರೆ ಬಳ್ಳಾರಿ ಜಿಲ್ಲೆಯಲ್ಲಿ ಒಂದು ಕಡಿಮೆಯಾದದ್ದು ಇಲ್ಲವೆ ಇನ್ನೊಂದು ಇದ್ದಿರಬಹುದೆಂದು, ಮೇಲ್ನೋಟದಿಂದಲೇ ಯಾರಾದರೂ ಗುರುತಿಸಬಹುದು. ಮಸ್ಕಿಯೊಂದನ್ನುಳಿದು (ಮಸ್ಕಿ, ಪಾಲ್ಕಿಗುಂಡ

ಮತ್ತು ಗವಿಮಠಗಳಿಂದ ಸುಮಾರು ೫೪-೫೫ ಮೈಲಿ ಅಂತರ ಮೇಲಿದೆ) ಒಂದೊಂದು ಮಾಲಿಕೆಗಳಲ್ಲಿಯ ಶಾಸನಗಳು ಅತೀ ಸಮೀಪದ ಅಂತರವನ್ನು (ಹೆಚ್ಚೆಂದರೆ ೧ ರಿಂದ ೨ ಮೈಲಿ) ಹೊಂದಿದ್ದು ಗಮನಿಸಿದಾಗ ನಿಟ್ಟೂರ ಸಮೀಪದಲ್ಲಿ ಇಲ್ಲವೆ ಬಳ್ಳಾರಿ ಜಿಲ್ಲೆಯಲ್ಲಿ ಇನ್ನೊಂದು ಶಾಸನ ದೊರೆಯಬೇಕಾದ ಸಾಧ್ಯತೆಯನ್ನು ಯಾರೂ ಅಲ್ಲ ಗಳೆಯುವಂತಿಲ್ಲ. ಅಲ್ಲದೇ "ಇಲ್ಲಿಯ ವರೆಗೂ ಕರ್ನಾಟಕದಲ್ಲಿ ಅಶೋಕನ ಶಾಸನ ಗಳು ಕಗ್ಗಲ್ಲಿನ ಬೆಟ್ಟದ ಸಾಲಿನಲ್ಲಿಯೇ ದೊರೆತಿರುವುದರಿಂದ ಇದೇ ಸಾಲಿನಲ್ಲಿ ಮುಂದುವರಿದರೆ ಇನ್ನು ಅವನ ಶಾಸನಗಳು ದೊರೆಯಬಹುದೆಂಬ ಆಸೆಯನ್ನು ಮೂಡಿಸುತ್ತವೆ" ಎನ್ನುವ ಡಾ| ಎಸ್. ಶೆಟ್ಟರ್, ಎಸ್. ರಾಜಶೇಖರ ಅವರ ಮಾತು ಮೇಲಿನ ವಿಷಯಕ್ಕೆ ಮತ್ತಷ್ಟು ಪುಷ್ಟಿಯನ್ನು ನೀಡುತ್ತದೆ. ನಮ್ಮ ಇತಿ ಹಾಸದಬಗೆಗಿದ್ದ ಅನಾದರ, ಜನತೆಯ ಅಜ್ಞಾನ, ಪ್ರಕೃತಿಯ ಪ್ರಕೋಪದಿಂದಾಗಿ ನಮ್ಮಿಂದ ಕಣ್ಮರೆಯಾದ ಶಾಸನ ಮತ್ತು ಪುರಾತನ ಅವಶೇಷಗಳನ್ನು ಸರಕಾರ, ವಿಶ್ವವಿದ್ಯಾಲಯಗಳಂಥ ಸಂಸ್ಥೆಗಳ ಸಹಾಯದಿಂದ ಹುಡುಕಿ ತೆಗೆಯಬೇಕಾಗಿದೆ.

ಚಿತ್ರದುರ್ಗ, ರಾಯಚೂರು, ಬಳ್ಳಾರಿ ಮಾಲಿಕೆಗಳ ಒಟ್ಟು ಎಂಟು ಶಾಸನ ಗಳಲ್ಲಿ, ಚಿತ್ರದುರ್ಗ ಮಾಲಿಕೆಯ ಶಾಸನಗಳ ಪ್ರಾರಂಭದಲ್ಲಿ ಬರುವ ಆಜ್ಞಾರೂಪದ ವಿವರ ಮತ್ತು ಅಂತ್ಯದಲ್ಲಿಯ ಕೆಲವು ಹೆಚ್ಚಿನ ಸಾಲುಗಳ ಹೆಚ್ಚಿನ ಉಪಶಾಸನದ ಮೂಲಕ ರಾಯಚೂರು ಮಾಲಿಕೆಯಿಂದ ಭಿನ್ನವಾಗುತ್ತದೆ. ಬಳ್ಳಾರಿ ಮಾಲಿಕೆಯ ನಿಟ್ಟೂರಿನ ಎರಡು ಶಾಸನಗಳಲ್ಲಿ ಒಂದು ರಾಯಚೂರು ಮಾಲಿಕೆಯನ್ನು ಹೋಲು ತಿದ್ದು ಮತ್ತೊಂದು ವಿಚಿತ್ರವೆನ್ನುವಂತೆ ಚಿತ್ರದುರ್ಗ ಮಾಲಿಕೆಯ ಉಪಶಾಸನವನ್ನು ಹೋಲುತ್ತದೆ. ಇದನ್ನು ಕರ್ನಾಟಕದಲ್ಲಿ ದೊರೆತ ಪ್ರತ್ಯೇಕ ಉಪಶಾಸನವೆಂದು ಹೇಳಬಹುದು. ಆರಂಭಾಂತ್ಯದ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ನಿಟ್ಟೂರಿನ ಎರಡು ಶಾಸನಗಳನ್ನು ಚಿತ್ರದುರ್ಗ ಮಾಲಿಕೆಯೊಡನೆ ಹೋಲಿಸಿದರೆ ಎರಡರ ಪಾಠಕ್ರಮ ಒಂದೇ ರೀತಿಯಾಗಿರುವುದನ್ನು ಕಾಣುತ್ತೇವೆ. ಒಟ್ಟು ಚಿತ್ರದುರ್ಗ ಮಾಲಿಕೆಯ ಆರಂಭದ ಒಕ್ಕಣಿಕೆ ಅಂತ್ಯದ ಉಪಶಾಸನ, ನಿಟ್ಟೂರಿನ ಪ್ರತ್ಯೇಕ ಉಪಶಾಸನ ಬಿಟ್ಟರೆ ಸ್ವಲ್ಪ ಬದಲಾವಣೆಯೊಂದಿಗೆ ಉಳಿದೆಲ್ಲ ಶಾಸನಗಳ ಪಾಠಕ್ರಮ ಒಂದೇ ರೀತಿಯಾಗಿದೆಯೆಂದು ಹೇಳಲು ಯಾವ ಆತಂಕವೂ ಇಲ್ಲ.

ಇತಿಹಾಸದ ಅಜ್ಞಾನ, ಮೂಢನಂಬಿಕೆ, ಪ್ರಕೃತಿಯ ವಿಕೋಪದಿಂದಾಗಿ ಅಲ್ಪ ಸ್ವಲ್ಪ ನಷ್ಟಗೊಂಡ (ಪಾಲ್ಕಿಗುಂಡ ಮತ್ತು ಜಟಿಂಗರಾಮೇಶ್ವರದ ಶಾಸನಗಳು ಅತಿ ಯಾಗಿ ನಷ್ಟಗೊಂಡಿವೆ.) ಸುಮಾರು ಇಲ್ಲಿಯ ಎಲ್ಲ ಶಾಸನಗಳೂ ಮೊನ್ನೆ ಮೊನ್ನೆ ವರೆಗೆ ವಿದ್ವಾಂಸರ ಕಣ್ಣಿಗೆ ಬೀಳದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಬಿ. ಎಲ್. ರೈಸ್‌ರಿಂದ ಸಂಶೋಧಿತವಾದ ಚಿತ್ರದುರ್ಗ ಮಾಲಿಕೆಯ ಶಾಸನಗಳು "ಸುವಂಣ ಗಿರೀತೇ ಆಯಪುತಣ ಮಹಾಮಾತಾಣಂ ಚ ವಚನೇನ ಇಸಿಲಸಿ ಮರ್ಹಮಾತಾ ಆರೋಗಿಯಂ ವತವಿಯಾ ಹೇವಂ ಚ ವತವಿಯಾ" (ಸುವರ್ಣಗಿರಿಯ ಆರ್ಯಪುತ್ರ ಮತ್ತು ಮಹಾಮಾತ್ಯರ ಆರೋಗ್ಯವನ್ನು ವಿಚಾರಿಸಿ ಈ ರೀತಿ ತಿಳಿಸಬೇಕು.)

ಎಂದು ಪ್ರಾರಂಭವಾಗುತ್ತಿದ್ದು; ಅಶೋಕನ ಆಜ್ಞೆಯು ಸುವರ್ಣಗಿರಿಯಲ್ಲಿರುವ ಆರ್ಯಪುತ್ರ ಮತ್ತು ಮಹಾಮಾತ್ಯರ ಮೂಲಕ ಇಸಿಲದಲ್ಲಿರುವ ಮಹಾಮಾತ್ಯರಿಗೆ ತಿಳಿಸಲ್ಪಟ್ಟಿದೆ. ಕರ್ನಾಟಕ ಅಂದು ಅಶೋಕ ಮಹಾರಾಜನ ದಕ್ಷಿಣ ಭಾಗದ ಪ್ರಮುಖ ರಾಜಕೀಯ ಘಟಕವಾಗಿತ್ತೆನ್ನಲು ಇಲ್ಲಿ ದೊರೆತ ಎಂಟು ಶಾಸನಗಳೊಂದಿಗೆ ಆರ್ಯಪುತ್ರ ಮತ್ತು ಮಹಾಮಾತ್ಯರು ಸುವರ್ಣಗಿರಿ, ಇಸಿಲವನ್ನು ನೋಡಿಕೊಳ್ಳುತ್ತಿದ್ದರೆಂಬ ಪ್ರಮುಖ ಆಧಾರವೇ ಸಾಕು. ಆದರೂ ಇಲ್ಲಿಯ ಶಾಸನೋಕ್ತ ಸುವರ್ಣಗಿರಿ ಯಾವುದೆಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಮಸ್ಕಿಯ ದಕ್ಷಿಣಕ್ಕೂ, ಹಂಪೆಯ ಉತ್ತರಕ್ಕೂ ಇರುವ ಕನಕಗಿರಿಯೇ ಅಶೋಕ ಶಾಸನದ ಸುವರ್ಣಗಿರಿಯೆಂದು ಹುಲಷ ಸೂಚಿಸಿದರೆ, ಅಶೋಕನ ಹದಿನಾಲ್ಕು ಶಿಲಾಶಾಸನಗಳೂ, ಲಘುಶಿಲಾಶಾಸನಗಳೂ ಒಂದೇ ಕಡೆಗೆ ದೊರೆತ ಎರ್ರಗುಡಿಯು (ಆಂಧ್ರಪ್ರದೇಶ) ಆತನ ಮುಖ್ಯ ಮತ್ತು ಮಹತ್ವದ ಸ್ಥಳವಾದುದರಿಂದ ಅದರ ಸಮೀಪದಲ್ಲಿರುವ 'ಜೊನ್ನಗಿರಿ' ಸುವರ್ಣಗಿರಿಯಾಗಿರಬೇಕೆಂದು ಬಹುಜನರ ವಾದ. ಅದೇನಿದ್ದರೂ 'ಇಸಿಲ' ಮಾತ್ರ ಕರ್ನಾಟಕವನ್ನುವಲ್ಲಿ ಯಾವ ಸಂಶಯವೂ ಇಲ್ಲ. ಮೌರ್ಯರ ಕಾಲದ 'ಇಸಿಲ' ಪುರವು ಈ ಶಾಸನಗಳ ಸಮೀಪದಲ್ಲಿಯೇ ಇದ್ದಿರಬೇಕೆಂದು ಊಹಿಸಿದ ಕರ್ನಾಟದ ಪ್ರಸಿದ್ಧ ಪುರಾತತ್ವ ಶಾಸ್ತ್ರಜ್ಞರಾದ ದಿ. ಡಾ| ಎಂ. ಎಚ್. ಕೃಷ್ಣ ಅವರು 'ವಿಸ್ತಾರವಾದ ಪಟ್ಟಣದ ಗುರುತುಗಳ ಅಶೋಕನ ಬ್ರಹ್ಮಗಿರಿ ಶಾಸನದ ಎರಡು ಪಕ್ಕಗಳಲ್ಲೂ ತಮಗೆ ದೊರೆತುದಾಗಿ ಹೇಳಿದ್ದಾರೆ. ಗಣ್ಯ ವಿದ್ವಾಂಸರಾದ ಶ್ರೀ ಡಿ. ಎಲ್, ನರಸಿಂಹಾಚಾರರಂತೂ 'ಇಸಿಲ'ವನ್ನು ತೇದಿಮುಳ್ಳ ಪ್ರಾಚೀನತಮ ಕನ್ನಡ ಪದ (The oldest dated Kannada word) ಎಂದು ಕರೆದುದಲ್ಲದೇ ಅದರ ನಿಷ್ಪತ್ತಿಯನ್ನು ವಿಚಾರಿಸುತ್ತ ಇಸಿಲದ ಸಂವಾದಿ ಶಬ್ದ ಎಯಿಲ್ ಆಗಿದ್ದು ನಂತರ ಅದು ಎಸಿಲ್ > (ಪದಾರಂಭದ ಸ್ವರ 'ಎ–' ಸಂವೃತಸ್ವರ ವ್ಯತ್ಯಯ ನಿಯಮದಂತೆ 'ಇ–' ಆಗುತ್ತದೆ.) > ಇಸಿಲ ಆಗಿದೆ. ಎಯಿಲ್ ಶಬ್ದ ತಮಿಳಿನಲ್ಲಿ ಕೋಟೆ ಎಂಬ ಅರ್ಥ ಕೊಡುವುದರಿಂದ ಕನ್ನಡ 'ಇಸಿಲ' ಒಂದು ಕೋಟೆ ಇಲ್ಲವೆ ಕೋಟೆಯುಳ್ಳ ಊರು ಆಗಿದ್ದಿರಬೇಕು ಎನ್ನುತ್ತಾರೆ. ಈ ವಿಚಾರವನ್ನು ಒಪ್ಪಿಕೊಂಡ ತೀ. ನಂ. ಶ್ರೀಕಂಠಯ್ಯನವರು 'ಯಾವ ವಿವಾದಗಳಿಗೆ ಎಡೆಕೊಡದೆ' ಎಸಿಲ್' ಎನ್ನುವುದು ವಿಶ್ವಾಸಾರ್ಹವಾದ ಮೊದಲ ಕನ್ನಡ ಪದಗಳಲ್ಲಿ ಒಂದೆಂದು ಹೇಳಬಹುದು' ಎಂದಿದ್ದಾರೆ. ಆದರೆ ಈ ಒಂದೇ ಒಂದು ಶಬ್ದ ನಮ್ಮ ನಾಡನುಡಿಗಳ ಪ್ರಾಚೀನತೆ ನಿರ್ಧರಿಸಲು ಎಷ್ಟರಮಟ್ಟಿಗೆ ಸಹಾಯಕಾರಿ ಎಂಬುದು ವಿಚಾರಾರ್ಹವಾದುದು. ಹಾಗೆ ಯಾವ ಸಂಪರ್ಕ ಸಾಧನಗಳಿಲ್ಲದ ಅಂದಿನ ಕಾಲದಲ್ಲಿ ಅಶೋಕ ನಾಡಿನ ತುಂಬೆಲ್ಲ ಪ್ರಾಕೃತ ಭಾಷಾ ಏಕತೆಯನ್ನು ಹೇಗೆ ಕಾಯ್ದುಕೊಂಡು ಬಂದ ಎಂಬುದೂ ಕುತೂಹಲಕಾರಿಯಾಗಿದೆ. ಇಂದಿನ ಆಡಳಿತದಲ್ಲಿದ್ದ ಇಂಗ್ಲೀಷ ಕೈವಾಡವಿದ್ದಂತೆ ಅಂದು ಪ್ರಾಕೃತವಿದ್ದಿರಬಹುದೇ? ಹೆಚ್ಚಿನ ವಿವರವಿಲ್ಲದೇ 'ಇದಮಿತ್ಥಂ' ಎಂದು ನಿರ್ಧರಿಸುವುದು ಬಲುಕಷ್ಟ.

ಒಟ್ಟು ಅಶೋಕನ ರಾಜ್ಯದ ಅತೀ ದಕ್ಷಿಣಕ್ಕೆ ಸುವರ್ಣಗಿರಿ ಮತ್ತು ಇಸಿಲ ಎಂಬ ಪ್ರಮುಖ ಸ್ಥಳಗಳಿದ್ದವು. ಅಲ್ಲಿ ಆರ್ಯಪುತ್ರ ಮತ್ತು ಮಹಾಮಾತ್ಯರೆಂಬ ಅಧಿಕಾರಿಗಳಿದ್ದರೆಂಬುದಂತೂ ಸ್ಪಷ್ಟ. ಈ ಅಧಿಕಾರಸ್ವರೂಪ, ಕಾರ್ಯವ್ಯಾಪ್ತಿ ಎಂತಹದೆಂಬುದು ಇಲ್ಲಿ ನಮಗೆ ತಿಳಿಯುವುದಿಲ್ಲವಾದರೂ, ಸಾಮಾನ್ಯವಾಗಿ ರಾಜಕೀಯ ದೃಷ್ಟಿಯಿಂದ ಪ್ರಮುಖವಾದ ಸ್ಥಳಗಳಲ್ಲಿ ಆರ್ಯಪುತ್ರ ಮತ್ತು ಮಹಾಮಾತ್ಯರನ್ನು ನೇಮಿಸಲಾಗುತ್ತಿತ್ತೆಂದು ತೋರುತ್ತದೆ. ಇವರು ಉಚ್ಚದರ್ಜೆಯ ಅಧಿಕಾರಿಗಳಾಗಿದ್ದು. ಆರ್ಯಪುತ್ರರು, ಅರಸುಪುತ್ರ ಇಲ್ಲವೆ ಅರಸು ಸಂಬಂಧಿಗಳಾಗಿರುತ್ತಿದ್ದರೆಂದು ಕಾಣುತ್ತದೆ. ಈ ಮಾಲಿಕೆಯ (ಚಿತ್ರದುರ್ಗ) ಶಾಸನಗಳು 'ಚಪಡೇನ ಲಿಖಿತೇ ಲಿಪಿಕರೇಣ' ಎಂದು ಮುಕ್ತಾಯಗೊಳ್ಳುತ್ತಿದ್ದು; 'ಲಿಪಿಕರ' ಎನ್ನುವ ಪದ ತುಂಬ ಮಹತ್ವವಾದುದಷ್ಟೇ ಅಲ್ಲ ಗಮನಾರ್ಹವಾದುದೂ ಹೌದು. ಇದು 'ಲಿಪಿಕಾರ' ಎನ್ನುವ ವೃತ್ತಿಯನ್ನು ಸೂಚಿಸುತ್ತಿದ್ದು ಅಶೋಕನ ಕಾಲಕ್ಕೆ ಇಂಥ ಲಿಪಿಕರು ಸಾಕಷ್ಟು ಸಂಖ್ಯೆಯಲ್ಲಿ ನೇಮಕಗೊಂಡಿರಬೇಕು. ಆದರೆ ಅಶೋಕನ ಶಾಸನಗಳಲ್ಲಿಯೆ ಅಪೂರ್ವವೆನ್ನುವಂತೆ ಇಲ್ಲಿಯ ಲಿಪಿಕರ 'ಚಪಡ' ಎಂದು ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಆತ ಕೊನೆಯ 'ಲಿಪಿಕರೇಣ' ಎಂಬುದನ್ನು ಖರೋಷ್ಠಿ ಲಿಪಿಯಲ್ಲಿ ಬರೆದುದನ್ನು ನೋಡಿದರೆ ಅವನಿಗೆ ಖರೋಷ್ಠಿ ಲಿಪಿಜ್ಞಾನವೂ ಇತ್ತೆಂದು ಅದನ್ನು ತೋರಿಸಿಕೊಳ್ಳಲೆಂದೇ ಹೀಗೆ ಬರೆದಿರಬಹುದೆಂದೂ ಹೇಳಬೇಕಾಗುತ್ತದೆ. ಕರ್ನಾಟಕದಲ್ಲಿ ಚಿತ್ರದುರ್ಗ ಮಾಲಿಕೆಯನ್ನು ಬಿಟ್ಟರೆ ಇನ್ನುಳಿದೆಡೆ ಯಾವ ಅಧಿಕಾರಿಗಳ ಉಲ್ಲೇಖ ಕಾಣುವದಿಲ್ಲವಾದರೂ, ಬೇರೆಡೆ ದೊರೆತ ಆತನ ಶಿಲಾಶಾಸನಗಳಲ್ಲಿ ಧರ್ಮಮಹಾಮಾತ್ಯ, ರಾಜುಕ, ಯುಕ್ತ, ಧೂತ, ಪಟವೇದಕ ಪ್ರಾದೇಶಿಕ ಎಂಬ ಬೇರೆ ಬೇರೆ ಅಧಿಕಾರಿಗಳಿರುವುದನ್ನು ಕಾಣಬಹುದಾಗಿದೆ. ಚಿತ್ರ-ದುರ್ಗ ಮಾಲಿಕೆಯ ಇನ್ನೊಂದು ವೈಶಿಷ್ಟ್ಯವೆಂದರೆ ೭೫೬ ಸಂಖ್ಯೆಯನ್ನು ಹೇಳಿರುವುದು ಸಾಮಾನ್ಯವಾಗಿ ಪ್ರಾಚೀನ ಕಾಲದಲ್ಲಿ ಶಬ್ದಗಳಲಿಯೇ ಸಂಖ್ಯೆಯನ್ನು ಹೇಳಲಾಗುತ್ತಿದ್ದು, ಅಶೋಕನ ಶಾಸನಗಳಲ್ಲಿಯೂ ಈ ಪದ್ಧತಿ ಕಂಡುಬರುತ್ತದೆ. ಆದರೆ ಅತೀ ವಿರಳವೆನ್ನುವಂತೆ ಕರ್ನಾಟಕದ ಚಿತ್ರದುರ್ಗ ಮಾಲಿಕೆಯ ಮೂರು ಶಾಸನಗಳಲ್ಲಿ, ಸಿಟ್ಟೂರಿನ ಮೊದಲನೆಯ ಶಾಸನದಲ್ಲಿ ಮಾತ್ರ ಅಶೋಕ ೨೫೬ [೭೫೬ (೨೦೦, ೫೦೬)] ದಿನಗಳನ್ನು ಧರ್ಮಪ್ರಸಾರ ಯಾತ್ರೆಯಲ್ಲಿ ಕಳೆದ ಎಂದು ಹೇಳಲಾಗಿದೆ. ಇಲ್ಲಿ ಬಿಡಿ ಬಿಡಿಯಾದ ಪ್ರಾಚೀನ ಸಂಖ್ಯಾ ಬರವಣಿಗೆಯ ಕ್ರಮವನ್ನು ಗಮನಿಸಬುದು.

ಇನ್ನು ರಾಯಚೂರು ಮಾಲಿಕೆಯ ಮಸ್ಕಿ ಶಾಸನವು 'ದೇವಾನಾಂ ಪಿಯಸ ಅಸೋಕಸ' ದೇವರಿಗೆ ಪ್ರೀಯನಾದವನು ಅಶೋಕನು) ಎಂದು ಆರಂಭವಾದರೆ ಗವಿಮಠ ಮತ್ತು ಅದರಂತೆ ಶಾಸನ ಪಾಠವಿದ್ದ ಪಾಲ್ಕಿಗುಂಡ ಶಾಸನಗಳು "ದೇನಾ. ನಾಂ ಪಿಯೋ ಆಹ' (ದೇವರಿಗೆ ಪ್ರಿಯನಾದವನು ಹೇಳುತ್ತಾನೆ ಎಂದು ಪ್ರಾರಂಭವಾಗುತ್ತಿದ್ದು ಇವು ನೇರವಾಗಿ ಅಶೋಕನಿಂದಲೇ ಹೊರಡಿಸಲ್ಪಟ್ಟವೆ. ದೇಶದ ತುಂಬೆಲ್ಲಾ ದೊರೆತ ಶಾಸನಗಳ 'ದೇವಾನಾಂ ಪಿಯ' ಯಾರು ಎಂಬುದು ಪ್ರಶ್ನೆ

ಯಾಗಿದ್ದ ಸಮಯದಲ್ಲಿ ಆ ಒಗಟನ್ನು ಪ್ರಪ್ರಥಮವಾಗಿ ಬಿಡಿಸಿದ ಕೀರ್ತಿ ೧೯೧೫ರಲ್ಲಿ ದೊರೆತ ಮಸ್ಕಿ ಶಾಸನಕ್ಕೆ ಸಲ್ಲುತ್ತದೆ. ಇದರಿಂದಾಗಿ ಇದು ಭಾರತೀಯ ಖ್ಯಾತಿಯನ್ನು ಗಳಿಸಿದೆ. ಅದರ ನಂತರ ೧೯೫೪ರಲ್ಲಿ ದೊರೆತ ಮಧ್ಯಪ್ರದೇಶದ ಗುಜರ್ರಾ ಶಾಸನದಲ್ಲಿ ಅಶೋಕ ಮಹಾರಾಜನ ಹೆಸರು ಬಿಟ್ಟರೆ, ಕರ್ನಾಟಕಕ್ಕೇ ವಿಶಿಷ್ಟವೆನ್ನುವಂತೆ ಬಳ್ಳಾರಿ ಮಾಲಿಕೆಯ ನಿಟ್ಟೂರಿನ ಎರಡೂ ಶಾಸನಗಳೂ ಅಶೋಕನನ್ನು ಹೆಸರಿಸಿವೆ. 'ದೇವಾನಾಂ ಪಿಯೇ ಹೇವಂ ಆಹ' (ದೇವರಿಗೆ ಪ್ರೀಯನಾದವನು ಹೀಗೆ ಹೇಳುತ್ತಾನೆ) ಎಂದು ಪ್ರಾರಂಭವಾಗುವ ಮೊದಲನೆಯ ಶಾಸನ 'ಯಥಾ ರಾಜಾ ಅಸೋಕೋ ಆಹಾ ತಥಾತಿ) (ರಾಜಾ ಅಶೋಕನು ಹೇಗೆ ಹೇಳಿದನೋ ಹಾಗೆ) ಎಂದು ಮುಕ್ತಾಯಗೊಳ್ಳುತ್ತದೆ. ಇನ್ನೊಂದು ಶಾಸನ 'ರಾಜಾ ಅಸೋಕೋ ಹೇವಂ ಆಹ' (ರಾಜಾ ಅಶೋಕನು ಹೀಗೆ ಹೇಳುತ್ತಾನೆ) ಎಂದು ಪ್ರಾರಂಭಗೊಳ್ಳುತ್ತದೆ. ಮಸ್ಕಿ ಶಾಸನವು 'ಅಸೋಕ' ಎಂದು ಮಾತ್ರ ಹೇಳಿದ್ದರೆ ಇವೆರಡೂ ಶಾಸನಗಳು 'ರಾಜಾ ಅಸೋಕೋ' ಎಂದಿರುವುದು ಗಮನಾರ್ಹವಾದುದು. ಬಹುಶಃ ಅಂದು ಕರ್ನಾಟಕದ ಜನತೆಗೆ ಅಶೋಕ ರಾಜನ ಹೆಸರು ತುಂಬ ಪ್ರೀಯವಾಗಿರಲೂ ಬಹುದು.

ಅಶೋಕನ ರಾಜಶಾಸನಗಳ ವಿಷಯ ಸದ್ಧರ್ಮಬೋಧೆ. ಇದರಿಂದ ಅವುಗಳನ್ನು ಧರ್ಮಶಾಸನಗಳೆಂದೂ, ಸಂಬೋಧಶಾಸನಗಳೆಂದೂ ಕರೆಯಲಾಗುತ್ತಿದೆ. ಪರಹಿತಕಾರ್ಯದಲ್ಲಿ ಮುನ್ನಡೆದ ಅಶೋಕ ಜನರಲ್ಲಿ ನಿಜಧರ್ಮದ ಬೀಜವನ್ನು ಬಿತ್ತಿ ಅವರನ್ನು ಧರ್ಮಾಸಕ್ತರನ್ನಾಗಿಸಲು ಅವಿಶ್ರಾಂತವಾಗಿ ಪ್ರಯತ್ನಿಸಿದ. ಇಂದು ಕರ್ನಾಟಕದಲ್ಲಿ ದೊರೆತ ಆತನ ಧರ್ಮಶಾಸನಗಳ ವಿಷಯವನ್ನು ಹೀಗೆ ಒಟ್ಟುಗೂಡಿಸಿ ಹೇಳಬಹುದು. ನಾನು ಎರಡುವರೆ ವರ್ಷಗಳಿಂದ ಬುದ್ಧನ ಉಪಾಸಕನಾಗಿದ್ದು ಈಗ ಒಂದು ವರ್ಷದಿಂದ ಸಂಘವನ್ನು ಸೇರಿ ಮತ್ತೂ ಹೆಚ್ಚು ವಿಶೇಷ ಶ್ರದ್ಧೆಯಿಂದ ಶ್ರಮಿಸುತ್ತಿದ್ದೇನೆ. ಜಂಬೂದ್ವೀಪದ ಜನರೊಡನೆ ಸೇರದ ದೇವತೆಗಳು ಈಗ ಅವರೊಂದಿಗೆ ಬೆರೆತಿದ್ದಾರೆ. ಅದು ನನ್ನ ಪ್ರಯತ್ನ. ಅದನ್ನು ಬಡವ ಬಲ್ಲಿದನೆಂಬ ಭೇದವಿಲ್ಲದೆ ಯಾರು ಬೇಕಾದರೂ ಮಾಡಬಹುದು. ಆದರೆ ಆತನಿಗೆ ಧರ್ಮದಲ್ಲಿ ಶ್ರದ್ಧೆ ಅವಶ್ಯಕ. ನೀವು ಈ ಮಾರ್ಗವನ್ನು ಅನುಸರಿಸಿದರೆ ಈ ಘನಸಾಧನೆ ಬಹುಕಾಲ ಬಾಳುವುದಲ್ಲದೇ ಒಂದುವರೆಯಷ್ಟು ಅಭಿವೃದ್ಧಿಯಾಗುತ್ತದೆ. ಈ ಘೋಷಣೆಯನ್ನು ನಾನು ೨೫೬ ದಿನಗಳ ಧರ್ಮಪ್ರಸಾರ ಯಾತ್ರೆಯಲ್ಲಿ ಕಳೆದ ಸಮಯದಲ್ಲಿ ಹೊರಡಿಸಲಾಗಿದೆ. ಇಷ್ಟಕ್ಕೆ ನಿಲ್ಲದೆ ಅಶೋಕ ಚಿತ್ರದುರ್ಗ ಮಾಲಿಕೆಯ ಉಪಶಾಸನ ಮತ್ತು ನಿಟ್ಟೂರಿನ ಪ್ರತ್ಯೇಕ ಉಪಶಾಸನಗಳಲ್ಲಿ ಮತ್ತೆ ಹೀಗೆ ಹೇಳುತ್ತಾನೆ— "ತಂದೆತಾಯಿ ಗುರುಹಿರಿಯರ ಮತ್ತು ಬ್ರಾಹ್ಮಣರ ಶುಶ್ರೂಷೆ ಮಾಡಬೇಕು. ಪ್ರಾಣಿಗಳಲ್ಲಿ ದಯೆ ತೋರಬೇಕು. ಸತ್ಯ ನುಡಿಯಬೇಕು. ನೆರೆಹೊರೆಯ ಆಪ್ತರೊಡನೆ ಚೆನ್ನಾಗಿ ನಡೆದುಕೊಳ್ಳಬೇಕು. ಇದು

ಯೋಗ್ಯವಾದದ್ದು, ಸನಾತನವಾದದ್ದು, ದೀರ್ಘಾಯುಷ್ಯಕ್ಕೆ ಕಾರಣವಾದದ್ದು. ಈ ದಿಶೆಯಲ್ಲಿ ಎಲ್ಲರೂ ನಡೆಯಬೇಕು."

ಅಶೋಕ ತಾನು ಬುದ್ಧನ ಉಪಾಸಕನಾಗಿ ಸಂಘವನ್ನು ಸೇರಿದುದಾಗಿ ಹೇಳುತ್ತಾನೆ ಆದರೆ ಆತ ಯಾರನ್ನೂ ಬೌದ್ಧಮತಕ್ಕೆ ಸೇರಲು ಒತ್ತಾಯಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ. ಅವನ ಧರ್ಮ ಬೋಧೆ ಯಾವುದೇ ಮತಧರ್ಮಗಳ ಪಕ್ಷವಹಿಸಿದವುಗಳೂ ಅಲ್ಲ. ಧರ್ಮದಲ್ಲಿ ಶ್ರದ್ಧೆ, ತಂದೆತಾಯಿ ಗುರುಹಿರಿಯರಲ್ಲಿ ನಿಷ್ಠೆ ಮತ್ತು ಅವರ ಸುಶ್ರೂಷೆ, ನೆರೆಹೊರೆ ಆಪ್ತರೊಡನೆ ಸೌಹಾರ್ದಯುತ ಸಹಬಾಳಿಗೆ ಸತ್ಯನುಡಿ ಪ್ರಾಣಿದಯೆ ಇವುಗಳನ್ನು ಯಾವಧರ್ಮ ತಾನೆ ಅಲ್ಲಗಳೆಯಬಲ್ಲದು! ಸ್ವತ: ಅಶೋಕನೇ ಬೌದ್ಧಮತ ಅನುಯಾಯಿಯಾಗಿದ್ದರೂ ತಾನು ಎಲ್ಲ ಮತಗಳನ್ನು ಆದರಿಸುತ್ತಿದ್ದ "ತಾನು ವಿವಿಧ ಸೇವೆಗಳಿಂದ ಎಲ್ಲ ಮತಗಳನ್ನು ಗೌರವಿಸುತ್ತಿದ್ದು, ಇದರಿಂದ ತನ್ನ ಮತಕ್ಕೆ ದೊಡ್ಡಸ್ತಿಕೆ ಪರಮತಕ್ಕೆ ಉಪಕಾರವಾಗುತ್ತದೆ. ಮೂಢಭಕ್ತಿಯಿಂದ ಬೇರೊಂದು ಮತವನ್ನು ಹೇಳಿದರೆ ತನ್ನ ಮತಕ್ಕೇನೆ ಅನ್ಯಾಯ ಬಗೆದಂತಾಗುತ್ತದೆ" ಎಂದು ಮತ್ತೊಂದೆಡೆ ಅವನೇ ಹೇಳಿದ್ದಾನೆ. ತನ್ನ ಈ ಪರಮೋದ್ದೇಶ ಎಲ್ಲರಿಗೂ ತಿಳಿಯಬೇಕು, ಅವರು ಪಾಲಿಸಬೇಕು ನೆಮ್ಮದಿ ಹೊಂದಬೇಕು ಎಂದು ಆತ ಬಯಸಿದ. ಅದಕ್ಕಾಗಿ ಮೊದಲು ತಾನೆ ಪ್ರಯೋಗ ಪ್ರಾರಂಬಿಸಿದ. ತಾನು ಹೇಳುವ ತತ್ತ್ವಗಳನ್ನು ಸ್ವತಃ ಆಚರಿಸಿದ ನಾನು ಪ್ರಯತ್ನಿಸುತ್ತಿದ್ದೇನೆ ನೀವೂ ಹಾಗೆ ಮಾಡಿ ಇದಕ್ಕೆ ಯಾವ ಬೇದಭಾವವೂ ಇಲ್ಲ ಎಂದು ಸಾರಿದ. ಅವನ ಧರ್ಮೋಪದೇಶಗಳೆಲ್ಲವೂ ನೇರವಾದ ಸರಳಭಾಷೆಯಲ್ಲಿ ಹೃದಯದಿಂದ ಇಳಿದುಬಂದವುಗಳು. ಅಶೋಕನಿಗೆ ತನ್ನ ಜನರ ಹಿತಕ್ಕಾಗಿ ಎಷ್ಟು ಹೇಳಿದರೂ ತೃಪ್ತಿಯೇ ಇಲ್ಲ. ಅದಕ್ಕಾಗಿಯೇ ಡಾ|| ಶ್ರೀನಿವಾಸ ರಿತ್ತಿಯವರು ನಿಷ್ಠಾವಂತ ಕಾರ್ಯಕರ್ತನ ಕಳಕಳಿ ಅವುಗಳಲ್ಲಿ ತುಂಬಿದೆ ಅನ್ನುತ್ತಾರೆ. ಇಪ್ಪತ್ತನೆಯ ಶತಮಾನದ ಅಂಚಿನಲ್ಲಿ ನಮಗಿನ್ನೂ ಸಾಧಿಸಲಾಗದಿದ್ದ ಶಾಂತಿಯುತ ಸಹಜೀವನ ಜಾತಿಯತೆಯ ಜಂಜಾಟ ಮತ್ತು ಧರ್ಮ ಪರಧರ್ಮಗಳ ಗುದ್ದಾಟಗಳ ಮೇಲೆ ಅಶೋಕನ ಈ ಭೋಧಗಳು ಸಾಕಷ್ಟು ಬೆಳಕು ಬೀರುತ್ತವೆ. ಅವನ ಜೀವನಾದರ್ಶದ ಮಾತುಗಳು ಇಂದಿಗೂ ಅರ್ಥಪೂರ್ಣವಾಗಿದ್ದು ಅವುಗಳಿಂದ ನಾವು ಮತ್ತು ನಮ್ಮ ಮಠಮಾನ್ಯರುಗಳು ಕಲಿಯಬೇಕಾದುದು ಬೇಕಾದಷ್ಟಿದೆ.

ಹೀಗೆ ಅಶೋಕ ನಿರೂಪಿಸಿದ ತತ್ತ್ವಗಳೆಲ್ಲವೂ ವಿಶ್ವಸಾಮಾನ್ಯ ಮತ್ತು ವಿಶ್ವಮಾನ್ಯವಾಗಿದ್ದು, ಅವನ ಶಾಸನಗಳು ನಮ್ಮ ಪ್ರಾಚೀನ ಚರಿತ್ರೆ ತಿಳಿದುಕೊಳ್ಳಲು ಪ್ರಮುಖ ಸಾಧನೆಗಳಾಗಿ ಕರ್ನಾಟಕ ಸಂಸ್ಕೃತಿಗೆ ಮಹತ್ತ್ವದ ಕೊಡುಗೆಗಳಾಗಿವೆ.

## ಗ್ರಂಥ ಋಣ


೧) Corpus Inscriptions Indicarum vol I (Inscriptions of Ashoka) E. Hultzch.
೨) H.A.S vol X The Gavimath and Palkigundu Inscriptions of Ashoka R. L. Turner.
೩) ಅಶೋಕನ ಧರ್ಮಶಾಸನಗಳು : ಡಾ। ಶ್ರೀನಿವಾಸ ರಿತ್ತಿ
೪) "ನಿಟ್ಟೂರಿನ ಅಶೋಕ ಶಿಲಾಶಾಸನಗಳು" ಕರ್ನಾಟಕ ಭಾರತಿ ಸಂ. ೧೦ ೧ ಪು-೧೩೯ ಡಾ। ಎಸ್. ಶೆಟ್ಟರ್, ಎಸ್. ರಾಜಶೇಖರ.
೫) "ತೇದಿಯುಳ್ಳ ಪ್ರಾಚೀನತಮ ಕನ್ನಡ ಪದ" ಸಾಧನೆ ಸಂ. ೧-೩ ಪು-೧೬೯ ಸಂಗ್ರಹ-ಡಾ। ಎಂ ಚಿದಾನಂದಮೂರ್ತಿ.
೬) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೧ ಬೆಂಗಳೂರು ವಿಶ್ವವಿದ್ಯಾಲಯ.
೭) ಕನ್ನಡನಾಡಿನ ಶಾಸನಗಳು : ಡಾ। ಪಿ. ಬಿ ದೇಸಾಯಿ.
೮) ಕರ್ನಾಟಕದ ಪೂರ್ವ ಚರಿತ್ರೆ : ಡಾ। ಎಂ. ಎಚ್. ಕೃಷ್ಣ.


ಸೋಮವಾರ ಮಂಗಳವಾರವೆಂದು ಮಾಡುವ ಭಕ್ತನ
ಲಿಂಗ ಭಕ್ತಂಗೆಂತು ಸರಿಯೆಂಬೆನಯ್ಯ ?
ದಿನಶ್ರೇಷ್ಠವೋ ? ಲಿಂಗಶ್ರೇಷ್ಠವೋ ?
ದಿನಶ್ರೇಷ್ಠವೆಂದು ಮಾಡುವ ದುರಾಚಾರಿಯ ಮುಖವ
ನೋಡಲಾಗದು.
ಆ ದಿನವೆ ಘನವೆಂದು ಆ ದಿನವೆ ದೈವವೆಂದು
ಮಾಡುವನಾಗಿ ಆತ ದಿನದ ಭಕ್ತನು
ಲಿಂಗಭಕ್ತನು ಲಿಂಗವೆ ಘನವೆಂದು,
ಲಿಂಗವೆ ದೈವವೆಂದು ಮಾಡುವನಾಗಿ ಆತ ಲಿಂಗಭಕ್ತನೂ
ಅಂತಾ ದಿನದ ಭಕ್ತಂಗೆಯೂ ಲಿಂಗ ಭಕ್ತಂಗೆಯೂ
ಸಮವೆಂದೊಡೆ ಪಂಚ ಮಹಾಪಾತಕ ತಪ್ಪದು
ಅಂದೆಂತೆಂದೊಡೆ :
ಸೌಮೇ ಭೌಮೇ ವ್ಯತೀಪಾತೇ ಸಂಕ್ರಾತಿ ಶಿವರಾತ್ರಯೋಃ
ಏಕಭುಕ್ತ್ತೋಪವಾಸೇನ ನರಕೇ ಕಾಲಮಕ್ಷಯಮ್
ಎಂಬುದಾಗಿ, ಇದು ಕಾರಣ, ದಿನವಾರಂಗಳು ಶ್ರೇಷ್ಠವೆಂದು
ಏಕಭುಕ್ತ್ತೋಪವಾಸಂಗಳ ಮಾಡುವ ಭಕ್ತಂಗೆ ಕುಂಭೀಪಾಕ
ನಾಯಕನರಕ ತಪ್ಪದು ಕೂಡಲಸಂಗಮದೇವಾ.

ಅಚ್ಚಶಿವೈಕ್ಯಂಗೆ ಹೊತ್ತಾರೆ, ಅಮವಾಸ್ಯೆ, ಮಟ್ಟಮಧ್ಯಾಹ್ನ,
ಸಂಕ್ರಾಂತಿ ಮತ್ತೆ ಅಸ್ತಮಾನ ಪೌರ್ಣಿಮೆ ಎಂಬುದಿಲ್ಲ,
ಭಕ್ತನ ಮನೆಯಂಗಣವೇ ವಾರಣಾಸಿ ಕಾಣಾ ರಾಮನಾಥಾ

# ಕರ್ನಾಟಕದ ಸಂಸ್ಕೃತಿಕೆನೆ : ಯಕ್ಷಗಾನ

– ಚನ್ನಪ್ಪ ಹುಡೇದಗಡ್ಡಿ, ಎಂ.ಎ.

ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಹೆಗಳಲ್ಲಿ ಬೇಸಾಯ ಪ್ರಮುಖ ಉದ್ಯೋಗ ಮಳೆಗಾಲದ ಕೊನೆಯ ಹೊತ್ತಿಗೆ ಗದ್ದೆಯ ಕೆಲಸವೆಲ್ಲ ಮುಗಿದು ಬೇಸಾಯಗಾರರಿಗೆ ಸ್ವಲ್ಪ ವಿಶ್ರಾಂತಿ ದೊರೆಯುತ್ತದೆ. ಇಂಥ ಕಾಲದಲ್ಲಿ ಒಂದು ದಿನ ಕತ್ತಲುಕವಿದೊಡನೆ ದೂರದಿಂದ ಚಂಡಮದ್ದಳೆ ಧ್ವನಿ ಕೇಳಿದರೆ; "ಇವೊತ್ತು ಇಂಥ ಊರಿನಲ್ಲಿ ಬಯಲಾಟವಿದೆ" ಎಂದು ಜನರಿಗೆ ತಿಳಿಯುತ್ತಿದೆ. ಬೇಗ, ಬೇಗ ಊಟದ ಶಾಸ್ತ್ರಮುಗಿಸಿ ೮–೧೦ ಜನ ಒಟ್ಟುಗೂಡಿ ಕತ್ತಲಲ್ಲಿ ಕಾಲ್ನಡಿಗೆಯಲ್ಲಿಯೇ ಯಕ್ಷಗಾನ ಪ್ರದರ್ಶನ ನೋಡಲು ಹೊರಟು ಬಿಡುತ್ತಾರೆ. ಬಹಳದೂರದಿಂದಲೂ ನಡದು ಬಂದು ಯಕ್ಷಗಾನ ನೋಡಲು ಬರುತ್ತಾರೆ.

"ಯಕ್ಷಗಾನವೆಂದರೆ ದೇಶಿಯಕಣ್ಣು" ಎಂದವರು ಗೋವಿಂದ ಪೈಗಳವರು. ನಮ್ಮ ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ಕೆನೆ. ಯಕ್ಷಗಾನ ಒರಿಯ ಗಾನವಲ್ಲ ನಾಟ್ಯಗೀತ, ವಾದ್ಯ, ಬಣ್ಣಬೇಗಡೆಗಳಿಂದ ಸಂಪನ್ನವೂ ಸಮೃದ್ಧವೂ ಆದ ಸಮಷ್ಟಿಕಲೆ ಸಂಗೀತ ಸಾಹಿತ್ಯಗಳಿಂದ ಕಿವಿಗೆ ಇಂಪನ್ನೂ ಚಿತ್ರ ವಿಚಿತ್ರ ಮುಖ ವರ್ಣಿಕೆ ಮತ್ತು ಸುಂದರ ಕಲಾಪೂರ್ಣ ವೇಷಭೂಷಣಗಳಿಂದ ಹಾಗೂ ಕ್ರಮಬದ್ಧವಾದ ನಾಟ್ಯದಿಂದ ಕಣ್ಣಿಗೆ ಸೊಂಪನ್ನೂ ಧರ್ಮಭೋಧನೆಯಿಂದ ಮನಸ್ಸಿಗೆ ತಂಪನ್ನೂ ಕೊಡುವ ವಿಶಿಷ್ಟಕಲೆಯಾಗಿದೆ.

ಯಕ್ಕಲವಾದ ಗಾನವೇ ಯಕ್ಷಗಾನವಾಯಿತೆಂದು ಪಂಡಿತರ ಅಭಿಪ್ರಾಯವಾಗಿದೆ. 'ಯಕ್ಷಗಾನ ಬಯಲಾಟವೆಂದು ಕಲಿತಜನ ಹೇಳುತ್ತಿದ್ದರೂ ಹಳ್ಳಿಗರು ಯಕ್ಷಗಾನವನ್ನು ಸಾಮಾನ್ಯವಾಗಿ ಆಟ' ವೆನ್ನುತ್ತಾರೆ. ಬಯಲಲ್ಲಿ ತಳಿರು ತೋರಣಗಳಿಂದ ಅಲಂಕೃತವಾದ ರಂಗಸ್ಥಳದಲ್ಲಿ ಪ್ರದರ್ಶಿಸಲ್ಪಡುವದರಿಂದ ಬಯಲಾಟವಾಯಿತು. ವಿಷ್ಣುವಿನ ದಶಾವತಾರಲೀಲೆಯೇ ಈ ಆಟದಲ್ಲಿ ಹೆಚ್ಚಾಗಿರುವದರಿಂದ "ದಶಾವತಾರ ಆಟ" ವೆಂತಲೂ ಆಟದ ಸೂತ್ರಧಾರಿಯಾಗಿ ಭಾಗವತನು ಕೆಲಸ ನಿರ್ವಹಿಸುವದರಿಂದ "ಭಾಗವತರಾಟ" ಹಾಗೂ ಪಡುವಲ ಕರಾವಳಿಯಲ್ಲಿ ಪ್ರಚಲಿತ ವಿರುವದರಿಂದ "ಪಡುವಲ ಪಾಯ" ವೆಂತಲೂ ಇದನ್ನು ಕರೆಯುತ್ತಾರೆ.

ಯಕ್ಷಗಾನಕಲೆಯನ್ನು ಪ್ರದರ್ಶಿಸುವ ಗುಂಪಿಗೆ ಮೇಳ ಎಂದು ಕರೆಯುತ್ತಾರೆ ಊರಿನ ಪ್ರಮುಖ ದೇವಾಲಯಗಳ ಆಶ್ರಯದಲ್ಲಿ ಇಂಥ ಮೇಳಗಳು ಮಳೆಗಾಲ ಮುಗಿದ ನಂತರ 'ಸೇವೆ' ಪ್ರವಾಸವನ್ನು ಆರಂಭಿಸಿ ನಾಲ್ಕೈದು ತಿಂಗಳು ಆಹ್ವಾನದ ಮೇರೆಗೆ ಬೇರೆಬೇರೆ ಊರುಗಳಲ್ಲಿ ಕಲೆಯನ್ನು ಪ್ರದರ್ಶಿಸುತ್ತಾರೆ. ಇವರು ಭಾರತ ರಾಮಾಯಣ ಭಾಗವತ ಮುಂತಾದ ಪೌರಾಣಿಕ ಕಥೆಗಳಲ್ಲಿ ಒರುವ ಪ್ರಸಂಗ-ಗಳನ್ನು ಎತ್ತಿಕೊಳ್ಳುತ್ತಾರೆ. ಈಗ ಒಟ್ಟು ನಾಲ್ಕುನೂರು ಪ್ರಸಂಗಗಳಿವೆ ಎಂಬ ಅಂದಾಜಿದೆ. ಅವುಗಳಲ್ಲಿ ನೂರು ಪ್ರಸಂಗಗಳು ಪುಸ್ತಕ ರೂಪದಲ್ಲಿವೆ. ಕೆಲವು ಓಲೆಗರಿ ಮತ್ತು ಕಾಗದದಲ್ಲಿ ಲಿಖಿತರೂಪದಲ್ಲಿವೆ. ಮತ್ತೆಕೆಲವು ಪರಂಪರೆಯಾಗಿ ಬಂದು ಹಾಡುವವರ ಬಾಯಲ್ಲಿ ಮಾತ್ರ ಉಳಿದಿವೆ. ಕೆಲಭಾಗವತರು ೩೦-೪೦ ಪ್ರಸಂಗಗಳನ್ನು ಹಾಡಬಲ್ಲರು. ಮೋಹಿನೀ ಭಸ್ಮಾಸುರ ಕೃಷ್ಣಾರ್ಜುನಕಾಳಗ, ಅಭಿಮನ್ಯುಕಾಳಗ, ತಾಮ್ರಧ್ವಜನ ಕಾಳಗ, ಸುಭದ್ರಾಪರಿಣಯ, ಕನಕಾಂಗಿ ಮುಂತಾದ ಪ್ರಸಂಗಗಳನ್ನು ಪ್ರದರ್ಶಿಸುತ್ತಾರೆ. 'ದೇವೀ ಮಹಾತ್ಮ್ಯೆ' ಯಲ್ಲಿ ಹತ್ತಾರು ರಕ್ಕಸರು ರಂಗಸ್ಥಳಕ್ಕೆ ಬರಲು ಅವಕಾಶ ಇರುವದರಿಂದ ಇದು ಹೆಚ್ಚು ಜನಪ್ರಿಯವಾಗಿದೆ.

ಪ್ರದರ್ಶನ ಪ್ರವಾಸ ಮುಗಿದ ನಂತರ ತಮ್ಮಊರಿಗೆ ಬಂದು ದೇವಾಲಯದ ಮುಂದೆ ಮತ್ತೊಮ್ಮೆ ಸೇವೆ ಆಟವಾಡಿ ಬಂದು ಆ ವರ್ಷದ ಪ್ರದರ್ಶನಕ್ಕೆ ಮಂಗಳ ಹಾಡುತ್ತಾರೆ. ಇತ್ತೀಚಿಗೆ ಈ ಮೇಳಗಳು ರಾಷ್ಟ್ರೀಯ ಖ್ಯಾತಿಯನ್ನು ಗಳಿಸಿರು-ವದು ಯಕ್ಷಗಾನದ ಶ್ರೀಮಂತಿಕೆಯ ಸಂಕೇತವಾಗಿದೆ. ಇಂದಿಗೂ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಪ್ರತಿವರ್ಷ ನೂರುಗಟ್ಟಲೆ ಹರಕೆ ಆಟಗಳು ನಡೆಯುತ್ತಿವೆ. ದಕ್ಷಿಣ ಕನ್ನಡದ ಕಟೀಲು, ಮಂದರ್ತಿ, ಮಾರಣಕಟ್ಟೆ ಮೇಳಗಳು ಕೇವಲ ಹರಕೆ ಆಟಗಳನ್ನೇ ಆಡುತ್ತಿವೆ. ಪ್ರತಿಮೇಳಕ್ಕೆ ಸುಮಾರು ಇನ್ನೂರರಷ್ಟು ಹರಕೆ ಆಟಗಳುಸಿಗುತ್ತಿವೆ. ಉತ್ತರಕನ್ನಡದ ಹೊನ್ನಾವರ ತಾಲೂಕಿನ ಗುಂಡಬಾಳಾ ಎಂಬ ಊರಿನಲ್ಲಿ ಹನುಮಂತದೇವಾಲಯದ ಮುಂದೆ ಒಂದುನೂರಕ್ಕಿಂತ ಹೆಚ್ಚು ಹರಕೆ ಆಟಗಳಾಗುತ್ತಿವೆ. ಪ್ರತಿಯೊಂದು ಹರಕೆ ಆಟವೂ ಒಬ್ಬೊಬ್ಬ ಭಕ್ತನದು. ಮದುವೆಯ ಚಪ್ಪರದಲ್ಲಿ ಔತಣವನ್ನು ಕೊಟ್ಟಂತೆಯೇ ಯಕ್ಷಗಾನ ಆಟವಾಡಿಸಿ, ಕಲಾಸಮಾರಾಧನೆ ಮಾಡುವ ಪದ್ಧತಿಯೂ ಇತ್ತು. ಹಳ್ಳಿಯ ಜನ ಒಟ್ಟಾಗಿ, ಅಥವಾ ಉದಾರಿಗಳು ಒಬ್ಬೊಬ್ಬರೇ ಆಟ ಆಡಿಸುತ್ತಿದ್ದರು. "ಎಲ್ಲರಿಗೂ ಊಟ ಹಾಕಲಾರೆ; ಆಟ ನೋಡಿಯಾದರೂ ತೃಪ್ತಿ ಪಡಲಿ" ಎಂಬ ಮನೋಭಾವನೆ ಅವರದಾಗಿತ್ತು.

ಯಕ್ಷಗಾನಕ್ಕೆ ರಂಗಸಜ್ಜಿಕೆಯು ಮುಖ್ಯವಾದುದು. ರಂಗಸ್ಥಳಕ್ಕೆ ನಾಲ್ಕು ಕಂಬಗಳನ್ನು ನೆಟ್ಟು ತೆಂಗಿನಗರಿಯ ಚಪ್ಪರ ಹಾಕಿ ಮಾವಿನ ಎಲೆಯ ತೋರಣ ದಿಂದ ಅಲಂಕೃತಗೊಳಿಸುತ್ತಾರೆ. ಸ್ಥಳ ಸುಮಾರಾಗಿ ೫೦-೩೦೦ ಚದುರಡಿ ಇರಬೇಕಾಗುತ್ತದೆ. ಹಾಗೆ ಸುತ್ತಮೂರುಕಡೆ ಬಿದಿರಿನ ಸೋಗೆಯಿಂದ ಮುಚ್ಚು

ತ್ತಾರೆ. ಆಯಾಮುದಿನಗಳಲ್ಲಿ 'ರಾಹುವಿನ' ದಿಕ್ಕನ್ನು ತಪ್ಪಿಸಿ ರಂಗಸ್ಥಳ ಕಟ್ಟು ತ್ತಾರೆ. ಹಿಮ್ಮೇಳದವರು ಇರುವ ಬದಿಯನ್ನು ಬಿಟ್ಟು ರಂಗಸ್ಥಳದ ಉಳಿದ ಮೂರುದಿಕ್ಕುಗಲ್ಲಿ ಪ್ರೇಕ್ಷಕರು ಕೂರಲು ಸ್ಥಳ ಕೆಲವರಿಗೆ ಬಯಲಿನ ನೆಲವೇ ಆಸನವಾದರೆ, ಇನ್ನು ಕೆಲವರು ಮನೆಯಿಂದಲೇ ಚಾಪೆ, ಜಮಖಾನ ತಂದಿರುತ್ತಾರೆ. ಮಧ್ಯರಾತ್ರಿಯಲ್ಲಿ ನಿದ್ದೆ ಬಂದರೆ ಬೇಕಾಗಬಹುದೆಂದು ತಲೆದಿಂಬುಗಳನ್ನು ತರು-ವವರು ಕಡಿಮೆ ಏನಿಲ್ಲ! ಇಡೀ ಬಯಲಲ್ಲಿ ಕುಳಿತೋ, ನಿಂತೋ ಆಕಳಿಸುತ್ತೋ ಆಟವನ್ನು ನೋಡಬಹುದು.

ಇಷ್ಟೆಲ್ಲ ಆದಬಳಿಕ ಒಳಗಡೆ ಕಲಾವಿದರು ಬಣ್ಣಬಳಿದು ಕೊಳ್ಳಲು ಒಂದು ಕೋಣೆ ಕಟ್ಟಿಕೊಳ್ಳುತ್ತಾರೆ. ಇದಕ್ಕೆ ಚೌಕದಮನೆ ಅನ್ನುತ್ತಾರೆ. ಊರಕಿರಿಯರಿಗೆ ಒಂದು ಹಬ್ಬವೆಂದೇ ಹೇಳಬೇಕಾಗುತ್ತಿದೆ. ಆ ಚೌಕಿಮನೆಯಲ್ಲಿ ಪಾತ್ರಗಳು ಅಣಿಯಾಗುವದನ್ನು ನೋಡುತ್ತ ತಾಸೆರಡು ತಾಸುನಿಂತು ಬಿಡುತ್ತಾರೆ. ಯಕ್ಷಗಾನದಲ್ಲಿ 'ಪ್ರಣಯವು' ಹೆಸರಿಗೆ ಕಾಳಗ, ಮತ್ತು ಮಾತ್ರವಿದ್ದು, ಕಾಳಗದ್ದೇ ಪ್ರಧಾನಪಾತ್ರ, ದಕ್ಷಯಜ್ಞನನ್ನು ಸೂರೆಗೊಳ್ಳಲು ಕಾಳಗ, ಶಿವನೊಂದಿಗೆ ದೈತನ ಕುಮಾರ ಮತ್ತು ತಾರಕಾಸುರನ ನಡುವೆ ಕಾಳಗ, ಅಂತ್ಯದಲಿ ಕೊಲೆ, ಯಕ್ಷ ಗಾನವು ತಾಂಡವ ಪ್ರಕಾರವೆಂದೂ ನಂಬಲಾಗಿದೆ. ತಾಂಡವು ಶಿವನ ರುದ್ರಾವತಾರದ, ಪ್ರಳಯಸ್ವರೂಪವನ್ನು ಬಿಂಬಿಸುವ ನೃತ್ಯ ಆದ್ದರಿಂದ ಯಕ್ಷಗಾನದಲ್ಲಿ ರೌದ್ರ ನೃತ್ಯಗಳು ಹೆಚ್ಚಿವೆ ಎಂದು ಭಾವಿಸಲು ಸಾಧ್ಯವಿದೆ. ಲಾಸ್ಯವು ಕ್ವಚಿತಾಗಿ ಕಂಡು ಬರುತ್ತಿದೆ. ಸ್ತ್ರೀಪಾತ್ರಗಳಲ್ಲಿ ಇಂದಿಗೂ ನಟರೇ ಅಭಿನಯಿಸುತ್ತಾರೆ. ಅವರ ವೇಷಭೂಷಣಗಳು, ನೃತ್ಯಗಳು ನಟಿಯರಿಗೆ ನುಂಗಲಾರದ ತುತ್ತುಗಳಾಗಿವೆ. ಸ್ತ್ರೀ ಪಾತ್ರಗಳಲ್ಲಿ ಲಾಸ್ಯವನ್ನು ನಿರೀಕ್ಷಿಸಬಹುದಾದರೂ ಅಲ್ಲಿಯೂ ರೌದ್ರಾಕಾರದ ಮಾತುಗಳು, ಹಾಡುಗಳು, ಮಾತುಗಳಿಗೇ ಪ್ರಾಮುಖ್ಯತೆಯಿದೆ.

ಯಕ್ಷಗಾನದಲ್ಲಿ ಹಾಡುವವರು ಒಬ್ಬನೆ ಆತನೇ ಭಾಗವತ, ನಿರ್ದೇಶಕನೂ ಹೌದು. ವೇಷಧಾರಿಗಳು ಹಗಲಲ್ಲಿ ನಿದ್ರಿಸಿ ರಾತ್ರಿಯಿಡಿ ಆಟಮಾಡುತ್ತಾರೆ. ಭಾಗವತರಿಗೆ ಮಾತ್ರ ವಿಶೇಷ ವೇಷಭೂಷಣಗಳಿರುವದಿಲ್ಲ, ಯಕ್ಷಗಾನದ ವೈಭವವಿರುವದೇ ವೇಷಭೂಷಣಗಳಲ್ಲಿ ಪ್ರಮುಖವಾಗಿ ಕಿರೀಟ, ಪಗಡೆ, ಕೇದಿಗೆ, ಎದೆಹಾರ, ಭುಜಕೀರ್ತಿ, ಕೈಕಟ್ಟು, ತೋಳಬಂದಿ ನಡಕಟ್ಟು, ಕರ್ಣಕುಂಡಲ, ವೀರಗಾಸೆ, ಕಾಲ್ಕಡಗ ಮುಂತಾದವುಗಳನ್ನು ಪುರುಷಪಾತ್ರಗಳು ಬಳಸಿದರೆ ಹೊನ್ನೋಲೆ, ಬುಗಡಿ, ಸೊಂಟಕ್ಕೆ ಒಡ್ಯಾಣ, ಕೊರಳಿಗೆ ಟೀಕಿಸರ, ಬಳೆಗಳು ಮೂಗತಿ, ಕೈಚಿನ್ನ ಝುಲ್ಲರಿಗಳು, ಉಂಗುರ ಗೆಜ್ಜೆಗಳನ್ನು ಸ್ತ್ರೀಪಾತ್ರಧಾರಿಗಳು ಬಳಸುತ್ತಾರೆ.

ಯಕ್ಷಗಾನದ ಗಂಧರ್ವ ಮತ್ತು ಕಿನ್ನರರ ಮುಖ ವರ್ಣಾಲಂಕಾರವು ವಿಶೇಷ ರೀತಿಯಲ್ಲಿ ಬರೆಯಲ್ಪಡುತ್ತಿವೆ. ಕಣ್ಣಿನಸುತ್ತಲೂ ಕಪ್ಪುಚುಕ್ಕೆಗಳು, ಅದರ ಸುತ್ತಲೂ ಕೆಂಪುಗೆರೆ ಹರವಾದ ಮತ್ತು ದಟ್ಟವಾದ ಉದ್ದಮೀಸೆಗಳು, ಕೆಂಪು

ವರ್ಣದ ದೊಡ್ಡ ಮುಂಡಾಸವಿದ್ದರೆ, ರಾಕ್ಷಸ ಪಾತ್ರಧಾರಿಗಳು ಅಂಗಗಳಿಗೆಲ್ಲ ಬಟ್ಟೆಸುತ್ತಿ ಅತಿಮಾನುಷ ಆಕಾರ ಪಡೆಯುವವು ಆಕಾರಕ್ಕೆ ತಕ್ಕಗಾತ್ರದ ಕಿರೀಟ, ಕವಚ, ಭುಜಕೀರ್ತಿ, ಖಡ್ಗ, ಬಿಲ್ಲುಬಾಣ, ರಾಕ್ಷಸ ಪಾತ್ರಗಳು ಬೆಂಕಿಹಿಡಿದು ಕೊಂಡು ಹೊರಗಿನಿಂದ ಬರುತ್ತವೆ. ಆ ಸಂದರ್ಭದಲ್ಲಿ ಚಂಡಮದ್ದಳೆಗಳು ಭಯಂಕರವಾಗಿ ಬಾರಿಸಲ್ಪಡುತ್ತಿವೆ. ರಾಕ್ಷಸಪಾತ್ರಗಳು ಉಪಯೋಗಿಸಿರುವ ಬಣ್ಣ. ವೇಷಗಳ ಬೀಕರತೆ, ಪ್ರವೇಶಿಸುವಾಗಿನ ರೌದ್ರತೆಯು ಎಷ್ಟಿಂತ್ತೆಂದರೆ ಗರ್ಭಿಣಿಯರು ಗಾಬರಸಿ (ಹಲಿಉಳಿದದ್ದೂ ಉಂಟು) ಗರ್ಭಪಾತವಾಗಿದ್ದೂ ನಿಜ ವೆಂದು ಹಲವರ ಅಭಿಪ್ರಾಯ.

ಯಕ್ಷಗಾನವು ಗಣೇಶನ ಸ್ತುತಿಯೊಂದಿಗೆ ಪ್ರಾರಂಭವಾಗುತ್ತಿದೆ. ಪ್ರಾರಂಭ ದಲ್ಲಿ ಇಬ್ಬರು ಕೆಂಪುವರ್ಣದ ಬಟ್ಟೆಯನ್ನು ಅಡ್ಡಹಿಡಿಯುವರು. ಅದರ ಹಿಂದೆ ಪಾತ್ರಗಳು ಇರುತ್ತವೆ. ಈ ಬಟ್ಟೆಯ ಮೇಲೆ ಮೇಳದ ಹೆಸರನ್ನು ಹಲವರು ಬರೆದಿರುತ್ತಾರೆ. ಹಾಡಿನ ಅಂತ್ಯದಲ್ಲಿ ಪರದೆ ಬಟ್ಟೆಯನ್ನು ತಗೆಯುವರು. ಭಾಗವತನು ಪಾತ್ರಗಳನ್ನು ಪ್ರೇಕ್ಷಕರಿಗೆ ಪರಿಚಯ ಮಾಡಿಸಿಕೊಡುತ್ತಾನೆ. ಭಾಗವತ ಹನುಮನಾಯಕನೊಂದಿಗೆ ಸೇರಿ ಹಾಸ್ಯದ ಹೊನಲನ್ನು ಹರಿಸುತ್ತಾನೆ. ಗಣೇಶನ ಸ್ತುತಿಯನಂತರ ಕೋಡಂಗಿಗಳು—ಬಾಲನಟರು ಭಾಗವತನಿಗೆ, ರಂಗಕ್ಕೆ ನಮಿಸಿ, ಪ್ರವೇಶಿಸುವರು.

ಸ್ತ್ರಿ ಪಾತ್ರವು ನರ್ತಿಸುವ ಗೀತದ ವರ್ತಿಯು ಸುಮಾರಾಗಿ ಹೀಗಿವೆ :

ತಾ ದಿಮ್ಮಿ ತತ್ತ ದಿಮ್ಮಿ ಥೈ ಥೈ ಥೈ<br>
ಕಿಟ ಟ ಡಿಮ್ಮಿ ಡಿಮ್ಮಿ ತಕ್ ಥೈ ತಕ್ ಥೈ<br>
ತ ಜಣ ಥೈ ಥೈ ಜುಣ ಥೈ ಥೈ<br>
ಕಿಟಕ ಧಿಮ್ಮಿ ತಕಥೈ ಥೈ ಥೈ

ಸ್ತ್ರಿ ಪಾತ್ರಗಳನ್ನು ಧರಿಸುವವರ, ಹಾಡು ನೃತ್ಯಗಳಲ್ಲಿ ಪಳಗಿದವರಿರುವರು. ಯಕ್ಷಗಾನದ ಪಾತ್ರಗಳ ನೃತ್ಯಕ್ಕಿಂತ ತುಸು ಮೇಲ್ತರಗತಿಯದೆಂದು ನಿರ್ಭಿಡೆ-ಯಾಗಿ ಹೇಳಬಹುದು. ಪ್ರದರ್ಶನ ಸುಮಾರಾಗಿ ರಾತ್ರಿ ಹತ್ತು ಘಂಟೆಗೆ ಪ್ರಾರಂಭವಾಗಿ ಸೂರ್ಯೋದಯವಾಗುವವರೆಗೆ ನಡೆಯುವದುಂಟು. ಈ ಯಕ್ಷ ಗಾನಗಳು ಈಗ ಬಹುಸಂಖ್ಯೆಯಲ್ಲಿ ಪ್ರದರ್ಶನವಾಗದಿದ್ದರೂ ಆಗಾಗ ಆಡುವ-ದನ್ನು ನೋಡುತ್ತೇವೆ. ಅತ್ತಸಾಯಲೂ ಇಲ್ಲ ಇತ್ತಬದುಕಲೂ ಇಲ್ಲ. ಎನ್ನುವಂತೆ ಅವುಗಳ ಈಗಿನ ಸ್ಥಿತಿ.



# ಜಾನಪದ ಸಾಹಿತ್ಯದಲ್ಲಿ ಸಹೋದರ ಸಹೋದರಿಯರು

—ಎಂ. ಎಸ್. ಇಂಚಲ, ಎಂ.ಎ.

"ಕನ್ನಡದ ವೇದಗಳು ಜಾನಪದ ಗೀತೆಗಳು
ಇದನು ಬರೆದವರೆಲ್ಲ ಎಲಿಮರೆಯ ಹೂವುಗಳು
ಕೀರ್ತಿಕಾಮಿಗಳಲ್ಲ ಆ ಕಬ್ಬಿಗರು; ಹೆಸರ
ಬಯಸದೆಯೆ ಹಾಡಿದವರು ಅನುಭಾವಿಗಳ ಉಸಿರ
ನೊಂದನೆ ಹಿಡಿದು ರಾಜಾಧಿರಾಜರಾಸ್ಥಾನ-
ದಲಿ ಇವರು ಪಂಪರನ್ನರ ತೆರದಿ ಸನ್ಮಾನ
ದಾನಗಳ ಪಡೆದಿಲ್ಲ; ತಾಳೆಯೊಲೆಗಳಲ್ಲಿ
ಬರೆದಿಡಲು ಬಯಸಿಲ್ಲ. ಜನಮನದ ಎದೆಯಲ್ಲಿ
ವರುಷವೆನಿತಾದರೂ ಶ್ರುತಿ ರೂಪದಲಿ ಹರಿದು
ಬಂದವು ಗಂಗೆಯಂತೆ ಅವರ ಮನದಲಿ ಕೊರೆದು
ನಿಂದುವು ಚಿತ್ರದಂತೆ........"

ಕನ್ನಡ ಜಾನಪದ ಸಾಹಿತ್ಯದ ಹಿರಿಮೆಯನ್ನು ಡಾ. ಜಿ. ಎಸ್. ಶಿವರುದ್ರಪ್ಪನವರು ಚಿತ್ರಿಸಿದ್ದಾರೆ. ಜನಪದ ಸಾಹಿತ್ಯವನ್ನು ಕನ್ನಡದ ವೇದಗಳು ಎಂದು ಕರೆದಿರುವ ಅವರ ವಾಣಿಯಲ್ಲಿ ಅತಿಶಯೋಕ್ತಿಯಿಲ್ಲ. ಜಾನಪದ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಮಾನವೀಯ ಭಾವನೆಗಳ ಉದ್ದೀಪನವನ್ನು ನಾವು ಸ್ಪಷ್ಟವಾಗಿ ಕಾಣುವುದು ಜಾನಪದ ಸಾಹಿತ್ಯದಲ್ಲಿ. ಸಾಮಾಜಿಕ ಜೀವನದಲ್ಲಿ ಕಾಣುವ ರೀತಿ–ನೀತಿ, ಆಚಾರ–ವಿಚಾರ, ಸುಖ–ದುಃಖ, ಅಂಕು–ಡೊಂಕು, ಅನುಭವ ಆದರ್ಶ, ಸರಸ–ವಿರಸ ಇವು ಜೀವನದ ವಿವಿಧ ಪದರುಗಳು. ಇಂತಹ ವೈವಿಧ್ಯಮಯವಾದ ಪದರುಗಳನ್ನು ಜಾನಪದ ಸಾಹಿತ್ಯ

ಕೃಪೆ : ಆಕಾಶವಾಣಿ ಧಾರವಾಡ.

ದಲ್ಲಿ ಸಾಕಷ್ಟು ಕಾಣಬಹುದು. ಜನಜೀವನದ ನಿತ್ಯನೂತನ ಘಟನೆಗಳನ್ನು ನೇರವಾಗಿ ಹೃದಯದಿಂದ ಹೃದಯಕ್ಕೆ ನಾಟುವಂತೆ ಸುಲಭ ಶೈಲಿಯಲ್ಲಿ ಬಹು ಸುಂದರವಾಗಿ ಜಾನಪದ ಕವಿಗಳು ಹಾಡಿಕೊಂಡಿದ್ದಾರೆ.

ಹಳ್ಳಿಯ ರೈತರು, ಹೆಣ್ಣುಮಕ್ಕಳು ಬಿತ್ತುವಾಗ, ಯಾತ ಹೊಡೆಯುವಾಗ ಹಂತಿ ಕಟ್ಟಿದಾಗ, ಕಾಳು ತೂರಿ ರಾಶಿ ಮಾಡುವಾಗ, ಚಕ್ಕಡಿ ಹೊಡೆಯುವಾಗ, ಬೀಸುವಾಗ, ತೊಟ್ಟಿಲು ತೂಗುವಾಗ ಇತ್ಯಾದಿ ದಿನನಿತ್ಯದ ಕಾರ್ಯಗಳಲ್ಲಿ ಹಾಡಿ ಹೃದಯವನ್ನು ಹಗುರು ಮಾಡಿಕೊಳ್ಳುತ್ತಾರೆ. ಇಂತಹ ಜಾನಪದ ಸಾಹಿತ್ಯದಲ್ಲಿ ಮೂಡಿ ಬಂದ ಸಹೋದರ ಸಹೋದರಿಯರ ಚಿತ್ರಣವನ್ನು ಕಾಣಬಹುದು.

ಬಾಳ ಬಳ್ಳಿಯ ಹೂವುಗಳಾಗಿ ಅಣ್ಣ–ತಂಗಿ, ಅಕ್ಕ ತಮ್ಮ ಮನೆಗೆ ಮಲ್ಲಿಗೆ ಯಾಗಿ ಬೆಳೆಯುತ್ತಾರೆ. ಜತೆಗೂಡಿ ಬೆಳೆದು ಬಂದ ಇವರ ಜೀವನ, ಸ್ನೇಹಲತೆ ಯಾಗಿ ಹಬ್ಬಿ, ಹಮ್ಮಿ ವಾತ್ಸಲ್ಯದ ನವಿರುಗಂಪನ್ನು ಸೂಸುವ ಪರಿಶುದ್ಧ ಪಾರಿ ಜಾತ ಎಂದು ಹೇಳಬಹುದು.

ಅಣ್ಣನಿಗೆ ತಂಗಿಯಂದರೆ ಎಲ್ಲಿಲ್ಲದ ಪ್ರೀತಿ. ತಂಗಿಗಾಗಿ ಏನೆಲ್ಲ ಕೊಳ್ಳಲು ಸಿದ್ಧ. ಮಾಲೆಗಾರನೊಬ್ಬ ಮಲ್ಲಿಗೆಯ ಹೂವುಗಳನ್ನು ಮಾರಲಿಕ್ಕೆ ಬಂದಾಗ, ಆ ಹೂವುಗಳ ಬೆಲೆಕೇಳುತ್ತಾನೆ.

ಅಚ್ಚ ಮಲ್ಲಿಗೆ ಹೂವ ಮುಚ್ಚಿ-ಮಾರುವ ಜಾಣ
ಕೊಳ್ಳತೇನದರ ಬೆಲಿ ಹೇಳೊ ! ತಂಗೀಗೆ
ಸುರಳಿಗೂದಲಿನ ಸುಗಣಿಗಿ

ತಂಗಿಗೆ ಅಣ್ಣ ಬೆಲ್ಲದಚ್ಚಾದರೆ, ಅಕ್ಕ ಕರುಳಿನ ಕಲ್ಲುಸಕ್ಕರೆ, ತಂಗಿಯ ರೂಪ ಲಾವಣ್ಯವನ್ನು ಕಂಡು ಅಕ್ಕ ಪ್ರೀತಿಯಿಂದ ವರ್ಣಿಸುವ ವೈಶಿಷ್ಟ್ಯ ಇಲ್ಲಿದೆ.

ನಡೆದರ ನಡುಸಣ್ಣ ಪದುಮ ಜಾತಿಯ ಹೆಣ್ಣ
ಮಾವಿನ ಹೋಳ ನಿನಕಣ್ಣ | ತಂಗೆವ್ವ
ಮಾವ ಬಂದಾನ ಒಳಗ್ಹೋಗ

ತಂಗಿಯನ್ನು ಎಷ್ಟು ವರ್ಣಿಸಿದರೂ ತೃಪ್ತಿಯಿಲ್ಲ ಅಕ್ಕನಿಗೆ. ಎತ್ತರವಾಗಿ ಬೆಳೆದ ತಂಗಿಯ ಸೌಂದರ್ಯದಲ್ಲಿ ಶಿವನನ್ನು ಕಾಣುವ ಬಯಕೆ :

ಗಿಡ್ಡರು ನಡೆದರ ಗಿಣಿ ಹಿಂಡು ನಡೆದ್ಹಾಂಗ
ಉದ್ದನ ಬಾಲಿ ನನತಂಗಿ | ನಡೆದರ
ರುದ್ದರನ ತೇರು ಎಳೆದಂಗ

ಆತೇರಿನ ಪವಿತ್ರ ಸೌಂದರ್ಯವನ್ನು ಉದ್ದನ್ನ ಬಾಲಿಯಾದ ತಂಗಿಯಲ್ಲಿ ಕಂಡು ವರ್ಣಿಸಿದರೂ, ಗಿಡ್ಡರನ್ನು ತೆಗಳದೆ ಅವರನ್ನು ಗಿಣಿ ಹಿಂಡಿಗೆ ಹೋಲಿಸುವ ಉದಾತ್ತ ಗುಣವನ್ನು ಆ ಹೆಣ್ಣು ಮಗಳಲ್ಲಿ ಕಾಣುತ್ತೇವೆ.

ತಂಗಿಯ ಚೆಲುವನ್ನು ಮೆಚ್ಚಿಕೊಂಡಂತೆ–ತಮ್ಮನ ರಸಿಕತೆಯನ್ನು ಕೊಂಡಾಡುತ್ತಾನೆ. ಎತ್ತು ಕಾಯಲಿಕ್ಕೆ ಹೋದ ಚಿಕ್ಕತಮ್ಮ ದಣಿದು ಹುತ್ತವ ಒರಗಿ ಮಲಗಿದಾಗ, ಹಣೆಯಮೇಲೆ ಬೆವರಹನಿಗಳು ಕಂಡೊಡನೆ 'ಮುತ್ತುಬಂದಾವೆ ಬೆಲೆಮಾಡ' ಎಂದು ಸುಂದರವಾಗಿ ವರ್ಣಿಸುತ್ತಾಳೆ.

ತಾಟಗಿತ್ತಿ ಹೆಣ್ಣೆ ತೋಟಕೆ–ಹೋಗದಿರೆ
ತೋಟದಿಲ್ಲ ವನೆ ಕರಿ ಚಲುವ | ತಮ್ಮಯ್ಯ
ಆಟಕೆ–ಮುಂದಲೆ ಹಿಡಿದಾನು

ತಮ್ಮ ಕಪ್ಪನಾದರೂ ಅಕ್ಕನಿಗೆ ಚೆಲುವ ಚಂದ್ರಾಮನೆ. ಅವನತುಂಟತನ ವನ್ನು ಮೆಚ್ಚಿ ಅಭಿಮಾನದಿಂದ ಹಾಡುತ್ತಾಳೆ. ತೋಟಕೆಹೋದ ತಮ್ಮ ಊಟಕೆ ಬರಲಿಲ್ಲವೆಂದೂ ತೋಟದ ಹೂವ ತಲೆತುಂಬ ಮುಡಿದು ಕೊಂಡಿದ್ದಾನೆಂದೂ ವರ್ಣಿಸಿ ತಮ್ಮನ ಸೌಂದರ್ಯೋಪಸನೆಯನ್ನು ಸೂರೆಗೊಂಡಿದ್ದಾಳೆ.

ತವರು ಮನೆಯ ಅಂಗಳದಲ್ಲಿ ಬೆಳೆದ ಹೂವನ್ನು ಗಂಡನ ಮನೆಯ ಮಂದಿರಕ್ಕೆ ಕಳುಹಬೇಕಾಗುತ್ತದೆ. 'ಎಕ್ಕಿಯ ಗಿಡದಾಗ ಹಕ್ಕಿ ಬೋರ್ಯಾಡಿದಂಗ' ತವರಿನ ಬಂಧು ಬಳಗದ ಕಣ್ಣೀರು ಒಕ್ಕುಂದ ಹೊಳೆಯಾಗಿ ಹರಿಯುತ್ತದೆ. ಮನೆಯ ಮಗಳನ್ನು ಗಂಡನ ಮನೆಗೆ ಕಳುಹುವಾಗ, 'ಸುಡುವ ಬೆಂಕಿಗೆ ಎಣ್ಣೀ ಕೊಡವ ಸುರುವಿದಾಂಗ' ಹಡೆದವ್ವನ್ಹೊಟ್ಟೆ ತಳಮಳಿಸಿದರೆ, 'ಕಪ್ಪುರ ಗುಡ್ಡಕ ಬೆಂಕಿ ತಪ್ಪದಲೆ ಕೊಟ್ಟಾಂಗ' ಅಪ್ಪನ ಹೊಟ್ಟೆ ತಳಮಳಿಸುತ್ತದೆ. ಈ ಪ್ರಸಂಗದಲ್ಲಿ ಅಣ್ಣತಮ್ಮಂದಿರ ಒಡಲು ಕಡಲವು ದುಃಖದಿಂದ ಉಕ್ಕೇರುತ್ತದೆ.

ಸುಣ್ಣದ ಭಟ್ಯಾಗ ತಣ್ಣೀರು ಹೊಯ್ದಾಂಗ
ಅಣ್ಣನ ಹೊಟ್ಟೆ ಹೊಯ್ದಾಡೆ | ನನತಂಗಿ
ನನ್ನ ಮನಿಗಿಂದ ಎರವಾದೆ

ಸಣ್ಣತಮ್ಮಾಗಿದ್ರ ತಣ್ಣಗ ಇರತಿದ್ದೆ
ಮನಬಂದ್ಹೊಲದಾಗ ಸರಿಪಾಲು | ತಕ್ಕೊಂಡು
ಚಿನ್ನಿನನ ಹಂತೇಲಿ ಇರತಿದ್ದೆ

ಎಂದು ಕೊರಗುತ್ತಾನೆ, ಅಕ್ಕನ ಅಗಲಿಕೆಯಿಂದಾಗಿ ತಮ್ಮನ ಹೊಟ್ಟೆಯು ಕೂಡ ಸಿಡಿದೇಳುತ್ತದೆ. ತಮ್ಮನ ಅಂತರಂಗದ ಒಡಬಾಗ್ನಿಯ ಪ್ರಖರತೆಯನ್ನು ಕಾಣು ತ್ತೇವೆ ಈ ಘಳಿಗೆಯಲ್ಲಿ:

ತಮ್ಮನ ಮದ್ದಿಗೆ ಬೆಂಕಿ ಒಮ್ಮೆಲೆ ಕೊಟ್ಹಾಂಗ
ತಮ್ಮನ ಹೊಟ್ಟೆ ತಳಮಳಿಸಿ | ಅಕ್ಕಾನನಗ
ರಮ್ಮಿಸಿ ಹಣ್ಣು ಕೊಡತಿದ್ದೆ

ತಮ್ಮನ ದುಃಖ ಒಟ್ಟರಿಸಿ ಬರುತ್ತದೆ. ಸಹಿಸಿಕೊಳ್ಳುವ ಸಹನೆ ಚಿಕ್ಕತಮ್ಮನಿಗೆ ಹೇಗೆ ಬಂದೀತು ? ಪಾಪ ! ಜೋರಾಗಿ ಅಳುತ್ತಾನೆ. 'ಅಕ್ಕಾ ನನಗ ರಮ್ಮಿಸಿ

ಹಣ್ಣು ಕೊಡತಿದ್ದೆ' ಎಂಬ ಮಾತು ತಮ್ಮನ ಮೇಲಿರುವ ಅಕ್ಕನ ಅಪಾರ ಪ್ರೀತಿಯನ್ನು ಬಿಂಬಿಸುವಂತಿದೆ. ಇಂತಹ ಸನ್ನಿವೇಶಗಳಲ್ಲಿ ನಾವು ಅಣ್ಣತಮ್ಮ, ಅಕ್ಕತಂಗಿಯರ ವಾತ್ಸಲ್ಯದ ಕರುಳಿನ ಬೆಸುಗೆಯನ್ನು ಕಾಣುತ್ತೇವೆ.

ತವರು ಮನೆಯಲ್ಲಿ ಹುಟ್ಟಿ ಬೆಳೆದರೂ, ಗಂಡನ ಮನೆಗೆ ಬೆಳಕಾಗಿ ಬಾಳಬೇಕಾಗುತ್ತದೆ ಹೆಣ್ಣಾದವಳು. ತಂದೆ ತಾಯಿ, ಸಹೋದರ ಸಹೋದರಿಯರು, ಬಂಧು ಬಳಗ ಎಲ್ಲರನ್ನು ಬಿಟ್ಟು ತೆರಳಬೇಕಾಗುವದು. ಇದು ಹೆಣ್ಣಿನ ಮಹಾ ತ್ಯಾಗವಲ್ಲವೇ ? ಗಂಡನ ಮನೆಯನ್ನು ಸೇರಿದರೂ ಅವಳಲ್ಲಿ ತವರ ಮೇಲಿನ ಹಂಬಲ ಎಂದಿಗೂ ಅಳಿಯುವಂತಿಲ್ಲ.

ಹಾಲುಂಡ ತವರಿಗೆ ಏನೆಂದು ಹಾಡಲಿ
ಹೊಳೆದಂಡೆಲಿರುವ ಕರಕೀಯ । ಕುಡಿಯಂಗ
ಹಬ್ಬಲೆ ಅವರ ರಸಬಳ್ಳಿ

ಅಣ್ಣನ ಆರೆತ್ತು ತಮ್ಮನ ಮೂರೆತ್ತು
ನಮ್ಮಪ್ಪನೆತ್ತು ಹದಿನಾರು । ಬರುವಾಗ
ನನ್ನೂರ ಭೂಮಿ ನಡುಗ್ಯಾವ

ಬಡವರು ಬಗ್ಗರು ಹೆಡಗಿ ಬುಟ್ಟಿಯವರು
ಹೋಗರಿ ನನ್ನ ತವರಿಗೆ । ಅಣ್ಣಯ್ಯ
ದರುಮದ ಹಗೇವ ತೆಗದಾನ

ಧರ್ಮವಂತ ಅಣ್ಣನ ದಾನ ಗುಣವನ್ನು ಹೃದಯ ದುಂಬಿ ಹಾಡುತ್ತಾಳೆ. 'ಕಣ್ಣು ಕಾಣುವ ತನಕ ಬೆನ್ನು ಬಾಗುವ ತನಕ' ತಾಯಿ ಇರಬೇಕು, ಮೇಲಿಂದ ಮೇಲೆ ತವರಿಗೆ ಕರೆದುಕೊಂಡು ಹೋಗುವುದಕ್ಕಾಗಿ ಅಣ್ಣಯ್ಯ ಇರಲೇಬೇಕು.

ಹೆಣ್ಣುಮಕ್ಕಳಿಗೆ ದೊಡ್ಡ ಹಬ್ಬ ನಾಗರಪಂಚಮಿ. ನಾಗಪ್ಪಗ ಹಾಲೆರೆದು ನಾಗರ ಹೆಡಿಯಂಗ ಆಡುವ ಹೆಬ್ಬಯಕೆ–ಅವರಿಗೆ. ಎಲ್ಲ ಹೆಣ್ಣುಮಕ್ಕಳು ಸಡಗರದಿಂದ ಸಿಂಗಾರಾಗಿ ನಾಗಪ್ಪನಿಗೆ ಹಾಲೆರೆದು, ಅಳ್ಳಿಟ್ಟು ತಂಬಿಟ್ಟು ತಿಂದು ಸಂಜೆಮುಂದೆ ಜೋಕಾಲಿ ಜೀಕುವ ಲವಲವಿಕೆ. ಈ ಹಬ್ಬಕ್ಕೆ ಇನ್ನೂ ವರೆಗೂ ಕರೆಯಲಿಕ್ಕೆ ಬಾರದ ತವರಿನವರಮೇಲೆ ಅವಳು ಕೋಪಿಸಿ ಕೊಂಡರೆ ಆಶ್ಚರ್ಯವೇನಿಲ್ಲ.

"ಅಣ್ಣತಮ್ಮರ ಒಳಗ ನಮ್ಮ
ಸಣ್ಣ ತಮ್ಮನ ಹೇಣತಿ
ಪಣತಿ–ಮಾರಿಯಕ್ಕಿ ಆಕಿ ಖೊಟ್ಟಿ
ನೀದರ ಸ್ವಾಳಗಟ್ಟಿ"

ಎಂದು ಕೋಪಿಸಿಕೊಳ್ಳುವಾಗಲೆ ಅಣ್ಣಬರುವ ಸುದ್ದಿ ಬರುತ್ತದೆ. ಆಗ ಅವಳ ಸಂತೋಷಕ್ಕೆ ಎಣೆ ಇಲ್ಲ :

"ಗೊಂಡ್ಯಾದ ಹಣೆ ಪಟ್ಟಿನ
ಹಂಡ ಹೋರಿ ನನಗಾಗಿ
ಕೊಂಡಾರ ನಮ್ಮವರ ತರತಾರೊ
ಇಂದಬರತಾರೊ "

ಎಂದು ನಲಿದಾಡುತ್ತ ಕೆಲಸ ಮಾಡುತ್ತಾಳೆ.

ಇನ್ನೊಂದು ಪ್ರಸಂಗದಲ್ಲಿ ಬಸುರಿಯಾದ ತಂಗಿ ತವರಮನೆಯಲ್ಲಿ ಗಂಡು ಮಗುವನ್ನು ಹಡೆದುಕೊಂಡು ಗಂಡನ ಮನೆಗೆ ಹೊರಡಲು ಸಿದ್ಧಳಾದಾಗ, ಅಣ್ಣ ತಮ್ಮರನ್ನು ಕಾಡಿ ಬೇಡಿ ಎಮ್ಮೆಯನ್ನು ಪಡೆದುಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಬರುವ ಸಂಭಾಷಣೆಯನ್ನು ಗಮನಿಸಿದರೆ ಅಣ್ಣತಂಗಿಯರ ಒಲವಿನ ಒರತೆಯನ್ನು ಕಾಣಬಹುದು.

ಹಟ್ಟೀಲಾರೆಮ್ಮೆ ಕೊಟ್ಟಗೇಲಿ ಮೂರೆಮ್ಮೆ
ಕೊಟ್ಟರೋ ಕೊಡಿರೋನನಗೊಂದ | ಅಣ್ಣಯ್ಯ
ಹುಟ್ಟಲಿಲ್ಲವೆ ನಾನು ಮನೆಯಾಗೆ

ಎಂದು ಅಣ್ಣನ ಕರುಳಿಗೆ ಬಿಸಿ ತಗಲುವಂತೆ ತಂಗಿಕೇಳುತ್ತಾಳೆ. ಆಗ ಅಣ್ಣನ ಉತ್ತರವೇನು ?

ಹುಟ್ಟಿದರೆ ತಂಗೆಮ್ಮ ಉಟ್ಟುಕೊಳೆ ಪಟ್ಟೇಯೂ
ಕಟ್ಕೊಳೆ ಕೊರಳ ಪದಕಾವ | ಕಿರಿ ತಂಗಿ
ಬಂಗಾರ ಬೇಡು ಬಳೆ ಬೇಡು

ಆದರೆ ತಂಗಿಗೆ ಬಂಗಾರ ಬೇಕಿಲ್ಲ; ಬಳೆ ಬೇಕಿಲ್ಲ. ತನ್ನ ಮಗಸಿಗೆ ಹೈನು ಬೇಕಾಗಿದೆ. ಅದಕ್ಕಾಗಿ :

ಬಂಗಾರ ಬೇಡ ಬಳೆ ಬೇಡ ಅಣ್ಣಯ್ಯ
ಕೊಡಿರೋ ನನಗೊಂದು ಎಮ್ಮೆಯ | ಅಣ್ಣಯ್ಯ
ಹೆಸರ್ಹೋಳಿ ಮೊಸರ ಕಡೆದೇನು

'ಖಂಡ್ಗ ಹಾಲಿನೆಮ್ಮೆ ಗುಂಗ್ರುಗೋಡಿನೆಮ್ಮೆ' ಬೇಕೆಂದು ಬೇಡಿ ಅಳುತ್ತಾಳೆ.

ಅಳುತಿದ್ದ ತಂಗಿಗೆ ನಗುತ—ಎಮ್ಮೆಯಕೊಟ್ಟ
ಮೇಲೊಂದು ಮಾತ ತಾನುಡಿದ | ತಂಗೆಮ್ಮ
ಮಡದಿಗೊಪ್ಪಿಸದೆ ಹೊಡೆದಿವ್ನಿ

ಮಡದಿಗೊಪ್ಪಿಸದೆ ಅಣ್ಣ ಎಮ್ಮೆಯನ್ನು ಹೊಡೆದರೂ ತಂಗಿಯಮನಸ್ಸು ಒಪ್ಪದು. ಅಣ್ಣನೊಬ್ಬನೆ ಒಪ್ಪಿಕೊಟ್ಟರೆ ಸಾಲದು ಅಣ್ಣನ ಹೆಂಡತಿಯೂ ಒಪ್ಪಿಕೊಡಬೇಕು ಅಂದರೆ ತಂಗಿಗೆ ಸಮಾಧಾನ.

ನೀವೊಪ್ಪಿ ನಿಮ್ಮ ಮಡಿದ್ಯೊಪ್ಪ ಕೊಟ್ಟರೆ
ಹೆಸರ ಹೇಳಿ ಮೊಸರ ಕಡೆದೇನು | ಅಣ್ಣಯ್ಯ
ನಿಮ್ ದೇವ್ರಿಗೊಂದೀಪ ಉರಿಸೇನು

ಜೀವನೂದ್ದಕ್ಕೂ ತವರಮನೆಯ ದೀಪವನ್ನು ಬೆಳಗುತ್ತಾಳೆ ತಂಗಿ. ಅಣ್ಣನಿಗೆ ಅನೇಕ ಸಲಹೆಗಳನ್ನು ಕೊಡುತ್ತಾಳೆ. ಅವಳ ಆ ನುಡಿ ಮುತ್ತಿನಲ್ಲಿ ಉದಾತ್ತ ಸಂಸ್ಕೃತಿಯ ತಿರುಳನ್ನು ಕಾಣುತ್ತೇವೆ.

ತೌರೂರ ದಾರೀಲಿ ತೆಗಿಸಣ್ಣ ಬಾವಿಯ
ಅಕ್ಕತಂಗೇರು ತಿರುಗಾಡೊ | ಹಾದೀಲಿ
ತೆಗಿಸಣ್ಣ ಕಲ್ಯಾಣದ ಕೊಳಗಳ

ಅಣ್ಣನಂತಹ ಒಂದು ಜೀವ ಎಷ್ಟೊಂದು ಕಣ್ಣುಗಳಿಗೆ ಹಬ್ಬವನ್ನುಂಟು ಮಾಡುವದಿಲ್ಲ :

ಅತ್ತಿಗೆಗೆ ಅರಸೇನ ತಾಯಿ ಕುಮಾರೇನ
ಮಕ್ಕಳಿಗೆ ಮಾವ ನನಗಣ್ಣ | ಬಂದರ
ನಿಚ್ಚ ದೀವಳಿಗೆ ಮನಿಯಾಗ

ನನ್ನಣ್ಣಬಂದರೆ 'ನಿಚ್ಚ ದೀವಳಿಗೆ ಮನಿಯಾಗ' ಎಂದು ತನ್ನ ವಾತ್ಸಲ್ಯದ ಆರತಿಯನ್ನು ಎತ್ತುತ್ತಾಳೆ. ಜೀವನದ ಅನೇಕ-ಸಂಧರ್ಭಗಳಲ್ಲಿ ನಾವು ಸಹೋದರ ಸಹೋದರಿಯರ ವಾತ್ಸಲ್ಯದಿ ಸರಸ ಸಲ್ಲಾಪವನ್ನು ಕಾಣುತ್ತೇವೆ. ಅಣ್ಣ ತಂಗಿ ಜಗಳಾಡಿದರೂ ಒಂದು ರಸಿಕತೆಯು ಮೂಡಿ ಬರುತ್ತದೆ. ಕಸದಲ್ಲಿ ರಸವನ್ನು ಕಾಣುವಂತಹ ಸೊಗಸು ತನವನ್ನು ನಾವು ಸಹೋದರ ಸಹೋದರಿಯರ ಜೀವನದಲ್ಲಿ ಕಾಣುತ್ತೇವೆ.

ಒಲವೆಂಬ ಹೊತ್ತಿಗೆಯ ಓದ ಬಯಸುವ ನೀನು,
ಬೆಲೆ ಎಷ್ಟು ಎಂದು ಕೇಳುವೆಯ ಹುಚ್ಚ !
ಹಗಲಿರುಳು ತಿರಿದರೂ ಹಲವು ಜನ್ಮ ಕಳೆದರೂ,
ನೀ ತೆತ್ತಲಾರೆ ಬರಿ ಅಂಚೆ ವೆಚ್ಚ !!

—ದ. ರಾ. ಬೇಂದ್ರೆ.

# ಅನುಭವ-ಆನಂದ-ಅಭಿವ್ಯಕ್ತಿ

ಶ್ರೀ ಮಹಾಂತ ಸ್ವಾಮಿಗಳವರು ಇಲಕಲ್ಲ-ಚಿತ್ತರಗಿ.

ಶರಣರ ವಚನಗಳು ಇಷ್ಟಲಿಂಗ ಪೂಜೆಯೊಂದಿಗೆ ಅವರು ನಡೆಸಿದ ಭಕ್ತಿ ಪ್ರೇಮದ ಅವಿಷ್ಕಾರಗಳು. ಅವರ ಅಭಿವ್ಯಕ್ತಿಯಲ್ಲಿ ಲಿಂಗ ಪಾರಮ್ಯ ಅಪರಂಪಾರವಾಗಿ ಅಭಿವ್ಯಕ್ತವಾಗಿದೆ. ಶ್ರೀಗುರು ಹಸ್ತ ಮಸ್ತಕ ಸಂಯೋಗದಿಂದ ನಮ್ಮ ಚಿತ್ಕಳೆಯನ್ನು ಕರಸ್ಥಲದಲ್ಲಿ ಪ್ರತಿಷ್ಠಾಪಿಸುತ್ತಾನೆ. ಆ ವೃತ್ತಾಂತವನ್ನು ಗಂಡ-ಹೆಂಡಿರ ಸಂಬಂಧದಲ್ಲಿ ಷಣ್ಮುಖ ಸ್ವಾಮಿಯು ಅತಿ ಮಧುರವಾಗಿ ಹೀಗೆ ಹೇಳುತ್ತಾನೆ.

ಇದು ನೋಡಿರೇ, ನೋಡಿರೇ ಒಂದು ವಿಚಿತ್ರವ!<br>
ಶಿಷ್ಯನೆಂಬ ಹೆಂಡತಿಯು, ಶ್ರೀಗುರುವೆಂಬ ಗಂಡನು<br>
ಹಸ್ತ ಮಸ್ತಕ ಸಂಯೋಗವೆಂಬ ಕೂಟವು ಕೂಡಲು<br>
ಷಡಕ್ಷರ ಮಂತ್ರವೆಂಬ ವೀರ್ಯವು ಚಲನೆಯಾಗಿ<br>
ಆ ಶಿಷ್ಯನೆಂಬ ಹೆಂಡತಿಯ, ಕರ್ಣವೆಂಬ ಗರ್ಭಪ್ರವೇಶವಾಗಲು<br>
ಮನ ಬಸುರಾಗಿ ಕಂಗಳೆಂಬ ಯೋನಿಯಲ್ಲಿ<br>
ಲಿಂಗವೆಂಬ ಮಗನ ಹಡೆದು, ಅಂಗೈಯೆಂಬ<br>
ತೊಟ್ಟಿಲಲ್ಲಿಕ್ಕಿ ಮಂಗಳ ಸೂತ್ರವೆಂಬ ಜೋಗುಳಹಾಡಿ<br>
ಅಖಂಡೇಶ್ವರನೆಂಬ ಹೆಸರಿಟ್ಟರು ನೋಡಾ!<br>
ಇದು ಕಾರಣ ನೀವೀಗ ಮಗನಾಗಿರಿ,<br>
ನಾ ನಿಮಗೆ ತಾಯಿಯಾದೆನಯ್ಯಾ ಅಖಂಡೇಶ್ವರ!

ಇಲ್ಲಿ ಗುರುಶಿಷ್ಯನ ಸಂಬಂಧವನ್ನು ಲಿಂಗದೀಕ್ಷೆಯನ್ನು ಸತಿ-ಪತಿ ಕೂಟದ ಮಾಲಾ ರೂಪಕದಲ್ಲಿ ಹೆಣೆಯಲಾಗಿದೆ. ಇದೊಂದು ಆಧುನಿಕ ನವ್ಯ ಕಾವ್ಯದ ಸ್ವರೂಪವನ್ನು ಹೊತ್ತ ಅನುಭಾವದ ಛಾತ್ತಿ.

ಇಷ್ಟಲಿಂಗವು ಮೂರ್ತಿಯಲ್ಲ. ಪಾಷಾಣವಲ್ಲ. ಅದೊಂದು ಕುರುಹು. ಆ ಕುರುಹಿನ ಮೂಲಕ ಅರುಹನ್ನು ಆರಾಧಿಸುತ್ತೇವೆ. ಮರಹನ್ನು ಕಳೆಯುತ್ತೇವೆ, ಚಿರವನ್ನು ಪಡೆಯುತ್ತೇವೆ. ಇಷ್ಟಲಿಂಗವು ವಿಶ್ವದ ಸಾಂಕೇತಿಕ ಸ್ವರೂಪ. ಅದು ಅನಾದಿ, ಅನಂತ, ಅತೀತ; ಅಪ್ರಮೇಯ, ಅದರ ವೈಭವವನ್ನು ಬಸವಣ್ಣನವರ ಸ್ವಾನುಭವದಲ್ಲಿಯೇ ಕಾಣಬೇಕು.

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ
ಪಾತಾಳದಿಂದತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ ।
ಅಗಮ್ಯ, ಅಗೋಚರ, ಅಪ್ರತಿಮ ಲಿಂಗವೆ,
ಕೂಡಲ ಸಂಗಮ ದೇವಯ್ಯಾ,
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ ।

ಶರಣರು ಲಿಂಗಪೂಜೆಯಲ್ಲಿ 'ಶರಣ ಸತಿ, ಲಿಂಗ ಪತಿ' ಭಾವವನ್ನು ಕಾಣಲು ಹವಣಿಸಿದರು, ಇದಕ್ಕೆ ಸತಿ–ಪತಿ ಭಾವವೆಂದು ಹೆಸರು. ಆತ್ಮನ ಯಾತ್ರೆಯಲ್ಲಿ ಇದೊಂದು ಸುಂದರ ರೂಢಿ. ಉರಿಲಿಂಗದೇವರ ಈ ವಚನದಲ್ಲಿ ಅಂತರಂಗದ ಪ್ರಿಯನಿಗಾಗಿ, ಭಕ್ತಿಪ್ರೇಯಸಿಯ ತುಂಬಿದ ಭಾವ ಕರೆಯುತ್ತಿದೆ—

ನಲ್ಲನ ರೂಪೆನ್ನ ನೇತ್ರವ ತುಂಬಿತ್ತು,
ನಲ್ಲನ ನುಡಿ ಎನ್ನ ಶ್ರೋತ್ರವ ತುಂಬಿತ್ತು,
ನಲ್ಲನ ಸುಗಂಧವೆನ್ನ ಘ್ರಾಣವ ತುಂಬಿತ್ತು,
ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು,
ನಲ್ಲನ ಲಿಂಗವೆನ್ನ ಸರ್ವಾಂಗವ ತುಂಬಿತ್ತು,
ನಲ್ಲನ ಪ್ರೇಮವೆನ್ನ ಮನವ ತುಂಬಿತ್ತು,
ನಲ್ಲನ ಅಂತರಂಗ ಬಹಿರಂಗದಲ್ಲಿ ಕೂಡಿ ಸುಖಿಯಾದೆ;
ಉರಿಲಿಂಗದೇವಾ !

ಅಂಗ ಲಿಂಗಗಳ ಕೂಟ ಗಂಡ–ಹೆಂಡಿರ ಕೂಟವಲ್ಲ; ಒಂದಾಗಿ ಎರಡಾಗದ ಸುಂದರ ಸಾಮರಸ್ಯ ಕೂಡಿದ ಮೇಲೆ ಅಗಲಿಕೆ ಇಲ್ಲ ಆ ಭಾವದ ವಚನಗಳು ಇಲ್ಲಿವೆ.

"ನೋಟವೆ ಕೂಟ, ಕೂಟವೇ ಪ್ರಾಣ;
ಪ್ರಾಣವೇ ಏಕ; ಏಕವೇ ಸಮರಸ;
ಸಮರಸವೇ ಲಿಂಗ; ಲಿಂಗವೇ ಪರಿಪೂರ್ಣ;
ಪರಿಪೂರ್ಣವೇ ಪರಬ್ರಹ್ಮ; ಪರಬ್ರಹ್ಮವೇ ತಾನು.
ಇಂತೀ ನಿಜವ ಗುಹೇಶ್ವರ ಬಲ್ಲನಲ್ಲದೆ,
ಕಣ್ಣುಗೆಟ್ಟ ಅಣ್ಣಗಳೆತ್ತ ಬಲ್ಲರು ನೋಡೈ !"

"ನೋಡೆನೆಂದರೆ ನೋಟ ಸಮರಸವಾಗಿತ್ತು,
ಕೂಡಿಹನೆಂದರೆ ಕೂಟ ನಿಬ್ಬೆರಗಾಯಿತ್ತು,
ನೋಟ-ಕೂಟಗಳೆಂಬ ಉಭಯವಳಿದು,
ನಿಜದಲ್ಲಿ ನಿರ್ವಯಲಾಯಿತ್ತಯ್ಯ
ನೋಡಲಿಲ್ಲ, ನುಡಿಯಲಿಲ್ಲ, ಕೂಡಲಿಲ್ಲ
ಅಪ್ರತಿಮ ತಾನು ತಾನಾದ ಪರಮಾನಂದ
ಸುಖದೊಳಗೆ ಓಲಾಡುತಿರ್ದೆನಯ್ಯಾ,
ಮಹಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !"
"ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ ?
ಚನ್ನಮಲ್ಲಿಕಾರ್ಜುನಾ ನಿಮ್ಮಲ್ಲಿ ನೀವಾಗಿ
ನಿಮ್ಮಿಂದ ನಿಮ್ಮ ಮರೆದೆನಯ್ಯಾ"

ಲಿಂಗಪೂಜೆಯ ತುಟ್ಟ-ತುದಿಯ ಬೆಟ್ಟದ ಮೇಲೆ ಕರೆದೊಯ್ಯಬಲ್ಲ ಮಹಾಶಕ್ತಿ ಪ್ರಭುದೇವ ಆತನ ಆರ್ಷವಾಣಿಯಲ್ಲಿ ಶಿವಯೋಗ ಸಿದ್ಧಿಯ ಪರಮೋಚ್ಚ ಅನುಭವದ ಪ್ರಸನ್ನ ಚಿತ್ರ ಎದ್ದು ಕಾಣುತ್ತದೆ. ಶ್ರೀಗಿರಿಯ ಪರಂಜ್ಯೋತಿ ಶಿಖರಕ್ಕೆ ಅಕ್ಕ-ಮಹಾದೇವಿಯನ್ನು ಕಳಿಸಿಕೊಡುತ್ತಿರುವ ಅಲ್ಲಮಪ್ರಭುವಿನ ಈ ಮಹಾಕಾವ್ಯವನ್ನು ಅನುಭವಿಸಿರಿ---

"ನೀ ನಾನೆಂಬುಭಯ ಸಂಗವಳಿದು ತಾನು-ತಾನಾದ
ತ್ರಿಕೂಟವೆಂಬ ಮಹಾಗಿರಿಯ ತುಟ್ಟ-ತುದಿಯ
ಮೆಟ್ಟಿ ನೋಡಲು
ಬಟ್ಟಬಯಲು ಕಾಣಬಹುದು ನೋಡಾ |
ಆ ಬಯಲು ಬೆರೆಸುವರೆ,
ತ್ರಿಕೂಟ ಗಿರಿಯೊಳಗೊಂದು ಕಾಣಬಾರದ
ಕದಳಿಯುಂಟು ನೋಡಾ |
ಆ ಕದಳಿಯ ತಳದಲ್ಲಿ ಒಳಹೊಕ್ಕು ನೋಡಲು
ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ |
ನಡೆಯಲ್ಲಿಗೆ ತಾಯೆ |
ಗುಹೇಶ್ವರ ಲಿಂಗದಲ್ಲಿ ಪರಮ ಪದವಿ ನಿನಗೆ
ಸ್ವಯವಿಹುದು ನೋಡಾ |"

ಈ ಲಿಂಗದ ಸೃಷ್ಟಿ ರಹಸ್ಯವೇನು? ಆದಿ ಅಂತ್ಯಗಳೇನು ಗೊತ್ತು ಗುರಿಗಳೇನು? ಶರಣರು ತಮ್ಮ ಸೃಷ್ಟಿ ಶಾಸ್ತ್ರದ ವಚನಗಳಲ್ಲಿ ಲಿಂಗದ ಇರವನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ—

ತಾಯಿ–ತಂದೆ ಇಲ್ಲದ ಕಂದಾ | ನಿನಗೆ ನೀನೆ ಹುಟ್ಟಿ
ಬೆಳೆದೆಯಲ್ಲಾ |
ನಿನ್ನ ಪರಿಣಾಮವೇ ನಿನಗೆ ತೃಪ್ತಿಯಾಗಿ ಇದ್ದೆಯಲ್ಲ
ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲ
ನಿನ್ನ ಚಾರಿತ್ರ್ಯ ನಿನಗೆ ಸಹಜ ಗುಹೇಶ್ವರಾ

—ಪ್ರಭುದೇವ.

ಹುಟ್ಟು ಮೆಟ್ಟೆಂಬುದು ನಿಮ್ಮಲ್ಲಿಲ್ಲ,
ನಿಮ್ಮಿಂದ ನೀವೆ ಸ್ವಯಂಭುವಯ್ಯ;
ಇಂತಾದಿರಯ್ಯಾ, ಇಂತಾದಿರಯ್ಯ, ನೀವಿಂತಾದಿರಯ್ಯ;
ನಿಮ್ಮ ಮಹಾತ್ಮೆಯ ನೀವೆ ಬಲ್ಲಿರಿ;
ನಿಜಗುರು ಕಪಿಲಸಿದ್ಧಮಲ್ಲಿನಾಥಯ್ಯ

—ಸಿದ್ಧರಾಮ

ನಿರಾಕಾರ ಚೈತನ್ಯವು ಈ ರೀತಿ ಸಾಕಾರ ಚೈತನ್ಯತೆಯಲ್ಲಿ ತುಂಬಿ ಬಂತು, ಸತ್ಯದಿಂದ ಸತ್ಯ ಪ್ರಕಟವಾಯಿತು. ಆ ಸತ್ಯದಲ್ಲಿ 'ಸುಂದರ' ತತ್ವ ಅರಳಿತು. ಆಗ ಇಷ್ಟಲಿಂಗ ಅಂಗದ ಒಡೆಯನಾದ, ಶರಣ ಸತಿಯ ಗಂಡನಾದ, ದೀಕ್ಷಾವಿಧಿ, ಲಗ್ನವಿಧಿಯೇ ಆಯಿತು. ಪತಿಗಾಗಿ ಸತಿಯ ಹಂಬಲ ಹಾರೈಕೆಗಳು ಭಕ್ತನಲ್ಲಿ ತೋರಿದವು; ವಿರಹಾಗ್ನಿ ಮೇಲೇರಿತು. ಆ ಸುಂದರ ಸಾಹಿತ್ಯಿಕ ನಿರ್ಮಿತಿಗಳನ್ನು ಅವಗಾಹಿಸಬಹುದು.

ಜಲದ ಮಂಟಪದ ಮೇಲೆ ಉರಿಯ ಚಪ್ಪರವಿಕ್ಕಿ
ಆಲಿಕಲ್ಲ ಹಸೆಯ ಹಾಸಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು
ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ
ಮದುವೆ ಮಾಡಿದರು
ಗುರುವೇ ತೆತ್ತಿಗನಾದ; ಲಿಂಗವೇ ಮದುವಣಿಗನಾದ
ಆನು ಮದುವಳಿಗೆಯಾದೆನು,
ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು;

ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ
ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡ ನನಗೆ

—ಅಕ್ಕಮಹಾದೇವಿ.

ಅಕ್ಕಮಹಾದೇವಿಯ 'ಲಿಂಗಪತಿಭಾವ'ದ ಈ ವಚನಗಳು ಜಗತ್ತಿಗೆ ಅನುಭಾವ ಸಾಹಿತ್ಯದ ಇತಿಹಾಸದಲ್ಲಿಯೇ ಚಿರಸ್ಥಾಯಿಯಾಗಿ ನಿಲ್ಲಬಲ್ಲವು. ಇಲ್ಲಿ ಕ್ರಾಂತಿಯ ಧ್ವನಿ ಇದೆ, ಕೃತಿಯ ಕೈವಲ್ಯವಿದೆ, ವಿರತಿಯ ಅಪ್ಸರ ವೀಣೆ ಇದೆ. ಹೆಣ್ತನ ತಾಯ್ತನ, ಶಿವತನ, ಶಿಶುತನಗಳ ವಿದ್ಯುದಾಲಿಂಗನವನ್ನು ಅಕ್ಕನ ವಚನಗಳಲ್ಲಿ ನಾವು ಕಾಣಬಹುದು. ದೇವರನ್ನು ತಂದೆ (Father)ಯೆಂದೂ ತಾಯಿ (Mother) ಯೆಂಧೂ ಒಡೆಯ (Lord) ನೆಂದು ಗಂಡ (Beloved) ಯೆಂದೂ ಪ್ರಿಯತಮ (Lover) ನೆಂದು ಗಂಡ (Husband) ನೆಂದು ಆರಾಧಿಸುವ ಧರ್ಮಗಳುಂಟು. ಇಲ್ಲಿ 'ಲಿಂಗ'ದೊಂದಿಗೆ ಒಡನಾಟ 'ಶುದ್ಧ ದಾಂಪತ್ಯ'ದ ಸೃಷ್ಟಿಯನ್ನೇ ಒಳಗೊಂಡಿದೆ. ದೇವರನ್ನು ಪ್ರಿಯತಮನೆಂದು ಕಾಣುವಲ್ಲಿ ಕಾಮದ ಅಭಿವ್ಯಕ್ತಿಗೆ ಅವಕಾಶವಿದೆ; ಪತಿಯರಿದು ಪರಿಗಣಿಸುವಲ್ಲಿ ಪ್ರೇಮದ ಸಿದ್ಧಿ ಇದೆ ಹೀಗಾಗಿ ಶರಣನಿಗೆ ತನ್ನದೇ ತಂದೆ, ತಾಯಿ, ತವರು, ಸಹೋದರರು, ತಾರುಣ್ಯ, ವಿವಾಹ, ವರ, ಗಂಡನ ಮನೆ, ಪತಿಗ್ರಹ ಯಾತ್ರೆ ಈ ವೈವಾಹಿಕ ದೈನಿಕ ಸಂಬಂಧಗಳುಂಟು. ಆದರ ಅದ್ಭುತ ದೃಶ್ಯವನ್ನು ಅಪೂರ್ವ ಸಾಮರಸ್ಯವನ್ನು ಮಹಾದೇವಿಯಕ್ಕನ ವಚನದಲ್ಲಿಯೇ ಕಂಡರಿಯಬೇಕು.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ
ಕರುಣದೊಳಗೆ
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ,
ಪರಮಾರ್ಥವೆಂಬ ಸಕ್ಕರೆಯನ್ನಿಕ್ಕಿದಿರಿ
ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದಿರಿ
ಎನ್ನ ವಿವಾಹವ ಮಾಡಿದಿರಿ ಸಯವಪ್ಪ ಗಂಡಗೆ ಕೊಟ್ಟರಿ
ಕೊಟ್ಟ ಮನೆಗೆ ಕಳುಹಲೆಂದು
ಅಸಂಖ್ಯಾತರೆಲ್ಲರೂ ನೆರೆದು ಬಂದಿರಿ
ಬಸವಣ್ಣ ಮೆಚ್ಚಲು ಒಗೆತನವ ಮಾಡುವ,
ಚನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ಮಂಡೆಗೆ ಹೂವ ತಹೆನಲ್ಲದೆ, ಹುಲ್ಲ ತಾರೆನು;
ಅವಧರಿಸಿ ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವದು
ಶರಣಾರ್ಥಿ.

ಆದರೆ ಪ್ರಭುದೇವರ ವಚನಗಳಲ್ಲಿ 'ಲಿಂಗದ' 'ವಿಶ್ವರೂಪ ದರ್ಶನವೇ' ಹೆಚ್ಚು. ಇಷ್ಟಲಿಂಗಕ್ಕೂ, ವಿಶ್ವಲಿಂಗಕ್ಕೂ ಸದಾ ಪ್ರಭುವಿನ ವಚನದಲ್ಲಿ ತಾಳು ಮೇಳು.

ಆತನ ಅರ್ಥದಲ್ಲಿ ಗಗನವೇ ಲಿಂಗದ ಗುಂಡಿಗೆ, ಸೂರ್ಯಚಂದ್ರರೇ ಲಿಂಗಕ್ಕೇರಿಸಲು ಹೂವುಗಳು, ಬ್ರಹ್ಮನೇ ಧೂಪ, ವಿಷ್ಣುವೇ ದೀಪ,

"ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ,
ಚಂದ್ರ ಸೂರ್ಯರಿಬ್ಬರೂ ಪುಷ್ಪ
ಬ್ರಹ್ಮ ಧೂಪ, ವಿಷ್ಣು ದೀಪ,
ರುದ್ರನೋಗರ ಸುಯಿಧಾನ ನೋಡಾ ।
ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ ।

ಬಿಸಿಲೆಂಬ ಗುರುವಿಗೆ ನೆಳಲೆಂಬ ಶಿಷ್ಯ,
ನಿರಾಳ ಲಿಂಗಕ್ಕೆ ಬಯಲೆ ಸೆಜ್ಜೆ,
ವಾಯುವೇ ಶಿವದಾರ, ಬೆಳಗೇ ಸಿಂಹಾಸನ
ಅತ್ತಲಿತ್ತ ಚಿತ್ತವ ಹರಿಯಲೀಯದೆ
ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ !"



## ಏನುಂಟೆಂದು ಕರಸ್ಥಲವನಿಂಬುಗೊಂಡೆ

ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು
ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು
ಅರಿವು ಕಣ್ದೆರೆಯದವರಲ್ಲಿ ಆರತಿಯ ನೊಲ್ಲೆಯಯ್ಯ ನೀನು
ಭಾವ ಶುದ್ಧವಿಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು
ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ
ಹೇಳಾ ಚೆನ್ನಮಲ್ಲಿಕಾರ್ಜುನಯ್ಯ ?

## ಲಿಂಗವಿದ್ದ ಬಳಿಕ ಚಿಂತೆಯೇಕೆ ?

ಅಮೃತ ಸಾಗರದೊಳಗಿದ್ದು ಆಕಳ ಚಿಂತೆಯೇಕೆ ?
ಮೇರು ಮಂದಿರದೊಳಗಿದ್ದು ಜರಗ ತೊಳೆವ ಚಿಂತೆಯೇಕೆ ?
ಶ್ರೀ ಗುರುವಿನೊಳಗಿದ್ದು ತತ್ವ ವಿದ್ಯದ ಚಿಂತೆಯೇಕೆ ?
ಪ್ರಸಾದದೊಳಗಿದ್ದು ಮುಕ್ತಿಯ ಚಿಂತೆಯೇಕೆ ?
ಕರಸ್ಥಲದೊಳಗೆ ಲಿಂಗವಿದ್ದ ಬಳಿಕ ಮತ್ತಿನ್ನಾವ ಚಿಂತೆಯೇಕೆ ?
ಹೇಳಾ ಗುಹೇಶ್ವರಾ ?

# ಧರ್ಮದಿಂದಲೇ ಜಗತ್ತಿನಲ್ಲಿ ಶಾಂತಿಸ್ಥಾಪನೆ

— ಶ್ರೀ ಚಂದ್ರಶೇಖರ ದೇವರು ಹೊಸಮಠ, ಎಂ.ಎ.
ಹುಬ್ಬಳ್ಳಿ.

ಈಗ ಜಗತ್ತಿನಲ್ಲಿ ಎಲ್ಲಿನೋಡಿದರೂ ಅಶಾಂತಿಯ ಅಲ್ಲೋಲ ಕಲ್ಲೋಲ ನಡೆದಿದೆ. ಒಂದುಕಡೆ ಬಡ ರಾಷ್ಟ್ರಗಳಲ್ಲಿ ಒಂದು ವಿಧವಾದ ಅಶಾಂತಿ ದಗ್ಗುದುಳಿ ಯುತ್ತಿದ್ದರೆ ಮತ್ತೊಂದು ಕಡೆ ಶ್ರೀಮಂತ ರಾಷ್ಟ್ರಗಳಲ್ಲಿ ಮಾನಸಿಕ ಅಸ್ವಾಸ್ಥ್ಯ ದಿಂದ ಅಶಾಂತಿ ತಲ್ಲಣವನ್ನುಂಟು ಮಾಡಿದೆ. ಯಾವುದೇ ದೇಶಕ್ಕೆ ಹೋಗಲಿ ಅಂತ ರಂಗದಲ್ಲಿಯಾಗಲಿ ಬಹಿರಂಗದಲ್ಲಿಯಾಗಲಿ ಅಶಾಂತಿ ತುಂಬಿತುಳುಕುತ್ತದೆ. ಪ್ರತಿ ಯೊಬ್ಬ ವ್ಯಕ್ತಿಯು ಧನಿಕನಾಗಿರಲಿ ನಿರ್ಧನಿಕನಾಗಿರಲಿ ಶಾಂತಿರಹಿತವಾಗಿ ಹಾಯ್ ಹಾಯ್ ಎಂದು ಬಿಸಿಯುಸಿರು ಬಿಡುತ್ತಲಿದ್ದಾನೆ. ಇಂಥ ಪರಿಸ್ಥಿತಿಯಲ್ಲಿ ಶಾಂತಿಸ್ಥಾಪನೆ ಆಗುವ ಬಗೆಯೆಂತು ?

ಈಗ ಜಗತ್ತಿನಲ್ಲಿ ನಾನಾ ಧರ್ಮಗಳಿಲ್ಲವೆ ? ಆ ಧರ್ಮಗಳನ್ನು ಅನುಸರಿಸುವ ಅಬ್ಜಗಟ್ಲೆ ಜನರಿಲ್ಲವೆ? ಹೀಗಿದ್ದರೂ ಶಾಂತಿದೊರೆಯಲಿಲ್ಲವಲ್ಲ! ಧರ್ಮಗಳು ಶಾಂತಿ ಯನ್ನುಂಟು ಮಾಡುವಬದಲು ಅಶಾಂತಿಯನ್ನೇ ಹೆಚ್ಚಿಸಿದವು ಎಂದು ಅನೇಕರು ತಿಳಿದರು. ಧರ್ಮದ ಹೆಸರಿನಲ್ಲಿ ಅನೇಕ ಧರ್ಮ ಯುದ್ಧಗಳಾದವು. ಒಂದೇ ಧರ್ಮ ವೆನಿಸಿದ ಕ್ರಿಸ್ತಧರ್ಮದಲ್ಲಿ ರೋಮನ್ ಕೆಥೊಲಿಕ್ ಮತ್ತು ಪ್ರೊಟೆಸ್ಟಂಟ್ ಭೇದಗಳಾಗಿ ಆಯಾ ಧರ್ಮ ಪ್ರಚೋದಕರನ್ನು ಜೀವಂತ ಸುಟ್ಟ ಉದಾಹರಣೆ ಗಳೂ ಉಂಟು. ಒಂದೇ ಧರ್ಮದ ಬ್ರಿಟಿಶ್ ಮತ್ತು ಜರ್ಮನರಲ್ಲಿ ಯುದ್ಧವಾಗಿ ಲಕ್ಷಗಟ್ಟಲೆ ಜನರು ಹತರಾದರು. ಅಂದಮೇಲೆ ಧರ್ಮವೆಂಬುದು ಶಾಂತಿ ಯನ್ನುಂಟುಮಾಡಲಾರದೆಂದು ಭಾವಿಸಿ ಅನೇಕರು ವಿಜ್ಞಾನದ ಬೆನ್ನು ಹತ್ತಿದರು.

ಪಾಶ್ಚಾತ್ಯ ಜಗತ್ತಿನಲ್ಲಿ ಧರ್ಮಕ್ಕಿಂತಲೂ ವಿಜ್ಞಾನಕ್ಕೆ ಹೆಚ್ಚು ಒಲವು ತೋರಿಬಂತು. ಅನೇಕ ವಿಜ್ಞಾನಿಗಳು ಹಗಲಿರುಳೂ ಶೋಧಗಳಲ್ಲಿ ಮಗ್ನರಾಗಿ ಮನುಷ್ಯನ ಸುಖಸೌಕರ್ಯಗಳನ್ನು ಹೆಚ್ಚಿಸಿದರು. ಸಂಚಾರಕ್ಕೆ ಸಾಗಾಟಕ್ಕೆ ಅನುಕೂಲವಾಗುವಂತೆ, ರೇಲ್ವೆ, ಹಡಗು ಮೋಟರ್, ವಿಮಾನ ಇತ್ಯಾದಿ ರಚಿತ ವಾದವು. ಅನೇಕ ಯಂತ್ರಗಳು ಮನುಷ್ಯನಿಗಾಗಿ ಭೂಮಿ ಉಳುವುದು ಬೆಳೆ ಕೊಯ್ಯುವದು, ಹಣ್ಣು ಹಂಪಲ ಬೆಳೆಸುವದು, ವಿದ್ಯುತ್ ಪ್ರಕಾಶ ಬೆಳೆಸುವದು

ಇವೇ ಮುಂತಾದ ಉಪಾಯಗಳಿಂದ ಆಹಾರೋತ್ಪಾದನೆ ಅಧಿಕಗೊಳಿಸಲಾಯಿತು. ಹಲವು ದೇಶಗಳಲ್ಲಿ ಆಕಳು ಸಾಕಿ ಅಧಿಕ ಹಾಲು ದೊರೆಯುವಂತೆ ಮಾಡಿದರೆ ಮತ್ತೆ ಕೆಲವು ದೇಶಗಳಲ್ಲಿ ಹುಲ್ಲುಗಾವಲು ಬೆಳೆಸಿ ಕರುಗಳನ್ನು ಸಾಕಿ ಮಾಂಸಹಾರ ಅತ್ಯಧಿಕವಾಗುವಂತೆ ಮಾಡಲಾಯಿತು. ಶರೀರ ರಚನೆಯ ಅಭ್ಯಾಸಮಾಡಿ ಶಸ್ತ್ರ ಚಿಕಿತ್ಸೆ ಮೂಲಕ ಅನೇಕ ರೋಗ ಗುಣ ಪಡಿಸಿದರೆ ನಾನಾ ಸುಂಕು ರೋಗಗಳಿಗೆ ಲಸಿಕೆ–ಗುಳಿಗೆ ತಯಾರಿಸಿ ಕಾಲರಾ ಪ್ಲೇಗ ಮುಂತಾದವುಗಳನ್ನು ಹಿಮ್ಮೆಟ್ಟಿಸ ಲಾಯಿತು. ಆದರೂ ದೇಶಗಳಲ್ಲಿ ಶಾಂತಿ ಸ್ಥಾಪನೆಯಾಗಲಿಲ್ಲ.

ಯಂತ್ರಗಳು ಬೆಳೆದಂತೆ ಜನತೆಯ ಬೇಡಿಕೆಗಳು ಬೆಳೆದವು. ಬೇಡಿಕೆ ಈಡೇ ರಿಸ ಹತ್ತಿದಂತೆ ಜನರನ್ನು ಸುಲಿಗೆ ಮಾಡಿ ತಮ್ಮ ಅಧಿಕಾರ ದರ್ಪ ನಡೆಸಬೇಕೆಂಬ ವಿಚಾರ ಹೆಚ್ಚಾಗ ಹತ್ತಿತು. ಇದರಿಂದ ಶ್ರೀಮಂತ ದೇಶಗಳು ಬಡದೇಶಗಳು ಎಂಬ ಭೇದಭಾವ ಉಂಟಾಗಿ ದೈಹಿಕ ಮಾನಸಿಕ ಘರ್ಷಣೆ ಉಲ್ಬಣಗಳು ಹೆಚ್ಚಿದವು. ಅಮೇರಿಕಾದಂಥ ಶ್ರೀಮಂತ ದೇಶವು ವ್ಹಿಯೆಟನಾಮದಂಥ ಚಿಕ್ಕ ದೇಶದಲ್ಲಿ ಕೈವಾಡ ನಡೆಸಿ ಉತ್ತರ ವ್ಹಿಯೆಟನಾಂ ಮತ್ತು ದಕ್ಷಿಣ ವ್ಹಿಯೆಟನಾಂಗಳು ೩೦ ವರ್ಷ ಅವ್ಯಾಹತ ಯುದ್ಧ ನಡೆಯಿಸುವಂತೆ ಪ್ರೇರೆಪಣೆ ಮಾಡಿತು. ಬ್ರಿಟಿಶರು ಭಾರತದಲ್ಲಿ ರಾಜ ಕೀಯ ಕುತಂತ್ರ ಮಾಡಿದ ಪರಿಣಾಮವಾಗಿ ದೇಶವು ಇಬ್ಭಾಗವಾಗಿ ಹೋಳಾ ಯಿತು. ಅಲ್ಲದೆ ಎಂದೂ ತಲೆಯೆತ್ತಿ ನಿಲ್ಲದಂತೆ ದಾರಿದ್ರ್ಯಕ್ಕೆ ಒಳಗಾಯಿತು.

ಹೀಗೆ ಜಗತ್ತಿನಲ್ಲಿ ಅಶಾಂತಿ ಎಂಬ ರೋಗ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳಹತ್ತಿತು. ಕೆಲವು ದೇಶಗಳಲ್ಲಿ ಬಡತನದ ಮರೆಯುವದಕ್ಕಾಗಿ ಪುರುಷ ಸ್ತ್ರಿ ಸಂಪರ್ಕ ಅಧಿಕವಾಗಿ ಶಿಶುಗಳ ಜನನ ಅಧಿಕ ವಾಯಿತು. ಕೆಲವು ದೇಶಗಳಲ್ಲಿ ಅಂದೇ ಲಗ್ನವಾಗಿ ವಿವಾಹ ವಿಚ್ಛೇದನ ಮಾಡಿಕೊಳ್ಳುತ್ತಿರುವದೂ ಕಂಡು ಬರುತ್ತದೆ. ಕೆಲವು ದೇಶಗಳಲ್ಲಿ ಬಡತನದ ಚಿಂತೆಯನ್ನು ಮರೆಯಲು ಭಟ್ಟಿಸರಾಯಿ ಕುಡಿದು ದೇಹ ಸ್ವಾಸ್ಥ್ಯ ಕಳೆದುಕೊಳ್ಳು ತ್ತಿದ್ದರೆ, ಇನ್ನೂ ಕೆಲವು ದೇಶಗಳಲ್ಲಿ ನರ್ತನೆ, ಸಿನೇಮಾ, ಕ್ಲಬ್ ಇತ್ಯಾದಿ ರಂಜನೆಗಳಲ್ಲಿ ತೊಡಗಿ ನಿದ್ದೆಗೇಡಾಗಿ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡು ಹುಚ್ಚರಾಸ್ಪತ್ರೆ ಸೇರುವದೂ ಹೆಚ್ಚಾಗ ಹತ್ತಿದೆ. ಒಟ್ಟಿನ ಮೇಲೆ ದೈಹಿಕ, ಮಾನಸಿಕ ವಿಕಾರಗಳು ಅಧಿಕವಾಗಿ ಸುಖಸೌಕರ್ಯ ಕಲ್ಪಿಸಿರುವ ವಿಜ್ಞಾನಿಗಳನ್ನೇ ಶಪಿಸುವಂತಾಗಿದೆ.

ಆದರೆ ಅಶಾಂತಿ ಹರಡಲಿಕ್ಕೆ ವಿಜ್ಞಾನವೇನೂ ಕಾರಣವಲ್ಲ. ಮನುಷ್ಯನು ನಿಜವಾದ ಧರ್ಮ ತತ್ವಗಳನ್ನು ಮರೆತು ವಿಕಾರವಶನಾದುದೇ ಅಶಾಂತಿಗೆ ಕಾರಣ. ತನ್ನಲ್ಲಿ ವಿಜ್ಞಾನ ಮೂಲಕ ಶಸ್ತ್ರ ಬಲ ಅಧಿಕವಾಗಲು ಒಂದು ದೇಶವು ಇನ್ನೊಂದು ದುರ್ಬಲ ದೇಶವನ್ನು ಪಾದಾಕ್ರಾಂತ ಮಾಡಿ ಅನ್ಯಾಯದಿಂದ ಆಳಬೇಕೆಂದು ವಿಕಾರ ಹುಟ್ಟಿಸಿಕೊಂಡಿತು. ಒಂದು ದೇಶದಲ್ಲಿ ಪೆಟ್ರೋಲು ನೀರಿನಷ್ಟು ಸುಲಭವಾಗಿ ಪ್ರಚಂಡ ಪ್ರಮಾಣದಲ್ಲಿ ದೊರೆಯುತ್ತಿದ್ದುದರಿಂದ ಅದನ್ನು ಬೇರೆ ದೇಶಗಳಿಗೆ

ತುಟ್ಟ ಬೆಲೆಗೆ ಮಾರಿ ಯುದ್ಧ ವಿಮಾನಕೊಂಡು ಬೇರೆ ಅಸಹಾಯ ರಾಷ್ಟ್ರಗಳ ಮೇಲೆ ದಾಳಿ ನಡೆರಬೇಕೆಂಬ ಹುಚ್ಚು ಹಚ್ಚಿಕೊಂಡಿತು. ಈ ರೀತಿ ಒಂದೊಂದು ದೇಶವು ಇಲ್ಲವೇ ಜನಾಂಗವು ಒಂದೊಂದು ದುರ್ವಿಕಾರಕ್ಕೆ ಒಳಗಾಗಿ ದೈವೀ ಗುಣ-ಗಳಾದ ಶಾಂತಿ, ಸೇವೆ, ಸಹಕಾರ ಪ್ರೇಮ ಸಮರ್ಪಣ ಭಾವಗಳನ್ನು ಮರೆತುದರಿಂದ ಅಶಾಂತಿ ಹರಡಲು ಕಾರಣವಾಯಿತು.

ಅಶಾಂತಿಯು ಒಂದಾನೊಂದು ಸುಂಕ ರೋಗವಿದ್ದಂತೆ. ಕಾಲರಾ ಬಂದ ರೋಗಿಯನ್ನು ಹತ್ತಿರವಿಟ್ಟುಕೊಂಡಲ್ಲಿ ನೀರೋಗಿಯಾದ ಇನ್ನೊಬ್ಬನಿಗೂ ಕಾಲರಾ ತಗಲುವದುಂಟು. ಕುಷ್ಟರೋಗ ಒಂದು ಕಡೆ ಕಾಣಿಸಿಕೊಂಡರೆ ಅದು ಸದ್ದಿಲ್ಲದೆ ಬೇರೆಯವರಿಗೂ ಅಂಟಿಕೊಂಡು ಬಿಡುತ್ತದೆ. ಹಾಗೆಯೇ ಬೀಜಾಣುಗಳು ಬೇರೆ ಬೇರೆ ಕಡೆ ಭರದಿಂದ ನಾನಾರೂಪದಲ್ಲಿ ಹರಡುವದುಂಟು. ಕೆಲವರಿಗೆ ದೈಹಿಕ ಅಶಾಂತಿಯುಂಟಾದರೆ ಕೆಲವರಿಗೆ ಮಾನಸಿಕ ಅಶಾಂತಿಯಾಗಬಹುದು. ಹೊಟ್ಟೆಗಿಲ್ಲದ್ದಕ್ಕೆ ಹಲವರು ನಾನಾ ರೋಗಗಳಿಗೆ ತುತ್ತಾದರೆ ಹೊಟ್ಟೆಗೆಟ್ಟು ಹೋಗುವಷ್ಟು ತಿಂದು ತೆಗುವವರು ಅನೇಕ ಅಜೀರ್ಣ ರೋಗಗಳಿಗೆ ಬಳಲುತ್ತಾರೆ. ಒಂದು ಕಡೆ ಸಾಕಷ್ಟು ಯಂತ್ರಗಳಿದ್ದು ದುಡಿಯುವವರಿಲ್ಲ ಎಂಬ ಹಾಹಾಕಾರ ಎದ್ದರೆ ಮತ್ತೊಂದು ಕಡೆ ಕೋಟಿಗಟ್ಲೆ ನಿರುದ್ಯೋಗಿಗಳಾಗಿದ್ದಾರೆ. ಕೆಲಸಕ್ಕೆ ಹಚ್ಚಿಕೊಳ್ಳುವವರಿಲ್ಲಎಂಬ ಕೂಗು ಆಕಾಶಕ್ಕೆ ಮುಟ್ಟುವಷ್ಟು ಭೀಕರವಾಗಿ ಕೇಳುತ್ತದೆ. ಈ ಎಲ್ಲ ಅಶಾಂತಿ ಉಚ್ಚಾಟನೆಗೆ ಒಂದೇ ಒಂದು ಔಷಧವೆಂದರೆ ಮಾನವೀಯ ಧರ್ಮಾಚರಣೆ.

ವಿಕಾರ ನಿಯಂತ್ರಣ ಮಾಡಬೇಕೆಂದರೆ ಅವು ಪ್ರಕಟವಾಗದಂತೆ ಮಾಡಬೇಕೆಂದೇನೂ ಅರ್ಥವಲ್ಲ. ಮನುಷ್ಯನು ಕಾಮ, ಕ್ರೋಧ, ಲೋಭ, ಮೋಹ ಇವು ವಿಕಾರಗಳೆಂದೇ ತಿಳಿಯುತ್ತಾನೆ. ಆದರೆ ಅವುಗಳನ್ನು ಬಿಡಬೇಕೆಂದರೆ ಸಾಧ್ಯವೂ ಅಲ್ಲ. ಅವುಗಳನ್ನು ಬಲವಂತವಾಗಿ ಜಗ್ಗಿ ಹಿಡಿದರೆ ಸಮಯನೋಡಿ ಅವು ಕೊಸರಿಕೊಂಡು ಅನೇಕ ಅಸಹನೀಯ ಉತ್ಪಾತಗಳನ್ನು ಉಂಟು ಮಾಡಬಲ್ಲವು. ಅದಕ್ಕಾಗಿ ಮಹಾಜ್ಞಾನಿ ಚನ್ನಬಸಣ್ಣನವರು ಹೇಳಿದ ಈ ವಚನ ಮನನ ಮಾಡುವಂಥದ್ದಿದೆ.

"ಶಿವಭಕ್ತಿಯುಳ್ಳವಂಗೆ ಕಾಮಬೇಡ, ಕ್ರೋಧಬೇಡ, ಲೋಭಬೇಡ, ಮೋಹಬೇಡ, ಮದಬೇಡ, ಮತ್ಸರಬೇಡ !

ಶಿವಭಕ್ತಿಯುಳ್ಳವಂಗೆ ಕಾಮಬೇಕು, ಕ್ರೋಧಬೇಕು, ಲೋಭಬೇಕು, ಮೋಹಬೇಕು, ಮದಬೇಕು, ಮತ್ಸರಬೇಕು,

ಬೇಕೆಂಬುದಕ್ಕೆ ಆವಗುಣ ಬೇಡೆಂಬುದಕ್ಕೆ ಆವಗುಣ ?

ಕಾಮಬೇಕು ಲಿಂಗದಲ್ಲಿ, ಕ್ರೋಧಬೇಕು ಕರಣಂಗಳಲ್ಲಿ, ಲೋಭಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು ಗುರುಲಿಂಗ ಜಂಗಮದಲ್ಲಿ, ಮದಬೇಕು

ಶಿವಾಚಾರ ಘನವೆಂಬಲ್ಲಿ, ಮತ್ಸರಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ, ಇಂತೀ ಸದ್ಗುಣವಿರಬೇಕು. ಇನ್ನು ಬೇಡೆಂಬುವದಕ್ಕಾವ ಗುಣ? ಕಾಮಬೇಡ ಪರ ಸ್ತ್ರೀಯರಲ್ಲಿ, ಕ್ರೋಧಬೇಡ ಗುರುವಿನಲ್ಲಿ, ಲೋಭಬೇಡ ತನುಮನದಲ್ಲಿ, ಮೋಹ ಬೇಡ ಸಂಸಾರದಲ್ಲಿ ಮದಬೇಡ ಶಿವಭಕ್ತರಲ್ಲಿ, ಮತ್ಸರಬೇಡ ಸಕಲ ಪ್ರಾಣಿಗಳಲ್ಲಿ, ಇಂತೀ ಷಡ್ವಿಧ ಗುಣವನರಿದು ಮರೆಯು ಬಲ್ಲಡೆ ಆತನೇ ಸದ್ಭಕ್ತಕಾಣಾ ಕೂಡಲ ಚನ್ನ ಸಂಗಮದೇವಾ!

ಅಂದರೆ ವಿಕಾರಗಳಿಗೆ ವಶವರ್ತಿಯಾಗುವದೂ ಅಶಾಂತಿಗೆ ಕಾರಣ. ವಿಕಾರ ಗಳನ್ನು ಕೊಲ್ಲ ಹೋಗುವದೂ ಅಶಾಂತಿಗೆ ಕಾರಣ. ಅವರವರ ಮಧ್ಯಮ ಮಾರ್ಗ ವೆಂದರೆ ವಿಕಾರಗಳನ್ನು ಉದಾತ್ತೀಕರಿಸುವದು. Fire is a good servant but a bad master. ಎಂದು ಹೇಳಲಾಗುತ್ತಿದೆಯಷ್ಟೆ. ವಿಕಾರಗಳ ಹಾಡೂ ಹೀಗೆಯೇ. ವಿಕಾರಗಳನ್ನು ನಾಶಮಾಡ ಹೋಗುವದಕ್ಕಿಂತ ಅವುಗಳನ್ನು ಧರ್ಮ ಸಂಪರ್ಕ ಕೊಟ್ಟು ಉದಾತ್ತೀಕರಿಸುವದೇ ಹಿತಕರ ಮಾರ್ಗವಾಗಿದೆ. ಈ ಧರ್ಮ ಸಂಪರ್ಕದಿಂದ ಉದ್ದಾತ್ತೀಕರಿಸುವದು ಹೇಗೆ ಎಂಬುದನ್ನಷ್ಟು ವಿಚಾರಿಸುವಾ. ಮಾನವನೆಂದರೆ ವಿಚಾರಶೀಲ ಪ್ರಾಣಿಯು "ಮತ್ವಾರರೋತಿತಿ ಮಾನವ." ಎಂದು ಯಾಸ್ಕ ಋಷಿಯು ಮಾನವನ ವ್ಯಾಖ್ಯೆ ಮಾಡಿದ್ದಾನೆ. ಉಳಿದ ಪ್ರಾಣಿ ಗಳಿಗೆ ಮಾನವನಷ್ಟು ವಿಚಾರ ಶಕ್ತಿ ಇರುವದಿಲ್ಲ. ಅವನ ದೃಷ್ಟಿ ವಿಸ್ತಾರವಾಗಿ ರುವದರಿಂದ ತನಗೆ ಬರುವ ಆಪತ್ತುಗಳನ್ನು ಹೇಗೆ ನಿವಾರಿಸಬೇಕು ಎಂಬುದರ ಯೋಜನೆ ಮಾಡಿಕೊಳ್ಳುವ ಸಾಮರ್ಥ್ಯ ಅವನಿಗಿದೆ. ಈ ಸಾಮರ್ಥ್ಯದ ಅರಿವನ್ನು ನಾವು ವಿಕಾರ ವಶರಿಗೆ ಉಂಟು ಮಾಡಿ ಕೊಡಬೇಕು. ಇನ್ನೂ ಉಳಿದ ಪ್ರಾಣಿ ಗಳ, ತಮ್ಮ ಹುಟ್ಟು ಸ್ವಭಾವವನ್ನು ಬಿಡುವದು ಕಠಿಣ. ಬೆಕ್ಕಿಗೆ ಎಷ್ಟು ನರ್ಸ ಟ್ರೇನಿಂಗ್ ಕೊಟ್ಟರು ಇಲಿ ಹಿಡಿಯುವದನ್ನು ಬಿಡಲಾರದು. ಮೊಲಕ್ಕೆ ಎಷ್ಟು ತಿಳುವಳಿಕೆ ಕೊಟ್ಟರು ಅಂಜಿ ಹೋಗುವದನ್ನು ಬಿಡಲಾರದು. ಅಂಥವು ಕೂಡ ಪರಿಶ್ರಮ ಪಟ್ಟಲ್ಲಿ ತಮ್ಮ ಸ್ವಭಾವ ಬದಲಿಸಿಕೊಳ್ಳಲು ಶಕ್ಯವಿರುವಾಗ ಮನುಷ್ಯ ನೇಕೆ ಬದಲಿಸುವದಿಲ್ಲ?

ಆದುದರಿಂದ ಪ್ರತಿಯೊಬ್ಬ ಮನುಷ್ಯನಿಗೆ ನೀನು ದೇವಾಂಶ. ನಿನ್ನಲ್ಲಿ ದೇವನಿರು ವಂತೆ ನಿನ್ನಂತೆ ಇರುವ ಇನ್ನೊಬ್ಬ ಮನುಷ್ಯನಲ್ಲಿಯೂ ಇದ್ದಾನೆ. ಆತನ ಬಣ್ಣ, ಭಾಷೆ, ವಿಚಾರ, ವಿಕಾರ ನಿನಗಿಂತ ಬೇರೆ ಇರಬಹುದು. ಆದರೆ ಉಭಯರೂ ಸಂಪರ್ಕ ಪಡೆದಲ್ಲಿ ಉಭಯರ ವಿಚಾರ, ಆಕಾಂಕ್ಷೆಗಳು ಒಂದೇ ಆಗಲು ಶಕ್ಯವಿದೆ. ಏಕೆಂದರೆ ಒಂದೇ ದೇವತ್ವವು ಉಭಯರಲ್ಲಿಯೂ ಪ್ರಾಣಿಮಾತ್ರರೆಲ್ಲರಲ್ಲಿಯೂ ನೆಲೆಸಿರುವದರಿಂದ ನಿಮ್ಮ ಅನಿಸಿಕೆಗಳೆಲ್ಲಿ ಒಂದೇ ಆಗಿವೆ. ನೀವು ಉಪಕಾರ ಮಾಡಿದ ಮನುಷ್ಯನು ತನ್ನ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುತ್ತಾನೆ. ಅವನು ತನ್ನ ಹೃದಯದ ವಿಕಾಸವನ್ನು ತನ್ನ ದೃಷ್ಟಿಯ ಮೂಲಕ ನಿಮ್ಮ ದೃಷ್ಟಿಗೆ ತಗಲಿಸಿ ನಿಮ್ಮ ಹೃದಯ ಅರಳುವಂತೆ ಮಾಡುತ್ತಾನೆ. ಹಸಿದ ಒಬ್ಬನಿಗೆ ಅನ್ನ ನೀಡಿದಲ್ಲಿ

ಅವನು ತನ್ನ ಕೃತಜ್ಞತೆ ವ್ಯಕ್ತಪಡಿಸುತ್ತಾನೆ, ಆ ಕೃತಜ್ಞತಾ ಭಾವವು ನಿಮ್ಮ ಭಾವವನ್ನು ಅರಳಿಸುವದರಿಂದ ನೀವು ಉಂಡಿರದಿದ್ದರು ಹೊಟ್ಟೆ ತುಂಬಿದಷ್ಟು ತೃಪ್ತಿಯಾಗುತ್ತದೆ. ಇದೇ ದೈವಿಭಾವ, ಇದೇ ದೈವೀ ಚಮತ್ಕಾರ. ಈ ಚಮತ್ಕಾರ ಸಾಧಿಸಿಕೊಂಡರೇ ನಗುನಗುತ ಅನ್ಯರಿಗಾಗಿ ಸರ್ವ ತ್ಯಾಗಕ್ಕೆ ಸಿದ್ಧರಾಗುತ್ತಾರೆ. ಈ ಚಮತ್ಕಾರವೇ ಮನಸ್ಸನ್ನು ವಿಕಸಿತಗೊಳಿಸಿ ಶಾಂತಿಯನ್ನುಂಟು ಮಾಡುತ್ತದೆ. ಇದೇ ಮಾನವನ ಲಕ್ಷಣ. ಆದುದರಿಂದ ಮನುಷ್ಯನನ್ನು ತಿದ್ದುವದೆಂದರೆ ಪ್ರತಿಯೊಬ್ಬ ಮನುಷ್ಯನ ಮನವನ್ನು ತಿದ್ದುವದು. ಆಗ ಮನವು ಕುಟಿಲ ಕುಯುಕ್ತಿ ಕಲ್ಪಿಸದೆ ಸರ್ವರೂ ಒಂದೆಂಬ ಸಾಮೂಹಿಕ ಸದ್ಭಾವನೆಗೆ ಒಳಗಾಗುತ್ತದೆ. ತಾಯಿ ತಂದೆಗಳು ತಮ್ಮ ಮಕ್ಕಳ ಹಿತಕ್ಕಾಗಿ ತಮ್ಮ ಹಿತದ ಪರಿವೆ ಇಟ್ಟುಕೊಳ್ಳದೆ ದುಡಿಯುವಂತೆ ಒಬ್ಬ ಮಾನವನು ಇನ್ನೊಬ್ಬನ ಹಿತಕ್ಕಾಗಿ, ಸುಖಕ್ಕಾಗಿ, ತೃಪ್ತಿಗಾಗಿ ದುಡಿಯುತ್ತಾನೆ.

ಮನುಷ್ಯನ ದೇಹದಲ್ಲಿ ವಾತ ಪಿತ್ಥ ಕಫ ಇವು ಮೂರು ಸರಾಗವಾಗಿ ವರ್ತಿಸಿದಲ್ಲಿ ಅವನು ನಿರೋಗಿಯಾಗಿರುತ್ತಾನೆ. ಅವು ವ್ಯತಾಸವಾದಲ್ಲಿ ನಾನಾ ಬೇನೆ ಕಂಟಕಗಳಿಗೆ ಒಳಗಾಗುತ್ತಾನೆ. ಮಾನವ ಸಮಾಜವೆಂಬುದೂ ಒಂದು ವಿರಾಟ್ ಶರೀರವಾಗಿದೆ ಕಾರ್ಯಶಕ್ತಿ, ಜ್ಞಾನ ಶಕ್ತಿ, ಭಾವ ಶಕ್ತಿಗಳು ಅದರಲ್ಲಿ ನೆಲೆಯೂರಿ ತಮ್ಮ ಅಲೆಗಳನ್ನು ಹೊರಹೊಮ್ಮಿಸುತ್ತವೆ. ಕೆಲವರಲ್ಲಿ ಕಾರ್ಯಶಕ್ತಿ' ಜ್ಞಾನಶಕ್ತಿ ಎರಡೇ ಇದ್ದು ಭಾವಶಕ್ತಿ ಕಡಿಮೆ ಇದ್ದರೆ ಅಂಥವರು ಪರ ಶೋಷಕರಾಗುತ್ತಾರೆ. ಹೆರವರು ತಮ್ಮಂತೆ ಮಾನವರು ಎಂಬ ಭಾವನೆ ಉಂಟಾಗದೆ ತಮ್ಮ ಬುದ್ಧಿವಂತಿಕೆಯಿಂದ ಅವರನ್ನು ಸುಲಿಗೆ ಮಾಡಬಹುದೆಂಬ ಕುತಂತ್ರ ಹೆಣೆಯುತ್ತಾರೆ. ಇನ್ನೂ ಕೆಲವರಲ್ಲಿ ಕಾರ್ಯಶಕ್ತಿ ಭಾವಶಕ್ತಿ ಎರಡೂ ಇದ್ದು ಜ್ಞಾನಶಕ್ತಿ ಇಲ್ಲದಿದ್ದರೆ ಬೇಕಾದಷ್ಟು ದುಡಿದರೂ ತಮ್ಮ ಬೇಡಿಕೆ ಪೂರೈಸಿಕೊಳ್ಳಲಾರದು. ದೇವರು ತಮ್ಮನ್ನು ಕಷ್ಟಪಡಿಸುವದಕ್ಕಾಗಿಯೇ ಹಾಗೆ ಮಾಡಿದ್ದಾನೆಂದು ತಿಳಿಯುತ್ತಾರೆ. ಅಂಥವರಿಗೆ ಸರಿಯಾದ ತಿಳುವಳಿಕೆ ನೀಡಬೇಕಾಗುತ್ತದೆ. ಇನ್ನೂ ಕೆಲವರಲ್ಲಿ ಕಾರ್ಯಶಕ್ತಿಯ ಕೊರತೆ ಇದ್ದರೆ ತಮ್ಮ ಜ್ಞಾನ ಬಲದಿಂದ ಅಂಥವರನ್ನು ಜ್ಞಾನಿಗಳು ದಮನಮಾಡಿ ಸವಾರಿಮಾಡಿಕೊಳ್ಳಬೇಕೆನ್ನುತ್ತಾರೆ. ಈ ರೀತಿ ಮಾನವರಲ್ಲಿ ಅಶಾಂತಿ ಬೆಳೆಯುತ್ತದೆ. ಧರ್ಮವು–ಮಾನವೀಯ–ಧರ್ಮವು ಈ ಮೂರು ಶಕ್ತಿಗಳು ಎಲ್ಲರಲ್ಲಿಯೂ ಸಮಾನವಾಗಿ ವ್ಯವಹರಿಸುವಂತೆ ಪ್ರೇರಣೆ ಮಾಡುತ್ತದೆ. ಶ್ರೀಮಂತರಿಗೆ ದಾನಿಗಳಾಗಲು, ಉಪಕಾರಿಗಳಾಗಲು ಬೋಧಿಸಿದರೆ ಬಡವರಿಗೆ ಕರ್ತವ್ಯ ಶೀಲರಾಗಲು ಧೈರ್ಯಶಾಲಿಗಳಾಗಿ ದುಡಿಯಲು ಕಲಿಸುತ್ತದೆ. ಸುಲಿಗೆಗಾರರಿಗೆ ಸರ್ವಾತ್ಮಭಾವ ತಂದು ಕೊಟ್ಟು ಸನ್ಮಾರ್ಗಕ್ಕೆ ಹಚ್ಚುತ್ತದೆ. ಇಂಥ ದೈವೀ ಪ್ರಜ್ಞೆ, ದೈವೀ ಆಚರಣೆ ಸರ್ವರಲ್ಲಿ ಬಂದಲ್ಲಿ ಕೊನೆಗೆ ಸಾಕಷ್ಟು ಸಂಖ್ಯೆಯ ಜನರಲ್ಲಿ ಬಂದಲ್ಲಿ ಕೂಡಾ ಸುಖ ಶಾಂತಿಗಳು ತಲೆದೋರುತ್ತವೆ.

ಈ ಕಾಲದಲ್ಲಿ Hot war ಮತ್ತು Cold war ಎಂಬ ಪದಗಳನ್ನು ಕೇಳುತ್ತೇವಷ್ಟೆ, ಎಷ್ಟೋ ದೇಶಗಳು ಪ್ರತ್ಯಕ್ಷ ಬಹಿರಂಗ ಯುದ್ಧದಲ್ಲಿ ತೊಡಗದಿದ್ದರೂ

ಗುಪ್ತವಾಗಿ ಆಂತರ್ಯ ಯುದ್ಧದ ಆಲೋಚನೆಯಲ್ಲಿಯೇ ಮಗ್ನವಾಗಿರುತ್ತವೆ. ಇಂಥವರು ಶಾಂತಿಯನ್ನುಂಟು ಮಾಡಲಾರರು. ಶಾಂತಿಯೆಂಬುದು ಆಂತರ್ಯದಲ್ಲಿ ಉಂಟಾಗಿ ಬಹಿರಂಗದಲ್ಲಿ ಕಾಣಿಸಿಕೊಳ್ಳಬೇಕು. ಆಗ ಮಾತ್ರ ಅದು ಶಾಶ್ವತವಾಗಿ ಉಳಿದೀತು. ಈ ಬಗ್ಗೆ ಥಾಯಲ್ಯಾಂಡದ ರಾಜಕುಮಾರಿ ಪೂನವಿಸ್ಮಾಯಿ ದಿ ಸ್ಕೂಲ ಅವರು "ರಿಲಿಜನ್ ಅಂಡ್ ಪೀಸ್" ಎಂಬ ಲೇಖನದಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ. ........"**Peace, harmony and well-being whether personal or of the world, have their sources from inside.** [ಶಾಂತಿ, ಸಮಾಧಾನ, ಕಲ್ಯಾಣಗಳು ಅವು ವೈಯಕ್ತಿಕವಾಗಿರಲಿ ಇಲ್ಲವೆ ಜಾಗತಿಕವಾಗಿರಲಿ ಅವುಗಳ ಮೂಲಕ ಆಂತರ್ಯದಲ್ಲಿಯೇ ಇರುತ್ತದೆ.]

ಆದುದರಿಂದ ಶಾಂತಿ ಸ್ಥಾಪನೆ ಕಾರ್ಯವು ಅಂತರಂಗದಿಂದ ಉದಯಿಸಿ ಬಹಿರಂಗಕ್ಕೆ ಬರಬೇಕಾದರೆ ವ್ಯಕ್ತಿಯ ವಿಚಾರವನ್ನೇ ವಿಕಾಸಗೊಳಿಸಬೇಕಾದುದು ಅವಶ್ಯ, ವಿಚಾರ ವಿಕಾಸವೇ ಮನಸ್ಸಿಗೆ ಶಾಂತಿಯನ್ನುಂಟು ಮಾಡುವದು. ಅಂಥ ಶಾಂತಿಯೇ ಜಗತ್ತಿನಲ್ಲೆಲ್ಲ ವ್ಯಾಪಿಸುತ್ತ ಶಾಶ್ವತವಾಗಿ ಜಗತ್ತಿನಲ್ಲಿ ನೆಲೆಸುವದು.



# ಮೂರುಸಾವಿರಮಠದ

# ಶ್ರೀ 'ಕುಮಾರೇಶ್ವರ ಶಿವಯೋಗಿ ಸಂಘ'

# ಒಂದು ಸಮೀಕ್ಷೆ :

ಮಲ್ಲಿಕಾರ್ಜುನದೇವರು, ತೆಲಸಂಗ, ಎಂ. ಎ.

ಅಂದಿನಿಂದ ಇಂದಿನವರೆಗೆ ಮಾನವ ತನ್ನ ಸಾಮಾಜಿಕ ಜೀವನದ ಸುವ್ಯವಸ್ಥೆಗಾಗಿ ಹಲವು ಸಂಘ ಸಂಸ್ಥೆಗಳನ್ನು ಕೆಲವು ನಿರ್ಧಿಷ್ಟ ಗುರಿಗಳ ಸಾಧನೆಗಾಗಿ ಕೆಲವು ನಿಯಮಗಳ ಅಡಿಪಾಯದ ಮೇಲೆ ಕಟ್ಟುತ್ತಾ ಬಂದಿರುವನು. ಇಂದು ಸಂಘ ಸಂಸ್ಥೆಗಳು ಬಹುಮುಖ್ಯ ಪಾತ್ರ ವಹಿಸಿವೆ. ವಿದ್ಯಾರ್ಥಿ ಸಂಘ, ಕಾರ್ಮಿಕರ ಸಂಘ, ಸಾಹಿತಿಗಳ ಸಂಘ, ವಿದ್ಯಾಭಿವೃದ್ಧಿ ಸಂಸ್ಥೆ ಇವು ಒಂದು ವಿಧವಾಗಿ ಕಾರ್ಯವೆಸಗಿದರೆ; ಅರವಿಂದಾಶ್ರಮ, ಶಾಂತಿ ನಿಕೇತನ, ರಾಮಕೃಷ್ಣಾಶ್ರಮ, ಶಿವಯೋಗ ಮಂದಿರ ಇವುಗಳ ಕಾರ್ಯವ್ಯಾಪ್ತಿ ಇನ್ನೊಂದು ವಿಧ. ಇವುಗಳ ರೀತಿ ಉಳಿದ ಸಂಘ ಸಂಸ್ಥೆಗಳಿಗೆ ತೀರ ವಿಭಿನ್ನ. ಇವುಗಳ ಸಾಲಿನಲ್ಲಿ ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘವೂ ಒಂದು.

ಈ ಸಂಘ ಸ್ಥಾಪನೆಯಾಗಿ ೧೧ ವರ್ಷ ತುಂಬಿ ೧೨ ರಲ್ಲಿ ಕಾಲಿಡಲಿದೆ. 'ಬೆಳೆಯಸಿರಿ ಮೊಳಕೆಯಲ್ಲಿ ಎಂಬಂತೆ' ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಕೆಂಬಂತೆ; ಅಲ್ಪಾವಧಿಯಲ್ಲಿಯೆ ನಾಡಿನಲ್ಲಿ ಹೆಸರು ಮಾಡಿದೆ. ಬಹಳ ಕಾಲ ಬದುಕಿದರು, ಬದುಕಿತು ಎಂಬುದು ಮುಖ್ಯವಲ್ಲ. ಏನು ಮಾಡಿದರು, ಏನು ಮಾಡಿತು ಎಂಬುದುಮುಖ್ಯ. ಈ ದಿಶೆಯಲ್ಲಿ ಕುಮಾರೇಶ್ವರ ಶಿವಯೋಗಿ ಸಂಘವನ್ನು ಗಮನಿಸಬಹುದು.

ಪ್ರಾತಃಸ್ಮರಣೀಯರಾದ ಲಿಂಗೈಕ್ಯ. ಶ್ರೀ ಕುಮಾರ ಶಿವಯೋಗಿಗಳು ಜೀರ್ಣವಾದ ಸಮಾಜಕ್ಕೆ ಕಾಯಕಲ್ಪ ಮಾಡಲುದಿಸಿ ಬಂದವರು. ಅಖಿಲ ಭಾರತ ವೀರಶೈವ ಮಹಾಸಭೆಯ ಮುಖಾಂತರ ನಾಡಿನುದ್ದಕ್ಕೂ ಧರ್ಮ ಸಂಸ್ಕೃತಿಗಳ ಡಿಂಡಿಮ ಬಾರಿಸಿದರು. ಶಿವಯೋಗ ಮಂದಿರ ಸಂಸ್ಥೆಯ ಸ್ಥಾಪನೆಯಿಂದ ಸಮಾಜದ ಸರ್ವ

ತೋಮುಖ ಏಳ್ಗಿಗೆ ನಾಂದಿ ಹಾಡಿದರು. ಈ ಹಾನಗಲ್ಲ ಶ್ರೀಗಳು ನಿಯೋಜಿಸಿದ ಧ್ಯೇಯೋದ್ದೇಶಗಳ ಗುರಿಸಾಧನೆಗೆ ಕಲ್ಪವೃಕ್ಷ ಸದೃಶವಾದವರು ಮೂರುಸಾವಿರ ಮಠದ ಸಧ್ಯದ ಶ್ರೀ ಜಗದ್ಗುರುಗಳು. ಇವರ ಕಾರ್ಯವ್ಯಾಪ್ತಿ ವೈವಿಧ್ಯಮಯ ಅದು ಶಾಲೆ, ಕಾಲೇಜು, ದವಾಖಾನೆ, ಸಾಹಿತ್ಯ–ಪ್ರಕಟಣೆ, ಧರ್ಮಪ್ರಚಾರ, ಭೀಕರ ಬರಗಾಲದಲ್ಲಿ ಮಾಡಿದ ಕಾರ್ಯ–ಹೀಗೆ ಹಲವಂಧದಲ್ಲಿ ರೂಪತಾಳಿದೆ. ಅವರ ಕೈಯಲ್ಲಿ ಕೆಲಸ ಸೋತಿದೆ, ಕೆಲಸದ ಕೈಯಲ್ಲಿ ಅವರು ಸೋತಿಲ್ಲ. ಅವರು ಮೈಯಲ್ಲ ಕೈಗಳಾಗಿ ಕಾಯಕ ಮಾಡಿರುವರು. ಅವಿಶ್ರಾಂತ ಚೇತನರು. ಅವರು ಮಾಡಿದ ನೂರು ನೂರು ಕಾರ್ಯಗಳಲ್ಲಿ ಶ್ರೀ 'ಕುಮಾರೇಶ್ವರ ಶಿವಯೋಗಿ ಸಂಘ'ವು ಕೀರ್ತಿ ಕಳಸವಾಗಿದೆ.

ಕಾಶಿಯಲ್ಲಿರುವ 'ರಾಮಕೃಷ್ಣಾಶ್ರಮ'ದ ರೀತಿಯಲ್ಲಿಯೆ ಸಾಧಕರಿಗೊಂದು ಸಂಘ ಬೇಕು, ಆಧುನಿಕ ಸಮಾಜಕ್ಕೆ ಸತ್ವಪೂರ್ಣರಾದ ತೇಜೋಮೂರ್ತಿ ಸಾಧಕರ ತರಬೇತಿಯಾಗಬೇಕು. ನವ ಮನ್ವಂತರಕ್ಕನುಗುಣವಾದ ಅಧ್ಯಯನ, ಚಿಂತನೆ, ಸಾಧನೆ, ಶೋಧನೆ, ಭೋಧನೆಗಳಿಂದ ನಿದ್ರಿತ ಸಮಾಜವನ್ನು ಬಡಿದೆಬ್ಬಿಸುವ ಪುರುಷ ಶ್ರೇಷ್ಠರ ತರಬೇತಿಯಾಗಬೇಕು. ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕ ವಾಗಿ ಶುದ್ಧ ಚಾರಿತ್ರ್ಯ ಉಳ್ಳ ಪರಿಪೂರ್ಣ ಪುರುಷೋತ್ತಮರನ್ನು ನಿರ್ಮಾಣ ಮಾಡುವ ಸಂಘವನ್ನು ಸ್ಥಾಪಿಸಬೇಕೆಂಬ ಹಿರಿ ಹಂಬಲ ಶ್ರೀ ಜಗದ್ಗುರುಗಳವರಲ್ಲಿ ಚಿಗುರೊಡೆ-ಯಿತು. ಅವರ ಮನದಲ್ಲಿ ಒಳ್ಳೆಯ ವಿಚಾರ ಮೂಡಿತೆಂದರೆ ತೀರಿತು, ಅದಕ್ಕೆ ಸಾಕಾರ ರೂಪ ಕೊಡುವವರೆಗೆ ವಿಶ್ರಮಿಸರು. ಅವರ ಅವಿಶ್ರಾಂತ ಶ್ರಮದ ಫಲ ವಾಗಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ 12-12-1965 ರಂದು ಸ್ಥಾಪಿತ ವಾಯಿತು. ಈ ಸಂಘ ಸ್ಥಾಪನೆಗೆ ಪ್ರೋತ್ಸಾಹಿತರಾಗಿ ನಿಂತವರು ಚಿತ್ತರಗಿ ಇಲ ಕಲ್ಲ (ಸೌದಿ) ಶ್ರೀಗಳು; ಹುಬ್ಬಳ್ಳಿ ಹೊಸಮಠದ ಶ್ರೀಗಳು, ಚಿಂಚಣಿ ಶ್ರೀಗಳು ನವಲಗುಂದದ ಲಿಂ.. ಬಸವಲಿಂಗ ಸ್ವಾಮಿಗಳು, ಅಲ್ಲದೆ ಅನೇಕ ಕೆಳದಿ ಶ್ರೀಗಳು, ಸದ್ ಭಕ್ತರು ಸಹಕಾರ ನೀಡಿದ್ದಾರೆ.

'ನಿತ್ಯ ವ್ಯವಹಾರದಲ್ಲಿ ತರಬಹುದಾದ ಧರ್ಮವೇ ನಿಜವಾದ ಧರ್ಮ. ಎಲ್ಲ ಜೀವಿಗಳಲ್ಲಿ, ಅದರಲ್ಲೂ ದೀನ, ದಲಿತರಲ್ಲಿ ಶಿವನನ್ನು ಕಾಣುವುದೆ ಉತ್ಕೃಷ್ಟವಾದ ಧರ್ಮ'. ಧರ್ಮ ನಿಂತ ನೀರಲ್ಲ, ನಿತ್ಯ ಹರಿವ ನೀರು. ಧರ್ಮ ತತ್ವವೆಂಬ ಬೇರು ಹಳೆಯದಾದರೂ ಹೇಳುವ ರೀತಿ ಚಿಗುರಿನಂತೆ ಹೊಸದು. ಧರ್ಮ ನಿತ್ಯ ನಿರಂತರವಾಗಿ ನಡೆಯಬೇಕಾದರೆ ಧರ್ಮಾಧಿಕಾರಿಗಳು ಜಾಗೃತರಾಗಿರಬೇಕು. ಧರ್ಮಾಧಿಕಾರಿಗಳೆಂದರೆ ಸಮಾಜವೆಂಬ ಹಡುಗಿನ ಕಪ್ತಾನರಿದ್ದಂತೆ ಇವರನ್ನು ತಯಾರು ಮಾಡುವುದೊಂದು ಗುರುತರ ಹೊಣೆ. ಒಬ್ಬ ವ್ಯಕ್ತಿಯು ಪೀಠಾಧಿಕಾರಿ ಯಾಗಿ ರೂಪಗೊಳ್ಳಬೇಕಾದರೆ, ಆರ್ಯ (ವಟು), ಸಾಧಕ, ದೇಶಿಕ ಹೀಗೆ ಈ ಕಮ್ಮಟದ ಕೆಲವು ಹಂತಗಳ ಪಡಿಯಚ್ಚುಗಳಲ್ಲಿ ಕರಗಿ ಕಾಳಿಕೆ ಕಳೆದುಕೊಂಡು ವಿಶೇಷ ಸಂಸ್ಕಾರಗಳಿಂದ ಸ್ವಾಮಿಯಾಗಿ ರೂಪಗೊಳ್ಳುವನು. ಸಂಘದ ಸಂಸ್ಥಾಕರು,

ಸಂಚಾಲಕರು ಸ್ವಾಮಿಗಳೆ. ಇವರ ಆದರ್ಶ ಜೀವನವೆ ಸಾಧಕರಿಗೊಂದು ತೆರೆದಿಟ್ಟ ಪುಸ್ತಕ ಅಥವಾ ಕನ್ನಡಿ.

ಒಬ್ಬನನ್ನು ಪ್ರಾಧ್ಯಾಪಕನನ್ನಾಗಿ ಅಥವಾ ಒಬ್ಬ ದೊಡ್ಡ ಅಧಿಕಾರಿಯನ್ನಾಗಿ ಮಾಡುವದು ದೊಡ್ಡ ಹೊಣೆಗಾರಿಕೆಯ ಕೆಲಸವೇನಲ್ಲ. ಆದರೆ ಒಬ್ಬ ಯೋಗ್ಯ ಸ್ವಾಮಿಯಾಗುವಂತೆ ತರಬೇತಿ ನೀಡುವದು ತುಂಬ ಹೊಣೆಗಾರಿಕೆಯ ಕೆಲಸ. ಚಿಕ್ಕಮಕ್ಕಳಿಗೆ ಸಂಘದಲ್ಲಿ ಪ್ರವೇಶ. ಆತನಿಗೆ ಮೊದಲಿದ್ದ ಹೆಸರಿನ ಕೊನೆಗೆ ಆರ್ಯ ಎಂದು ಸೇರಿಸುವರು. ಈ ಆರ್ಯನು ಇಲ್ಲಿ ಬಿಳಿ ಬಟ್ಟೆ ಧರಿಸಬೇಕು. ತಂದೆ–ತಾಯಿ–ಬಂಧು–ಬಳಗದ ಮಾಯಾ ಕರುಳು ಹರಿದುಕೊಂಡು ಬಂದ ಸಾಧನೆಯ ಮಕ್ಕಳನ್ನು ವಾತ್ಸಲ್ಯದ ಮಡಿಲಲ್ಲಿ ಬೆಳೆಸುವರು. ಬಿಗಿ ಬೇಸರವಲ್ಲದ ರೀತಿಯ ಪ್ರಾಥಮಿಕ ಆಚಾರ ವಿಚಾರಗಳ ಶಿಕ್ಷಣ ಇಲ್ಲಿ ನಡೆಯುವದು. ವಟು ಜೀವನದ ಹಾದಿಯಲ್ಲಿ ನಡೆದ ಈತನು ಸಾಧಕ ಜೀವನದ ಕಟ್ಟಳೆಗಳನ್ನು ಪಾಲಿಸಿ ಕೊಂಡು ಹೋಗಲು ಸಮರ್ಥನಾಗಿರುವನು. ತನ್ನ ೨೫ ವರ್ಷಗಳ ವರೆಗೆ ಸಾಧಕ ಜೀವನ ನಡೆಸಬೇಕು. ಕಾವಿ ಅದ್ದಿದ ಸೀದಾ ಸಾದಾ ಉಡುಪು ತೊಡಪು ಕಟ್ಟಾ ಚರಣೆ ಹಾಗೂ ವಿಚಾರದ ಪ್ರಖರತೆಯಲ್ಲಿ ತನ್ನನ್ನು ತಾ ಸುಟ್ಟುಕೊಳ್ಳಬೇಕಾಗು ವದು. ಕಾಲ, ದೇಶ, ಮಾನಗಳಿಗೆ, ತಕ್ಕಂತೆ ತನ್ನ ಕಾರ್ಯ ವ್ಯಾಪ್ತಿಯನ್ನು ಹಮ್ಮಿಕೊಳ್ಳಲು ಶಕ್ತಿಸಾಮರ್ಥ್ಯವನ್ನು ಪಡೆವ, ಸಂಗ್ರಹಿಸುವ ಸುವರ್ಣಕಾಲ. ಸಾಧಕನಿಗೆ ಈ ಜೀವನ ಕಾಲಾವಧಿ ಬಹು ಮುಖ್ಯವಾದುದು ಆತನ ಭವ್ಯ ಭವಿಷ್ಯ ವೆಲ್ಲ ಅಂಕುರರೂಪದಲ್ಲಿ ಇಲ್ಲಿ ಸಿದ್ಧವಾಗುವದು ೨೫ರಿಂದ ೪೦ ವರ್ಷಗಳ ವರೆಗೆ ದೇಶಿಕನೆಂದು ಕರೆಯುವರು. ದೇಶಿಕ ಈ ಶಬ್ದದ ಅರ್ಥಗಳು ಮಾರ್ಗಸ್ಥ, ಉಪದೇಶಿ, ಗುರು. ಕೋಶ ಓದಿದ ಸಾಧಕ ಜ್ಞಾನದ ಕೆಂಡವಾಗಿರುವನು. ಗುರುಗಳಿಂದ ಅನುಗ್ರಹಿತನಾಗಿ ದೇಶಾನುಭವಕ್ಕಾಗಿ 'ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೊಂದು ರಾತ್ರಿಯಂತೆ' ದೇಶಸಂಚಾರ ಮಾಡಬೇಕು. ಜ್ಞಾನದ ಕೆಂಡವಾದ ಈತ ತನ್ನ ದೇಶ ಸಂಚಾರದಲ್ಲಿ ಎದುರಾಗಿ ಬಂದ ಅನ್ಯಾಯ, ಅನೀತಿ, ಅಧರ್ಮ, ಅಸೂಯೆ, ಅತ್ಯಾಚಾರಗಳನ್ನು ಸುಟ್ಟು ಹಾಕುವನು. ಧರ್ಮೋಪದೇಶ ಮಾಡುತ್ತ ಜನರಲ್ಲಿ ಧರ್ಮ, ಸಂಸ್ಕೃತಿಗಳ ಪುನರುತ್ಥಾನಗೈಯ್ಯುವನು. ಮಾನವ ಕುಲವೇ ನನ್ನ ಕುಟುಂಬ ಲೋಕವೇ ನನ್ನ ಮನೆ ಎಂಬಂತೆ ಈತನ ಸ್ಥಿತಿ. ಲೋಕಾನುಭವವನ್ನು ತಾನು ಪಡೆದು, ತನ್ನ ಅನುಭವಗಳನ್ನು ಲೋಕಕ್ಕೆ ನೀಡುತ್ತಾ ನಿತ್ಯ ಸಂಚರಿಸುವವ ದೇಶಿಕ. ಕೆಲವು ವಸ್ತುಗಳು, ಜೀವಿಗಳುಯಾವಾಗಲೂ ತಿರುಗುತ್ತಿರುತ್ತವೆ. ತಿರುಗದೆ ಒಂದೆಡೆ ನಿಂತರೆ ಲೋಕದ ಯಂತ್ರ ನಡೆಯದು. ತಿರುಗದಿರೆ ಅವುಗಳಿಗೇ ಕೇಡು. ಕುದುರೆ, ಕಣದಲ್ಲಿ ಹಂತಿ, ಆಕಾಶದಲ್ಲಿ ಮೇಘ, ಯಂತ್ರಗಳು ಹೀಗೆ ಅನೇಕ ವಸ್ತುಗಳು ತಿರುಗಿದಾಗ ಜಗದ ಕಲ್ಯಾಣ ಹಾಗೆ ದೇಶಿಕನು ಒಂದೆಡೆ ನಿಲ್ಲದೆ, ನಿತ್ಯ ಸಂಚಾರಿಯಾಗಿರಬೇಕು. 'ಸುಳಿದರೆ ವಸಂತ ಗಾಳಿ'ಯಾಗಿ ಸುಳಿಯಬೇಕು. ತರುಲತೆ, ತನುಮನ ಸಂತಸಗೊಳ್ಳಬೇಕು. ಹೀಗೆ ದೇಶಿಕನ ಜೀವನ ಜ್ಯೋತಿ

ಸದೃಶ. ವಟು, ಸಾಧಕ, ದೇಶಿಕ ಈ ಮೂರು ಹಂತದಲ್ಲಿ ನಡೆದವನ ಜೀವನ ಪುಟಕಿಟ್ಟ ಚಿನ್ನದಂತಾಗುವದು. 'ಓಂ'ಕಾರದಿಂದ ಪ್ರಾರಂಭವಾದ ಆರ್ಯನ ಅಧ್ಯಯನ ಅರಿವು ನಿಜದಲ್ಲಿ ಓಂಕಾರವಾಗಿ ನೆಲೆಗೊಳ್ಳುವವರೆಗೆ ಅನೇಕ ಹಂತದಲ್ಲಿ ಸಂಸ್ಕಾರ ನಡೆಯುತ್ತಿರುವದು.

ಒಬ್ಬ ಸಾಧಕನು ಸ್ವಾಮಿಯಾಗಿ ರೂಪಗೊಳ್ಳಬೇಕಾದರೆ ಕೆಲವು ನಿಯಮಗಳು ಅತ್ಯಾವಶ್ಯಕ. ಅವುಗಳಲ್ಲಿ ಪ್ರಧಾನವಾದವುಗಳು ಕೆಲವು ಇಲ್ಲಿ—

- ಯಾವ ಪೂರ್ವಾಗ್ರಹ ಪೀಡಿತನಾಗದಂತೆ ವಿಜ್ಞಾನದ ದೃಷ್ಟಿಕೋನದಲ್ಲಿ ಧರ್ಮವನ್ನು ಸಮನ್ವಯ ಮಾಡಿಕೊಂಡು ಹೋಗುವಂತೆ ಆಧುನಿಕ ರೀತಿಯ ಶಿಕ್ಷಣ ಕೊಡುವದು.
- ತುಲನಾತ್ಮಕವಾಗಿ ವಿವಿಧ ದರ್ಶನಗಳ ಅಧ್ಯಯನದ ಜೊತೆಗೆ, ಅನ್ಯ ಭಾಷಾಜ್ಞಾನ ನೀಡುವದು.
- ತಾನು ಸ್ವಾವಲಂಬಿಯಾಗಿ ಸಮಾಜಸೇವೆ ಮಾಡುವಂತೆ ಅಣಿಗೊಳಿಸುವದು.
- ಸಾತ್ವಿಕ ಊಟ ಕೊಡುವದು, ಸಾಧಕರು ಬರೆದ ದಿನಚರಿಯನ್ನು ನೋಡುವದು.
- ಒಂದು ಜ್ಞಾನರಂಗ, ಇನ್ನೊಂದು ಕ್ರಿಯಾರಂಗ ಜ್ಞಾನಕ್ರಿಯೆಗಳ ಸಮುಸಮುಚ್ಚಯಗೊಳ್ಳುವಂತೆ ನೋಡುವದು.

ಸಾಮೂಹಿಕ ಪ್ರಾರ್ಥನೆ, ಆಸನ, ಪಾಠಪ್ರವಚನ, ಸಂಗೀತ, ಆರ್ಚನ, ಅರ್ಪಣ, ಅನುಭವ ಮುಂತಾಗಿ ಜ್ಞಾನರಂಗದ ಮೂಲಕೇಂದ್ರಗಳಾದ ಇವುಗಳಲ್ಲಿ ಸಂಘದ ಸದಸ್ಯರೆಲ್ಲರೂ ಪಾಲ್ಗೊಳ್ಳಬೇಕು. ಕ್ರಿಯಾರಂಗದಲ್ಲಿ ಪ್ರಾಯೋಗಿಕ ಜೀವನಕ್ಕಾಗಿ ಮಠದ ಕೆಲವು ಕಾರ್ಯಗಳ ಹೊಣೆ ಸಾಧಕರ ಮೇಲಿರುವದು ವಿದ್ಯಾರ್ಥಿಪ್ರಸಾದ ನಿಲಯದ ವ್ಯವಸ್ಥೆ ನೋಡುವದು, ದಾಸೋಹದ ವ್ಯವಸ್ಥೆ ಮಾಡುವದು, ಲೈಬ್ರರಿ, ಕೈತೋಟ, ಉಪನ್ಯಾಸ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವದು, ಅತಿಥಿಸತ್ಕಾರ, ಹಿರಿಯರು ಕಿರಿಯರಿಗೆ ಪಾಠಕೊಡುವದು "ಪರಂಜ್ಯೋತಿ" ಮಾಸಿಕದಲ್ಲಿ ತರಬೇತಿ ಪಡೆಯುವದು ಸಂಘದ ಕೈ ಬರಹದ ಪತ್ರಿಕೆಯಾದ 'ಧರ್ಮತರಂಗಿಣಿ' ಹೊರಡಿಸುವದು, ಗೋಶಾಲಾ ವ್ಯವಸ್ಥೆ ಹೀಗೆ ಕ್ರಿಯಾರಂಗದಲ್ಲಿ ತರಬೇತಿಕೊಡುವದು.

'ಸ್ವಾಮಿ' ಈ ಶಬ್ದದ ಅರ್ಥ; ಒಡೆಯ, ಧನಿ, ಪ್ರಭು, ಅಥವಾ, ಮಠವಿರುವ ಸನ್ಯಾಸಿ. ಸ್ವಾಮಿಯಾಗುವವರಿಗೂ ಕೆಲವು ಅರ್ಹತೆಗಳಿರಬೇಕು. ಈ ಮೂರು ಸಂಪತ್ತುಗಳಿಗೆ ಯಾರು ಒಡೆಯರಾಗಿರುವರೊ ಅವರು ನಿಜವಾದ ಸ್ವಾಮಿಯಾಗಲು ಅರ್ಹತಾ ಸಂಪನ್ನರು. ಅವು 1) ಆಚಾರ ಸಂಪತ್ತು 2) ವಿಚಾರ ಸಂಪತ್ತು

3) ಸೇವಾ ಸಂಪತ್ತು. ಈ ತ್ರಿವೇಣಿ ಸಂಗಮದಂತಿರುವ ಈ ಮೂರು ಸಂಪತ್ತುಗಳು ತನಗೆ ತಾನೊಡೆಯನಾಗಿ ಸಮಾಜಕ್ಕೂ ಒಡೆಯನಾಗುವಂಥ ಸಾಮರ್ಥ್ಯ ತಂದು ಕೊಡುವವು. ಸ್ವಾಮಿಗಳಿಗೂ ಭಕ್ತರಿಗೂ ನೆಲ-ಮರಕ್ಕೆ ಇರುವ ಸಂಬಂಧವಿದ್ದಂತೆ ಭೂಮಿ ಭಕ್ತನಾದರೆ, ಮರ ಮಠಾಧಿಪತಿ ಫಲವತ್ತಾದ ನೆಲದಿಂದ ಬೆಳೆವ ಮರ ಕೊಡುವ ಫಲವು ಫಲವತ್ತಾದುದು. ಶಿಷ್ಯನ ಭಕ್ತಿಯ ಫಲವತ್ತತೆ ಎಂತೋ ಅಂತೆ ಗುರುವಿನ ಅಂತಃಕರುಣೆಯ ಫಲ.

ಈ ಸಂಘದ ಸದಸ್ಯರು ಜಗದ್ಗುರುಗಳಾಗಿದ್ದಾರೆ, ಸ್ವಾಮಿಗಳಾಗಿದ್ದಾರೆ, ದೇಶ ವಿದೇಶಗಳಲ್ಲಿ ಈ ಸಂಘ ಹಲವು ರೀತಿಯಲ್ಲಿ ಸೇವೆ ಸಲ್ಲಿಸಿದೆ. ಇನ್ನೂ ಅನೇಕ ಸೇವೆಗಳನ್ನು ಮಾಡಬೇಕೆಂಬ ಹೊಂಗನಸು ಕಟ್ಟಿದೆ. ಈ ಸಂಸ್ಥೆ ಚಿರಕಾಲ ಉಳಿಯುವಂತೆ ಪಬ್ಲಿಕ್ ಟ್ರಸ್ಟ್ ಆ್ಯಕ್ಟ ಪ್ರಕಾರ ರಜಿಸ್ಟರ ಮಾಡಿಸಿ, ಕೆಲವು ಆಸ್ತಿಗಳನು ನೀಡಿ ಸಂಸ್ಥಾಪಕ ಹುಬ್ಬಳ್ಳಿ ಶ್ರೀ ಜಗದ್ಗುರುಗಳು ಕೃಪೆಗೈದಿದ್ದಾರೆ. ಸಾಮಾಜಿಕ ರಂಗದಲ್ಲಿ ಪುನರುತ್ಥಾನವಾಗಬೇಕಾದರೆ ಇಂತಹ ಸಂಘ ಸಂಸ್ಥೆಗಳು ಬೇಕು. ಧಾರ್ಮಿಕವ್ಯಕ್ತಿಗಳು ತಯ್ಯಾರಾಗುವದರಿಂದ ಸಮಾಜಕ್ಕೆ ಅಲ್ಲದೆ ರಾಷ್ಟ್ರಕ್ಕೆ ಮಹಾಶಕ್ತಿ ಬರುವದು. ಧಾರ್ಮಿಕ ಸಾಮಾಜಿಕ ಚೈತನ್ಯವನ್ನೇ ಈ ೧೧ ವರ್ಷಗಳಲ್ಲಿ ಪ್ರತಿಬಿಂಬಿಸಿದೆ. ಮೂರುಸಾವಿರಮಠದ ಈ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘವು ನೂರಾರು ವರ್ಷ ಬದುಕಿ ನವಚೈತನ್ಯವನ್ನು ನೀಡತಕ್ಕಂಥ ಮಹಾವ್ಯಕ್ತಿಗಳನ್ನು ನೀಡಿ, ನಾಡೆಲ್ಲವೂ ಬೆಳಗಾಗಲೆಂಬುದೆ ನಮ್ಮ ಅಂತಃಕರುಣದ ಹಾರೈಕೆ. ಅದಕ್ಕೆ ಭಕ್ತಕೋಟಿ ಸದಾ ಸಹಕಾರ ನೀಡಬೇಕೆಂಬುದು ನಮ್ಮ ಹಿರಿಯಾಶೆ.

## ಅಚಲ ನಿಷ್ಠೆ

ಚಂದನವ ಕಡಿದು ಕೊರೆದು ತೇದಡೆ,
ನೊಂದೆನೆಂದು ಕಂಪ ಬಿಟ್ಟಿತ್ತೆ ?
ತಂದು ಸುವರ್ಣವ ಕಡಿದೊರೆದಡೆ, ಬೆಂದು ಕಳಂಕ
ಹಿಡಿದಿತ್ತೆ ?
ಸಂದುಸಂದನು ಕಡಿದ ಕಬ್ಬನು ತಂದು ಗಾಣದಲಿಕ್ಕಿ
ಅರೆದಡೆ,
ಬೆಂದು ಪಾಕಗೊಳ ಸಕ್ಕರೆಯಾಗಿ,
ನೊಂದೆನೆಂದು ಸಿಹಿಯ ಬಿಟ್ಟಿತ್ತೆ ?
ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು
ಮುಂದಿಳುಹಲು ನಿಮಗೆ ಹಾನಿ.
ಎನ್ನ ತಂದೆ ಚೆನ್ನಮಲ್ಲಿಕಾರ್ಜುನದೇವಯ್ಯ,
ಕೊಂದಡೆ ಶರಣೆಂಬುದ ಮಾಣೆ.



ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಂಸ್ಥಾಪನೆಯ ಕಾಲಕ್ಕೆ ತೆಗೆದ ಚಿತ್ರ
ದಿನಾಂಕ ೧೨-೧೨-೧೯೬೫.



ಶ್ರಾವಣದ ಕಡೆಯ ಸೋಮವಾರ ನಡೆದ ಸಿಂಹಾಸನಾರೋಹಣದ
ಶುಭ ಸಂದರ್ಭದಲ್ಲಿ ತೆಗೆದ ಭಾವ ಚಿತ್ರ.



ಮೂರುಸಾವಿರಮಠದ ಶ್ರೀಜಗದ್ಗುರುಗಳವರೊಡನೆ ಶ್ರೀಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ಕುಮಾರೋದ್ಯಾನವನದಲ್ಲಿ



ಶ್ರೀ ಜಗದ್ಗುರು ಮೂರುಸಾವಿರ ಮಠದ
ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ವಿವಿಧ ಆಸನಗಳಲ್ಲಿ

೧) ಉಭಯ ಪಾದ ಶಿರಾಸನ
೨) ಪದ್ಮಾಸನ
೩) ವೃಕ್ಷಾಸನ
೪) ಗರ್ಭಾಸನ
೫) ಕಂದ ಪೀಡಾಸನ
೬) ಮತಾಂತರ ಧನುರಾಸನ
೭) ಉತ್ಥಾನ ಶಿರಾಸನ
೮) ಕುಕ್ಕುಟಾಸನ



ಶ್ರೀ ಜಗದ್ಗುರು ಮೂರುಸಾವಿರ ಮಠದ
ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ವಿವಿಧ ಆಸನಗಳಲ್ಲಿ

೧) ಉಷ್ಟ್ರಾಸನ  ೩) ಮಯೂರಾಸನ
೨) ಮತ್ಸ್ಯೇಂದ್ರಾಸನ  ೪) ಊರ್ಧ್ವ ಧನುರಾಸನ
೫) ವೃಶ್ಚಿಕಾಸನ



ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಂಸ್ಥಾಪಕರಾದ ಮೂರುಸಾವಿರಮಠದ ಜಗದ್ಗುರುಗಳವರೊಡನೆ
ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಮಿತಿಯ ಸದಸ್ಯರು.

# ಬಾಳು ಚಿಗಿತು ನಗುತಲಿರಲಿ !

ತನುವು ಮುಪ್ಪನಪ್ಪಲೇನು
ಮನಕೆ ಮುಪ್ಪು ಬಾರದಿರಲಿ;
ಮನೆಗೆ ಕೊರತೆ ಬಂದೊಡೇನು,
ಮನದಿ ಕೊರತೆ ತೋರದಿರಲಿ !
ವಿತ್ತ ಕರಗಿ ಹೋದರೇನು,
ಚಿತ್ತ ಸೊರಗಿ ಹೋಗದಿರಲಿ;
ವೃದ್ಧಿ ಮಾಯವಾದರೇನು,
ಬುದ್ಧಿ ಸೋತು ಬಾಗದಿರಲಿ !
ಮತಿಗೆ ಖತಿಯು ಬಂದೊಡೇನು,
ಕೃತಿಗೆ ಚ್ಯುತಿಯು ಬಾರದಿರಲಿ;
ವ್ರತಕೆ ಭಂಗ ಬಂದರೇನು
ಧೃತಿಗೆ ಭಂಗ ಬಾರದಿರಲಿ !
ಹಮ್ಮಿದ್ದುದು ಹುಸಿಯಾದರು
ಹಮ್ಮು ಮೊಂಡೆಯೂರದಿರಲಿ;
ಸೊಮ್ಮು ಕೈಯ ಕೊಟ್ಟರೇನು
ಹೆಮ್ಮೆ ಹುಲ್ಲ ಕಚ್ಚದಿರಲಿ;
ಬೀಳು ಉತ್ತ ಹೊಲದಿ ಸೊಗದ
ಕಾಳು ಮೂಡಿ ಮೆರೆಯುತಿರಲಿ;
ಹಾಳು ಸುತ್ತು ಮುತ್ತಲೇನು
ಬಾಳು ಚಿಗಿತು ನಗುತಲಿರಲಿ !

—ಸಿದ್ಧಯ್ಯ ಪುರಾಣಿಕ.



# ಮೂಲ-ನಿರಂಜನ

[ಚಾಲ : "ಬ್ರಹ್ಮ-ಮುರಾರಿ-ಸುರಾರ್ಚಿತ-ಲಿಂಗಂ" ಎಂಬಂತೆ]

ಮೂಲ_ನಿರಂಜನ_ಜಂಗಮ_ದೇವಂ |
ಶೀಲ_ಸು_ಸಂಸ್ಕೃತಿ_ಕಾರಣ-ದೇವಂ ||
ಲೀಲ್ಯಾನಾದಿ_ಜಗದ್‌ಗುರು_ದೇವಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೧||

ಯೋಗ_ವಿರಾಜಿತ_ಚರ_ಗುರು_ಸಿದ್ಧಂ |
ಭೋಗ-ವಿಧಾಯಕ_ನಾಯಕ_ಸಿದ್ಧಂ ||
ತ್ಯಾಗ_ಗುಣಾನ್ವಿತ_ಶಂಕರ_ಸಿದ್ಧಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೨||

ಕುಸುಮ_ಲತಾ_ಪೂವಲ್ಲೀ_ಮೂರ್ತಿಂ |
ಅಸಮ್ಯಾಕ್ಷ_ಭ್ರೂವಲ್ಲೀ_ಮೂರ್ತಿಂ ||
ತ್ರಿಸಹಸ್ರ_ಮಠ_ಸ್ಥಾಪಕ_ಮೂರ್ತಿಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೩||

ಭಕ್ತೋದ್ಧೃತಿ_ನಿರ್-ವಿಕಲ್ಪಕ_ಗುರುಂ |
ಶಕ್ತೇಭ್ಯೋ ಶಿಕ್ಷಾ_ದಾನಿ_ಗುರುಂ ||
ಯುಕ್ತ_ಸು_ಸಾಧನ_ಕೈವಲ್ಯ_ಗುರುಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೪||

ಇಷ್ಟಾರ್ಥ_ಪ್ರದಮಿಷ್ಟಂ ಲಿಂಗಂ |
ಸೃಷ್ಟಿ-ಕಲಾಯಾಂ ಪ್ರಾಣಂ ಲಿಂಗಂ |
ದೃಷ್ಟ್ಯಾಧಾರಿತ_ಭಾವಂ ಲಿಂಗಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೫||

ಪ್ರಚಲಿತ-ಗುರುಪದ-ಭಾಜಂ ಪೂಜ್ಯಂ |
ಸ-ಚರಾಽಚರ-ಜಗದೀಶ್ವರ-ಪೂಜ್ಯಂ ||
ರಚನಾ-ಕಾರಣೈಕಾಽಽಕೃತಿ-ಪೂಜ್ಯಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೬||

ಅರಿ-ಷಡ್-ವರ್ಗ-ವಿನಾಶಕ-ಶರಣಂ |
ಕರುಣಾಽಽದ್ರಾಂತಃಕರಣಂ ಶರಣಂ ||
ಪರತರ-ಷಟ್-ಸ್ಥಲ-ಬೋಧಕ-ಶರಣಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೭||

ಚರಕುಲ-ಚರವರ-ಚಿರ-ಹುಚ್ಚೇಶಂ |
ಪರತರ-ಪರಶಿವ-ಪರಮ-ಮಹೇಶಮ್ ||
ಗುರುವರ-"ಮೂಜಗ"-ಗುರುಸಿದ್ಧೇಶಂ |
ತಂ ಪ್ರಣಮಾಮಿ ಗುರುಂ ಗುರುಸಿದ್ಧಮ್ ||೮||

ಭೂವಲ್ಲೀ-ಶೂನ್ಯ-ಪೀಠಸ್ಥ-ಗುರುಸಿದ್ಧೇಶ್ವರಾಷ್ಟಕಮ್ |
ಪಠನಂ ಯಃ ಕರೋತ್ಯತ್ರ ಸ ಪ್ರಾಪ್ನೋತಿ ಸುಖಂ ಸದಾ ||೯||

—"ಶ್ರೀ ಮೂ. ಜ. ಗಂ," ಹುಬ್ಬಳ್ಳಿ.

# ' ಗುರುಸಿದ್ಧಯೋಗಿ '

ರಾಗ : ಬಸಂತ ಬಹಾರ
ತಾಳ : ಧುಮಾಳ

ಗುರುಸಿದ್ಧಯೋಗಿ ಪರಮ ವಿರಾಗಿ
ನಿರುತದಿ ಕಾಯೋ ಸ್ಮರಿಪೆನು ಬಾಗಿ ||ಪಲ್ಲ||

ಮೂರುಸಾವಿರ ಮಠದೊಡೆಯನೆ |
ಮೂರು ತತ್ತ್ವವ ತೋರು ಭವಹರನೆ ||ಅ.ಪ.||

ಅಗಣಿತ ಮಹಿಮನೆ | ಸುಗುಣಾಭರಣನೆ |
ಜಗದ್ಗುರುವರನೆ | ಶೂನ್ಯ ಪೀಠಾಧೀಶನೆ || ೧ ||

ಧರೆಯಲ್ಲಿ ತುಂಬಿಹುದು ಪೂರ ಮೋಸ |
ಸುರಿಸಯ್ಯ ಕರುಣೆಯ ಶ್ರೀಚಿತ್ ಪ್ರಕಾಶ || ೨ ||

ಮಾಯಾ ಮೋಹದಿ ಬೆಂದಿಹೆನು ದೇವ |
ಕಾಯ–ವಾಙ್–ಮನಕೆ ಕೊಡು, ಶಿವಭಾವ || ೩ ||

ನಿರ್ವಿಕಲ್ಪ ಸಮಾಧಿಸ್ಥ ನೀನು |
ನಿರ್ವಿಕಾರವನು ಬಯಸುವೆನು ನಾನು || ೪ ||

ಸ್ಥಾಪಿಸಿ ಪೋಷಿಸಿ ತ್ರಿ–ಸಹಸ್ರಮಠಗಳ |
ರೂಪಿಸಿ ತತ್ತ್ವವನರುಹಿದಿ ಜಗದೊಳು || ೫ ||

ನಿನ್ನಿಂದ ಮೂರುಸಾವಿರ ವಿರತರು |
ಧನ್ಯರಾದರು ಶಕ್ತಿಯಿಂ ಬೆಳಗಿಹರು || ೬ ||

ಬಿತ್ತಿದರು ಪೊಡವಿಯೊಳು ನೀನಿತ್ತ ಸಂದೇಶ |
ಕಿತ್ತಿದರು ಅಜ್ಞಾನ–ಕರಿಕೆಯನು ಚಿತ್‌ಕೋಶ || ೭ ||

ಹಾರಿಸಿ ಮೆರೆಸಿದೈ ಷಟ್‌ಸ್ಥಲ ಧ್ವಜವ |
ಧಾರುಣಿಯೊಳು ಬೆಳಸಿದರ್ ಶಿವಧರ್ಮವ || ೮ ||

ನಿರಂಜನ ಪ್ರಭುವೆ | ವಿರಾಗ ವಿಭುವೆ |
ಹರ ಮತೋದ್ಧಾರಕ ಕಲ್ಪ-ತರುವೆ || ೯ ||

ಹುಬ್ಬಳ್ಳಿ ದೊರೆಯೆ | ನಿನಗಾರು ಸರಿಯೋ |
ಹಬ್ಬಿಹುದು ತವ ಶಕ್ತಿ ಸುತ್ತೆಲ್ಲ ಗುರುವೆ ||೧೦||

ನೀನಿರುವೆ ಜಗಕೆಲ್ಲ ಮಹಾಶಕ್ತಿ |
ನೀನೆನಗೆ ಕೊಡು ಬೇಗ ಸದ್‌ಭಕ್ತಿ ||೧೧||

ಮೂಜಗದೀಶ ಕರ್ತೃ ಗುರುಸಿದ್ಧೇಶ |
ಸುಜನಹೃನ್ ನಿವಾಸ ಪರಂಜ್ಯೋತಿ ಪ್ರಕಾಶ ||೧೨||

# ಕಾಪಾಡು ಶಿವಯೋಗಿ

ರಾಗ : ಲಲಿತ

ತಾಳ : ಝಂಪಾ ತಾಳ

ಕಾಪಾಡು, ಶಿವಯೋಗಿ! ಶ್ರೀ ಗುರುಸಿದ್ಧೇಶ ! || ಪಲ್ಲವಿ ||
ಪಾಪೌಘ-ಪರಿಹರಿಸು, ಹುಬ್ಬಳ್ಳಿ-ಹುಚ್ಚೇಶ ! || ಅನುಪಲ್ಲವಿ ||

ನಿನ್ನಿಂದ ಹೂಬಳ್ಳಿ ಪರಮ ಪಾವನವಾಯ್ತು |
ನಿನ್ನ ದರುಶನದಿಂದ ಭವ-ಪಾಶ ದೂರಾಯ್ತು || ೧ ||

ನಿನ್ನ ಗುಣ ವರ್ಣಿಸಲು ಆದಿಶೇಷಗಸಾಧ್ಯ |
ನಿನ್ನ ಭಕ್ತಗೆ ನಿನ್ನ ಮಹಿಮೆ ತಿಳಿಯಲು ಸಾಧ್ಯ || ೨ ||

ಸಂಗ ಶಿವ ಸಮರಸಕೆ ನಿನ್ನದೇ ಶಿವ-ಓಜ |
ಮಂಗಲದ ಬೆಳಗನ್ನು 'ಬೀರುತಿದೆ' ತವ ತೇಜ || ೩ ||

ಶಿವಯೋಗ ನಿದ್ರೆಯಲಿ ಜಾಗ್ರತೆಯ ಚಿರ-ಶಾಂತಿ |
ಶಿವ ! ಯೋಗದಿಂ ಜಗಕೆ, ನೀಡು ನೀ ಸುಖ-ಶಾಂತಿ || ೪ ||

ನಿನ್ನ ನಾಮದ ಜಪದಿ, ಸಾಧಕನ ಗುರಿ ಸಿದ್ಧ
ಉನ್ನತದ ಸಿದ್ಧರಿಗೆ ಸಿದ್ಧ ನೀ ! ಗುರುಸಿದ್ಧ || ೫ ||

ಉದಯಾಸ್ತಮಾನದಲಿ ಸ್ಮರಣೀಯ ಶಿವ ನೀನು |
ಸದಯ ಪರ-ಶಿವ ನೀನು; ನಿನಗೆ ಸರಿಸಮ ನೀನು || ೬ ||

ಭಾರತದ ಸಂಸ್ಕೃತಿಯ ಸಂಸ್ಕೃತಿಗೆ ನೀ ರಕ್ಷೆ
ಕೋರುವೆವು, ನೀಡು ನೀ, ಜ್ಞಾನಾಮೃತದ ಭಿಕ್ಷೆ || ೭ ||

—ಶ್ರೀ. ಸದಾಶಿವ ಸ್ವಾಮಿಗಳು, ವಿರಕ್ತಮಠ, ಹಾನುಗಲ್ಲ.



# ತ್ರಿಸಹಸ್ರ ಮಠಾಧೀಶ

॥ ಅನುಷ್ಟುಪ್–ಛಂದಃ ॥

ತ್ರಿ-ಸಹಸ್ರ–ಮಠಾಧೀಶ । ತ್ರಿಗುಣ್ಯಾತೀತ ರೂಪಕ ।
ತ್ರಿಕಾಲಂ ತ್ವಾಮಹಂ ವಂದೇ, ಲೋಕಾನಾಂ ಶಾಂತಿದಾಯಕ ॥ ೧ ॥

ನಿರ್ವಿಕಲ್ಪ-ಸಮಾಧಿ-ಸ್ಥ ! ನಿರ್ವಿಕಾರ–ಸ್ವರೂಪಕ ।
ನಿತ್ಯ ! ನಿರಘ । ನಿರ್ದ್ವಂದ್ವ । ಸು–ಶಾಂತಂ ತ್ವಾಮಹಂ ಭಜೇ ॥ ೨ ॥

ದರಿದ್ರಾ ಧನಿಕಾಃ ಸರ್ವೇ ಮೋದಕ-ಪ್ರಿಯ-ಬಾಲಕಾಃ ।
ಸಮ್ಮಿಲಂತಿ ಸದಾ ಭಕ್ತ್ಯಾ ತವ ಪವಿತ್ರ-ಸನ್ನಿಧೌ ॥ ೩ ॥

ತ್ವತ್ ಪ್ರಸಾದ-ಪ್ರಭಾವೇಣ ಛಾತ್ರಾ ಜೀವಂತಿ ಸಂತಸಾತ್ ।
ಸತ್-ಕ್ರಿಯಾ–ಶೀಲ ಸಂಪನ್ನ । ನಮಾಮಿ ತ್ವಾಂ ಜಗದ್‌ಗುರೋ ॥ ೪ ॥

ಸರ್ವಮನ್ಯತ್ ಪರಿತ್ಯಜ್ಯ, ತವ ಪಾದಾವುಪಾಶ್ರಿತೌ ।
ತ್ವದಂತೇವಾಸಿನಂ ಮಾಂ ಹಿ ರಕ್ಷ, ರಕ್ಷ, ದಯಾನಿಧೇ । ॥ ೫ ॥

ಶಿವಯೋಗ–ಸುಖ–ತಲ್ಲೀನ । ಶಿವಾಚಾರ–ಪ್ರಬೋಧಕ
ಶಿವಭಕ್ತಗಣಾಯ ತ್ವಂ ನಿಜ ಶಾಂತಿಂ ಪ್ರಯಚ್ಛ ಭೋ । ॥ ೬ ॥

ಅನುಗ್ರಹ ಕೃಪಾ-ಸಿಂಧೋ । ಭವ–ಬಂಧ–ವಿದಾರಕ ।
ಶ್ರದ್ಧಾ-ಭಕ್ತಿಂ ಸದಾ ದತ್ವಾ ಕರುಣಾಕರ। ಪಾಹಿ। ಮಾಮ್ ॥ ೭ ॥

ತ್ವತ್–ಪಾದಾನುಗ್ರಹಾದೇವ ಸರ್ವಂ ಶಾಂತಿ-ಕರಂ ಶುಭಂ
ಅತೋಽಹಂ ನವಧಾ ಭಕ್ತ್ಯಾ ತ್ವಾಮೇವ ಶರಣಂ ಗತಃ ॥ ೮ ॥

[ಫಲ–ಶ್ರುತಿಃ]

"ಶಿವಲಿಂಗೇಶ್ವರೇ"ಣೋಕ್ತಂ ಗುರುಸಿದ್ಧೇಶ್ವರ್ಯಾಷ್ಟಕಮ್ ।
ಯೇ ಪಠಂತಿ ಸಧಾ ಭಕ್ತ್ಯಾ ತೇ ಮುಕ್ತಾ ನ್ಯಾತ್ರ ಸಂಶಯ : ॥ ೯ ॥

—ಶ್ರೀ ಶಿವಲಿಂಗ ಸ್ವಾಮಿಗಳು, ಹುಕ್ಕೇರಿಮಠ,
ಹಾವೇರಿ.

# ದಯಾ - ಮಯ

ರಾಗ : ದರಬಾರಿ ಕಾನಡಾ

ತಾಳ : ಕೇರವಾ

ದಯಾ-ಮಯಾ ಹುಚ್ಚೀಶಾ |
ದಯಮಾಡಿ ಸಲಹೈ, ಮಹೇಶಾ | ||ಪಲ್ಲ||

ನಾ ಭಜನೆ ಮಾಡುವೆನು |
ನೀ ಭಜನೆ ತಿಳಿವವನು ||೧||

ನಾ ನುಡಿವೆ, ಆಲಿಸೈ |
ನೀನೂಲಿದು ಲಾಲಿಸೈ ||೨||

ನಾ ನಿನ್ನ ಕಿರಿಕಂದ |
ನೀನೆನ್ನ ತಾಯ್-ತಂದೆ ||೩||

ನಾ ನಿನ್ನ ಸದ್ಭಕ್ತ |
ನೀನೆನಗೆ ಆಸಕ್ತ ||೪||

ಭಕ್ತಿ-ಧನಿಕನು ನಾನು |
ಭಕ್ತಿಗೊಲಿವವ ನೀನು ||೫||

ಭಕ್ತಿ-ದಾಸಿಯು ನಾನು |
ಮುಕ್ತಿ ದಾನಿಯು ನೀನು ||೬||

ಭುವಿಗೆ ನಾ ಪರಿಶುದ್ಧ |
ಶಿವಯೋಗಿ ನೀ ಸಿದ್ಧ ||೭||

ಗುರುಸಿದ್ಧ ಶಿವ ನೀನು |
ಗುರಿ ಸಾಧಕನು ನಾನು ||೮||

ಕನಸು ನನಸಾಗಲೈ |
ಮನಸು ಸ್ಥಿರವಾಗಲೈ ||೯||

ನರನಾದ ನಾ ಜೀವ |
'ಗುರುಮೂರ್ತಿ' ನೀ ದೇವ ||೧೦||

—ಡಾ|| 'ಗುರುಸಿದ್ಧ ದೇವ' ರಾಜಗುರುಹಿರೇಮಠ, ಕೆಳದಿ



# ಯತಿ ತಿಲಕಗೆ

ರಾಗ : ಕಾಂಬೋಧಿ ತಾಲ : ದಾದರಾ

ಜಯ ಮಂಗಲಂ ನಿತ್ಯ.
ಜಯ ಮಂಗಲಂ | ನಿತ್ಯ-ಶುಭ-ಮಂಗಲಂ ! ||ಪಲ್ಲವಿ||
ಜಯತು ಶ್ರೀ ಗುರುಸಿದ್ಧ ರಾಜಯತಿಗೆ

ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳಾಗಿ |
ಲಿಂಗವೇ ತಾನು; ತಾನೇ ಲಿಂಗವಾಗಿ ||
ತುಂಗ ಶಿವಯೋಗ-ಸಾಮ್ರಾಜ್ಯ-ವೈಭವದಲಿ |
ಪಿಂಗದೆ ನಿಬ್ಬೆರಗಿನಲಿ ಮೆರೆವಗೆ ||೧||

ಆರರಬ್ಬರವನ್ನು, ಮೂರರುಬ್ಬರವನ್ನು |
ವೀರ ವೈರಾಗ್ಯದಿಂ ತಡೆದು, ಕಡಿದು
ಯೇರಿದ ಸ್ಥಲದೊಳಗೆ ನಿಂದು ಚಂದದಿ ನಲಿವ |
ಧೀರ ಶ್ರೀ ಗುರುಸಿದ್ಧ-ರಾಜೇಂದ್ರಗೆ ||೨||

ಸಿದ್ಧ ಮನ, ಸಿದ್ಧ-ಕರ, ಸಿದ್ಧ ಭಾವಂಗಳಿಂ |
ಬದ್ಧರನು ಪರಿಶುದ್ಧ ಮಾಡುತಿರ್ಪ ||
ಸಿದ್ಧ ಗುರುವ ಜಗದಿ ಗುರುಸಿದ್ಧನೆಂದು ತಾಂ |
ಸಿದ್ಧಿಯ ಪಡೆದ-ಯತಿ-ತಿಲಕಗೆ ||೩||

# ಶಿವಯೋಗಿ ರಾಜ !

"ಚಾಲ : ಶಿವಯೋಗಿ ತಂದೆ...." ಎಂಬಂತೆ : ತಾಳ : ತ್ರಿತಾಲ

ಶಿವಯೋಗಿ-ರಾಜ | ಹುಬ್ಬಳ್ಳಿ-ತೇಜ ! ||ಪಲ್ಲವಿ||
ಭವವನು ದಾಟಿಸು-ಸದ್‌ಗುರು-ತೇಜ !

ಮಾಯೆಯ ಬಲೆಯೊಳು ಸಿಲುಕಿದೆನಯ್ಯ |
ಮಾಯಾ ಪಾಶವ ಪರಿಹರಿಸಯ್ಯ ||೧||

ಕರುಣಾ ದೃಷ್ಟಿಯಿಂ ನೋಡುವದಯ್ಯಾ |
ಕರವಿಡಿದೆನ್ನನು ಪೊರೆಯುವುದಯ್ಯ ||೨||

ಶರಣಾಽಗತ ನಿಜ-ಭಕ್ತರ ಬಂಧುವೆ |
ಶರಣು ಬಂದೆನು ನಿನ್ನಯ ಚರಣಕೆ ||೩||

—ಬಸವಲಿಂಗ ಪಟ್ಟಾಧ್ಯಕ್ಷರು, ಹಿರಿಯಮಠ
ತೆಲಸಂಗ

# ನವಚೇತನ ತರುತಿದೆ

ಮೂರು ವರುಷಕೊಂದು ಬುದ್ಧಿ
ಹನ್ನೆರಡಕೆ ಆಯ್ತು ಸಿದ್ಧಿ .... .... ||
'ಭೋಗಿ' ಬಾಳು ನೂರು ವರುಷ
ಸಂಸ್ಕಾರದ ಜೀವ ಪರುಷ ||
'ಯೋಗಿ' ಹಳ್ಳಿಗೊಂದು ರಾತ್ರಿ
ಪಟ್ಟಣದೊಳು ಪಂಚರಾತ್ರಿ
ಸಂಚರಿಸುವ ಧರಿತ್ರಿ‌ಽಽ
ಯುಗಪಾವನ | ಜನಪಾವನ |
ಸಾವು ಗೆದ್ದ ಸಾವಿತ್ರಿಽ .... .... ||
ನೆಟ್ಟ ಸಸಿಯು ಗಿಡವಾಗಲು
ಕಾಯಬೇಕು ಮುಂದೆ,
ಬೆಳೆವ ಗಿಡವು ಮರವಾಗಲು
ಕಾಲ ಬರಲಿ ಮುಂದೆ .... .... ||
ಹೂವಾಗುವ, ಕಾಯಾಗುವ
ಕರುಣೆಯೊಂದು ಬೇಕು,
ಹಣ್ಣಾಗುವ ಕಾಲಬಹುದು
ಅನಕ ಕಾಯಬೇಕು .... .... ||
ನಿಂತ ನೆಲಕೆ ನೀರುಣಿಸುವ-
ಬಾಯಿ, ತಾಯಿ ಬೇರು |
ಪಲ್ಲವಿಸಲಿ ದಿಸೆ-ದಿಸೆಯಲಿ
ಸುತ್ತು ತಂತು ಬೇರು ||
ರವಿ, ಚಂದ್ರರ ಕಿರಣ ತಾಗೆ,
ಸುಳಿಯುವ ತಂಗಾಳಿ ತೂಗೆ-
ಹೇಗೊ ಹೇಗೊ ಬರುತಿದೆ,
ನವಚೇತನ ತರುತಿದೆ ||

—'ಶಿವಕವಿ' ಸಂಗಮೇಶ ಹೊಸಮನಿ
ಹುನಗುಂದ. (ರಾಮವಾಡಗಿ)

# ಕುಮಾರೇಶ್ವರ ಶಿವಯೋಗಿ ಸಂಘ

ಶ್ರೀ ಕುಮಾರ ಶಿವಯೋಗಿವರರನ ಸಂಸ್ಮರಣ ಕಿರಣ ಕುಂಜ
ಸ್ತೋಕದಲ್ಲಿ ಅಸ್ತೋಕ ಶಕ್ತಿ ತುಂಬಿಸುವ ಶಕ್ತಿ ಪುಂಜ
ಇದು ಕುಮಾರ ಶಿವಯೋಗ ಮಂದಿರದ ತರುಣ ಕಲ್ಪಭೂಜ
ಇದನು ಪೋಷಿಪುದು ಮೂರುಸಾವಿರ ಯತಿಯ ಕರ ಸರೋಜ

ಚಿತ್ತ ಶಾಂತಿಯಾಧ್ಯಾತ್ಮ ವಿದ್ಯೆಯನು ಕಲಿತು ಕಲಿಸುವವರು
ಮರ್ತ್ಯನನ್ನು ಸ್ವರ್ಲೋಕ ಮಾಳ್ಪ ತತ್ತ್ವಗಳ ತಿಳಿಸುವವರು
ಇಲ್ಲಿ ಸಾಧನಂಗೈದವರು ಜಗದ್ಗುರುಗಳಾಗಿ ಕೆಲರು
ಚೆಲ್ಲವರಿದು ಪಲ್ಲವಿಸುತಿಹರು ಘನಯತಿಗಳೆನಿಸುತಿಹರು

—ಗಂಗಪ್ಪ ವಾಲಿ.





ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು
ತೋಂಟದಾರ್ಯಮಠ, ಡಂಬಳ-ಗದಗ.

---

ವಿಜಾಪುರ ಜಿಲ್ಲೆಯ ಸಿಂದಗಿಯ ಹಿರಿಯ ಮಠದಲ್ಲಿ ೧೯೪೮ ರಂದು ಜನಿಸಿದ ಇವರು ಪ್ರಾಥಮಿಕ ಅಭ್ಯಾಸವನ್ನು ಸ್ವಗ್ರಾಮದಲ್ಲಿಯೇ ನಡೆಸಿ, ಮಾಧ್ಯಮಿಕ ಶಾಲೆಗಾಗಿ ಹುಬ್ಬಳ್ಳಿಗೆ ಬಂದರು. ಇಲ್ಲಿ ಒಂದು ವರ್ಷದವರೆಗೆ ಸಾಮಾನ್ಯ ವಿದ್ಯಾರ್ಥಿ ಜೀವನ ಸಾಗಿಸಿದರು. ಅಷ್ಟರಲ್ಲಿ ಇವರ ಸದ್ಗುಣ ಶಾಂತಿ ಸ್ವಭಾವಗಳನ್ನು ಕಂಡ ಶ್ರೀ ಷ. ಬ್ರ. ಶಾಂತವೀರ ಪಟ್ಟಾಧ್ಯಕ್ಷರು ತಮ್ಮ ಸಿಂದಗಿಯ ಹಿರೇಮಠದ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡರು. ಸ್ವಾಮಿಗಳ ನಿರ್ಮಾಣಕ್ಕಾಗಿ ಹುಬ್ಬಳ್ಳಿ ಜಗದ್ಗುರುಗಳವರು ಸಂಸ್ಥಾಪಿಸಿರುವ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿಯ ಮೊದಲು ಐವರು ಸದಸ್ಯರಲ್ಲಿ ಇವರೋರ್ವರು. ಸಾಧಕ ಜೀವನದ ಪ್ರಾರಂಭದೊಡನೆ ಪುಸ್ತಕದ ಸ್ನೇಹ ಬೆಳೆಸಿ ಅಂತರ್ಮುಖಿಗಳಾದರು; ನಂತರ ಕಾಲೇಜಿನ ಓದು ಪ್ರಾರಂಭಿಸಿದರು. ಶಾಲೆಯ ಪುಸ್ತಕಗಳ ಓದಿಗಿಂತ ಇತರ ಪುಸ್ತಕ ಪತ್ರಿಕೆಗಳ ಓದಿನಲ್ಲಿ ವಿಶೇಷ ಆಸಕ್ತಿ ಇವರದು.

ಸಿಕ್ಕ ಅವಕಾಶಗಳ ಸದುಪಯೋಗ ಪಡಿಸಿಕೊಳ್ಳುತ್ತ ಸೃಜನ ಶೀಲರಾಗಿ ಇವರು ಸಿದ್ಧಿಯ ಹಂತ ಏರಿದರು. ಕುಮಾರೇಶ್ವರ ಸಂಘದಲ್ಲಿಯೇ ಒಳ್ಳೆಯ ವೈಚಾರಿಕರೂ ಸಾಹಿತ್ಯ ಮಂಟಪ ಹಾಗೂ ಕಾವ್ಯ ವಾಚನ, ಅಲ್ಲದೆ ಸಾಂಸ್ಕೃತಿಕ, ಧಾರ್ಮಿಕ,

ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದ ಇವರು ಎಲ್ಲರ ಕಣ್ಮಣಿಯಾದರು. ಜ್ಯೋತಿಯು ಬೆಳಗು, ಕುಸುಮದ ಪರಿಮಳ ಸುತ್ತೆಲ್ಲ ಹರಡುವಂತೆ ಇವರ ಪ್ರತಿಭಾ ಜ್ಯೋತಿ ಕೀರ್ತಿ-ಪುಂಜವಾಗಿ ಹರಡಿತು. ಸಾಧಕ ಜೀವನದ ಹೋರಾಟದ ಬದುಕಿನೊಡನೆ ವೈಚಾರಿಕ 'ಬೇಕುಬೇಡ'ಗಳ ತುಮುಲದಲ್ಲಿ ಮುನ್ನಡೆಯುತ್ತ ಎಮ್. ಎ. ಪದವೀಧರ ರಾದರು.

'ಹುಟ್ಟುತ್ತಲೇ ಮರುಗ ಕಂಪಮಂ ಪಡೆವಂತೆ' ಸ್ನೇಹ ಸೌಗಂಧ ಪಡೆದರು. 'ಪರಂಜ್ಯೋತಿ' ಕಾರ್ಯಾಲಯದಲ್ಲಿ ಅನವರತ ದುಡಿದರು. ಇವರು ಹುಬ್ಬಳ್ಳಿಯ ಶ್ರೀ ಜಗದ್ಗುರುಗಳೊಡನೆ ಬರಗಾಲದಲ್ಲಿ ಮಾಡಿದ ಸೇವೆ ಅವರ್ಣನೀಯ.

ಅನೇಕ ಮಠಗಳ ಕರೆ ಬಂದರೂ ಓಗೊಡಲಿಲ್ಲ. ಓಗೊಡದಿದ್ದರೂ, ಕೊನೆ ಗೊಮ್ಮೆ ಆ ಬಂಧನ ಬಿಡಲಿಲ್ಲ. ಸುವರ್ಣದ ಹೊಗೆ ಹಾಯುತ್ತಿದ್ದ ತೋಂಟದಾರ್ಯ ಮಠವು ಕಾರಣಾಂತರಗಳಿಂದ ಜೀರ್ಣವಾಗಿತ್ತು. ಜೀರ್ಣವಾದ ತೋಂಟದಾರ್ಯ ಮಠ ತನ್ನ ಜೀರ್ಣತೆಗೆ ಲಾವಣ್ಯತೆಯನ್ನು ತಂದು ನೀಡುವಂಥ ಪೂರ್ಣ ಪುಣ್ಯ ಪುರುಷನನ್ನರಸುತ್ತಿತ್ತು. ಅದರ ಕರೆ ಇವರೆಡೆಗೆ ಸಾಗಿ ಬಂದು ಅನೇಕ ಭಕ್ತರ ಒತ್ತಾಯವನ್ನು ತಂದಿತು. ಅಲ್ಲದೆ ಶ್ರೀ ಮೂರುಸಾವಿರ ಮಠದ ಜಗದ್ಗುರುಗಳವರ ಅಪ್ಪಣೆಯ ಮೇರೆಗೆ ೨೯-೮-೧೯೭೪ರಂದು ಆ ಮಠದ ಹೊಣೆ ಹೊತ್ತರು. ಆ ಮಠದಿಂದ ಇವರಿಗೇನಾಗಿದೆಯೋ ಗೊತ್ತಿಲ್ಲ. ಆದರೆ, ಇವರಿಂದ ಆ ಮಠಕ್ಕೆ ಬಹಳಷ್ಟು ಆಗಿದೆ.

ಎರಡು ಮೂರು ವರ್ಷಗಳಲ್ಲಿ, ಕನ್ನಡ ನಾಡಿನ ಹಲವೆಡೆಗಳಲ್ಲಿ ಸಂಚರಿಸಿ ಶಿವಾನುಭವ ಸುಧೆಯನ್ನು ಸುರಿಸುತ್ತಿರುವರು. ಗಾಂಭೀರ್ಯಪೂರ್ಣ ಕಂಚಿನ ಕಂಠ, ಅಸ್ಖಲಿತ ವಾಣಿ. ಪಂಡಿತರು ಪಾಮರರು ಮೆಚ್ಚುವಂತಹ ಮಾತು. "ಮಾತೆಂಬುದು ಜ್ಯೋತಿರ್ಲಿಂಗ" ಎಂಬ ಪ್ರಭುದೇವರ ನುಡಿಯ ಸತ್ಯಾರ್ಥವನ್ನು ಇವರಲ್ಲಿ ಕಾಣ ಬಹುದು. ಭೂಮಿಯ ಭವ್ಯ ಬೆಳಕಿನಲ್ಲಿದ್ದು ಅಂತರಂಗದ ನೂರು ನೂರು ರೀತಿಯ ಕತ್ತಲೆಯಲ್ಲಿ ಬಾಳ ದಿಕ್ಕುಗಾಣದೇ ಅಲೆದಾಡುವ ಜನರ ಹೃದಯದಲ್ಲಿ ಇವರ ನುಡಿ ಬೆಳಕು ಚೆಲ್ಲುವದು.

ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಎಂಟು ವರ್ಷಗಳ ವರೆಗೆ ಇದ್ದು ಸಾಧಕ ಬೋಧಕರಾಗಿ ಕಾರ್ಯ ನಿರ್ವಹಿಸಿರುವರು. ಈಗ ಜಗದ್ಗುರು ತೋಂಟ ದಾರ್ಯ ಮಠದ ಜಗದ್ಗುರುಗಳಾಗಿ ಡಂಬಳ-ಗದಗ ಹಾಗೂ ಇನ್ನೂ ಅನೇಕ ಮಠಗಳ ಹೊಣೆ ಹೊತ್ತಿರುವರು. ಸಕಲ ಜೀವರಿಗೂ ಲೇಸು ಬಯಸುತ್ತಿರುವರು. ಪ್ರತಿಯೊಂದು ಊರಿನ ಜನರಿಗಷ್ಟೇ ಅಲ್ಲ, ಆ ಊರಿನ ಪ್ರಾಣಿಗಳಿಗೂ ಎರಡು ಹೊತ್ತು ಊಟ ಸಿಗಬೇಕೆಂಬುದು ಇವರ ಮಹಾ ಮನೀಷೆ. ಸಾಹಿತ್ಯ, ಸಂಶೋಧನೆ. ಸಂಸ್ಕೃತಿಗಳ ಪುನರುತ್ಥಾನದ ಕಾರ್ಯ ಶರವೇಗದಲ್ಲಿ ನಡೆದಿದೆ.

ಇವರು ಶ್ರೀ ಸಂಘದಲ್ಲಿದ್ದು ಸಾಧಕರಾಗಿ ಸಾಧಿಸಿರುವ ತಮ್ಮ ಅನುಭವ ವನ್ನು ಬರೆದು ನೀಡಿ ಕೃಪೆಗೈದಿದ್ದಾರೆ.

# ಸಂಸ್ಮರಣೆಗಳು

—ಸಾಧಕ

ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘವು ಈಗ ಹನ್ನೆರಡು ವರ್ಷಗಳ ತುಂಬು ಜೀವನವನ್ನು-ಸಂಕ್ರಮಿಸಿ ಮುನ್ನಡೆಯುತ್ತಿದೆ. ಈ ಸವಿನೆನಪಿಗಾಗಿ ಹೊರಡುಗಡೆಮಾಡಿರುವ "ಸಂಸ್ಮರಣ ಸಂಚಿಕೆ"ಯಾದ "ಅರ್ಚನ" ಗ್ರಂಥಕ್ಕೆ ನನ್ನ ಅನುಭವಗಳನ್ನು ಕುರಿತು ಬರೆಯಬೇಕೆಂದು ಕಾರ್ಯದರ್ಶಿಗಳಿಂದ ಕೋರಿಕೆ 'ನೆನಪು' ಎಂಬುದು ಎಷ್ಟು ಸುಖಮಯವಾದುದು. ಸಂಘದ ನೆನಪಿನ 'ರೀಲು' ಸರಿದಂತೆ ಒಂದೊಂದೇ ಚಿತ್ರಗಳು ಮನಃ ಪಟಲದ ಎದುರು ಕಾಣುತ್ತಿವೆ. ಒಂದಕ್ಕಿಂತ ಒಂದು ಸುಂದರ, ರುಚಿರ. ಅವುಗಳನ್ನು ಒಟ್ಟುಗೂಡಿಸಬೇಕೆಂದಾಗ ಪೇಚು. ಎಲ್ಲ ಅನುಭವಗಳನ್ನು ಬರಹಕ್ಕಿಳಿಸಿದರೆ ಬಲು ದೊಡ್ಡ ಗ್ರಂಥವಾದೀತು, ಆದುದರಿಂದ, ಲೇಖನದ ಪರಿಮಿತಿಯನ್ನರಿತು ನನ್ನ ಬದುಕಿನ ವಿವಿಧ ಮೆಟ್ಟಲುಗಳಲ್ಲಿ ನಿಂತಾಗ ಸಂಘವು ನನ್ನ ಕಣ್ಣಿಗೆ ಕಂಡ ಬಗೆಯನ್ನು ಚಿತ್ರಿಸಲು ಇಲ್ಲಿ ಯತ್ನಿಸಿದ್ದೇನೆ.

## ಪ್ರವೇಶ

ನಾನು ಬಿಜಾಪೂರ ಜಿಲ್ಲೆಯ ಸಿಂದಗಿಯ ಹಿರೇಮಠದ ಉತ್ತರಾಧಿಕಾರಿ "ಮರಿ"ಯಾಗಿ ಮೂರುಸಾವಿರಮಠವನ್ನು ಸೇರಿದ ಕಾಲ ೧೯೩೯ ಜೂನ ತಿಂಗಳು. ನಮ್ಮ ಗುರುಗಳು ಶ್ರೀ ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರು. ಇವರು ಪ್ರಾತಃ ಸ್ಮರಣೀಯರಾದ ಲಿಂ. ಹಾನಗಲ್ ಕುಮಾರ ಶಿವಯೋಗಿಗಳವರ ಸೇವೆಯಲ್ಲಿ ಬಹು ಕಾಲವಿದ್ದವರು. ಯೋಗಸಾಧನೆಯಲ್ಲಿ ಬಲ್ಲಿದರು. ಸಮಾಜ ಸೇವೆಯಲ್ಲಿ ಇಹ-ಪರದ ಸಾರ್ಥಕತೆ ಕಂಡವರು. ಪಟ್ಟಾಧ್ಯಕ್ಷರು ಶಿವಯೋಗಮಂದಿರದಲ್ಲಿ ಸಾಧಕರಾಗಿದ್ದಾಗ ಹುಬ್ಬಳ್ಳಿಯ ಸದ್ಯದ ಶ್ರೀ ಜಗದ್ಗುರುಗಳು ವಟುಗಳು. ಅಂದಿನ ಸಾಧಕ ವಟುಗಳಲ್ಲಿಯ ಸ್ನೇಹ, ವಾತ್ಸಲ್ಯ ಬಾಳಿನುದ್ದಕ್ಕೂ ಬೆಳೆದು ಬಂದುದೇ ಗುರುಗಳು ನನ್ನನ್ನು ಮೂರುಸಾವಿರ ಮಠಕ್ಕೆ ತರಲು ಕಾರಣ. ಆಧುನಿಕ ಶಿಕ್ಷಣದಿಂದ ಸುಸಂಸ್ಕೃತರಾದ ತಪಸ್ಸಿನಿಂದ ಪಕ್ವಗೊಂಡ ಶ್ರೀ ಜಗದ್ಗುರುಗಳ ಸಾನ್ನಿಧ್ಯ 'ನಮ್ಮ ಹುಡುಗ'ನಿಗೂ ದೊರೆಯಲೆಂಬ ಗುರುಗಳ ಎದೆಯ ಹಂಬಲ ನನ್ನನ್ನು ಮೂರು ಸಾವಿರ ಮಠಕ್ಕೆ ತಂದಿತು.

## ಪ್ರಾರಂಭ

ಶ್ರೀ ಮಠದಲ್ಲಿ ನನ್ನ ಹೊಸ ಬದುಕು ಪ್ರಾರಂಭ. ಆಗ, ನನ್ನ ದೃಷ್ಟಿಯಲ್ಲಿ ಹುಬ್ಬಳ್ಳಿ ಎಂದರೆ ಅಮರಾವತಿ. ೧೨-೧೩ರ ಕಿಶೋರನಾದ ನಾನು ಈ ಮಠವನ್ನು ನಗರ

---

ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು
ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು ತೋಂಟದಾರ್ಯಮಠ,
ಡಂಬಳ-ಗದಗ.

ವನ್ನು, ಬೆರಗುಗಣ್ಣಿನಿಂದಲೇ ನೋಡಿದ್ದೆ. ಈ ಮಠದ ಬಗೆಗೆ ಆಗಾಗ ಗುರುಗಳು ಹೇಳಿದ್ದನ್ನು ಕೇಳಿದ್ದೆನಷ್ಟೇ. ಹೀಗಾಗಿ ಅದು ನನ್ನ ಕನಸಿನ ಕೈಲಾಸ; ಅನುಭವ ಮಂಟಪವಾಗಿತ್ತು. ಅಲ್ಲಿಯೇ ನನ್ನ ಬಾಳಿನ ಬಹು ಭಾಗ ಕಳೆಯ ಬೇಕಾಗಿದೆ ಎಂಬ ಕಲ್ಪನೆಯೂ ಆಗ ಇರಲಿಲ್ಲ.

ಹುಬ್ಬಳ್ಳಿಯ ಮಠಕ್ಕೆ ಬಂದ ಮೊದಲ ದಿನವೇ ಅದರ ಉನ್ನತ ಮಹಾದ್ವಾರ ಅಲ್ಲಿಯ ಭೀಮಗಾತ್ರದ ಎರಡು ಆನೆಗಳು, ಶಾಂತಗದ್ದುಗೆ, ಸುಂದರ ಸದರು, ಮಹಾ ಮಠದ ವಿಶಾಲತೆ, ಗಂಭೀರತೆ, ನಿರ್ಮಲತೆ, ನನಗೆ ಅನಿರ್ವಚನೀಯ ಆನಂದ ನೀಡಿ ದವು. ಶ್ರೀಗಳ ದರ್ಶನ, ಅವರ ಅಂತಃಕರಣದ ಎರಡು ಮಾತುಗಳು ನನ್ನ ಮನಕ್ಕೆ ತಂಪೆರೆದವು. ಮಠ-ಮಂದಿರಗಳು ಬೃಹತ್ತಾಗಿರುವದು ಒಂದು ಸಂಕೇತ. ಮಠಾಧಿ ಪತಿಗಳು ಈ ಮಠಗಳಿಗಿಂತ ಉದಾರತೆಯಲ್ಲಿ, ಅಂತಃಕರಣದಲ್ಲಿ ಸಹಸ್ರ ಪಟ್ಟು ದೊಡ್ಡವರು ಎಂಬುದನ್ನು ತೋರಿಸುಸುತ್ತವೆ ಎನಿಸಿತು.

ಶ್ರೀಮಠಕ್ಕೆ ಬಂದ ಎರಡನೇದಿನ, ಶ್ರೀಗಳ ಅಪ್ಪಣೆಯಂತೆ ಪ್ರಸಾದನಿಲಯದ ಅಧಿಕೃತ ವಿದ್ಯಾರ್ಥಿಯಾಗಿ ಆಯ್ಕೆಯಾದೆ. ಪ್ರಸಾದನಿಲಯದ ವಿದ್ಯಾರ್ಥಿಗಳಲ್ಲಿ ಹೈಸ್ಕೂಲ ವಿದ್ಯಾರ್ಥಿಗಳೇ ಹೆಚ್ಚು. ಅವರ ವಸತಿ ಶ್ರೀಮಠದ ಎರಡನೇ ಅಂತಸ್ತಿನ ವಿಶಾಲವಾದ ಪ್ರಾಂಗಣ. ಅದು ೪೦-೫೦ ವಿದ್ಯಾರ್ಥಿಗಳಿಂದ ತುಂಬಿದ್ದು, ಸದಾ ಚಟುವಟಿಕೆಯಿಂದ ಇರುತ್ತಿದ್ದುದರಿಂದ ಅದಕ್ಕೆ ಹಳೇ ವಿದ್ಯಾರ್ಥಿಗಳು "ದುರ್ಗದ ಬೈಲ" ಎಂದು ಹೆಸರಿಟ್ಟಿದ್ದರು. ವಿದ್ಯಾರ್ಥಿಗಳಾದರೂ ಅಷ್ಟೇ, ಆ ಹೆಸರಿಗೆ ಚ್ಯುತಿಬಾರದಂತೆ ಶಕ್ತಿಮೀರಿ ಶ್ರಮಿಸುತ್ತಿದ್ದರು.

ಬಿಸಿಲುನಾಡಿನ, ಬಯಲು ಸೀಮೆಯ ನನ್ನ ಮೇಲೆ ಹುಬ್ಬಳ್ಳಿಯ ತಂಪು ಹವೆ ಯುದ್ಧ ಹೂಡಿತು. ಆರೋಗ್ಯದ ಮೇಲೆ ತೀವ್ರವಾದ ಪ್ರಭಾವ ಬೀರಿತು. ಹೊಸ ಸ್ಥಳ, ತಂಟೆತಗಾದಿಯ ಹುಡುಗರು. ಸ್ವಭಾವತಃ ಅಂಜುಬುರಕ, ಸಂಕೋಚ ಸ್ವಭಾವದ ನಾನು ಇಲ್ಲಿಯ ವಾತಾವರಣದಿಂದ ಎದೆಗೆಟ್ಟೆ; ಕೆಚ್ಚಿನಂತವನು ಚಿಕ್ಕೆ ಯಂತಾದೆ. ನನ್ನದುರ್ಬಲತೆಯನ್ನು ಗಮನಿಸಿ ಗುರುಗಳು ನನ್ನನ್ನು ನಮ್ಮ ಕಡೆಯವರಾದ ಭೂಮರಡ್ಡಿ ಇಂಜನೀಯರಿಂಗ್ ಕಾಲೇಜಿನ ಪ್ರಾಧ್ಯಾಪಕ ಶ್ರೀ ಎನ್. ಜಿ. ಬಿರಾದಾರ ಪಾಟೀಲರ ಮನೆಯಲ್ಲಿಟ್ಟರು. ಮಕ್ಕಳೋಪಾದಿಯಲ್ಲಿ ಅವರು ನನ್ನನ್ನು ಸಲುಹಿದರು. ನನಗೆ ಸ್ವಲ್ಪ ಧೈರ್ಯ ಬರುತ್ತಲೇ ಮರು ವರ್ಷ ಮತ್ತೆ ಮೂರುಸಾವಿರ ಮಠದ ಪ್ರಸಾದ ನಿಲಯವನ್ನು ಸೇರಿದೆ. ನನ್ನ ಅಧ್ಯಯನ ಜೆ. ಜಿ. ಹಾಯಸ್ಕೂಲಿನಲ್ಲಿ ಮುಂದುವರೆಯಿತು.

## ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ಸ್ಥಾಪನೆ

ಹುಬ್ಬಳ್ಳಿಯ ಜಗದ್ಗುರುಗಳವರ ಕರ್ತೃತ್ವಶಕ್ತಿ ಅಗಾಧ. ವೀರಶೈವ ಧರ್ಮೋ ದ್ಧಾರ ಕಾರ್ಯದಲ್ಲಿ ಅವರ ಪಾತ್ರ ಬೆರಗುಗೊಳಿಸುವಂತಹುದು. ಅವರು ಗೈದ ಸಹಸ್ರ ಶುಭ ಕಾರ್ಯಗಳಲ್ಲಿ ಸಂಘ-ಸ್ಥಾಪನೆಯೂ ಒಂದು.

ನನಗಿಂತ ಮೊದಲೇ ಶ್ರೀಮಠಕ್ಕೆ ಶಿವಯೋಗಮಂದಿರದಿಂದ ಬಂದಿದ್ದ ಸಸ-ಣೂರಿನ ಶ್ರೀ ಮಹಾಂತದೇವರು ಏಳನೇ ಕ್ಲಾಸಿನಲ್ಲಿ ಓದುತ್ತಿದ್ದರು. ಹುಬ್ಬಳ್ಳಿಯ ಅಕ್ಕಿಹೊಂಡ ಹೊಸಮಠದ ಶ್ರೀ ಚಂದ್ರಶೇಖರದೇವರು ಹಾಯಸ್ಕೂಲಿಗೆ ಬರುತ್ತಿದ್ದರು. ಕೆಲವೇ ದಿನಗಳಲ್ಲಿ ಮಂದಿರದಿಂದ ಶೇಳಗಿಯ ಶ್ರೀ ಮಹೇಶ್ವರದೇವರು, ಕಲ್ಯಾಣದ ಶ್ರೀ ಪ್ರಭುದೇವರು ಬಂದರು. ಶ್ರೀ ಮಠದಲ್ಲಿ ಸಾಧಕರಸಂಖ್ಯೆ ಯೋಗಾಯೋಗದಿಂದ ಬೆಳೆದಾಗ ಹುಬ್ಬಳ್ಳಿ ಜಗದ್ಗುರುಗಳವರ ಚಿತ್ತದಲ್ಲೊಂದು ವಿಚಾರ ಮೂಡಿತು. ಕಾಶಿಯಲ್ಲಿ ತಾವು ಇದ್ದಾಗ ಕಂಡ "ಶ್ರೀ ರಾಮಕೃಷ್ಣಮಿಶನ್"ದಂತೆ ಸಮಾಜ ಸೇವಾ ಸಾಧಕರಿಗೆ ಒಂದು ತರಬೇತಿ ಸಂಘ ಬೇಕು. ಆಧುನಿಕ ವೀರಶೈವ ಸಮಾಜಕ್ಕೆ ಸತ್ವಪೂರ್ಣರಾದ, ತೇಜೋಮೂರ್ತಿಸಾಧಕರ ತರಬೇತಿಯಾಗಬೇಕು. ನವ ಮನ್ವಂತರಕ್ಕನುಗುಣವಾಗಿ ಅಧ್ಯಯನ, ಚಿಂತನ, ಸಾಧನೆ ಸಾಗಬೇಕು. ಶೋಧನೆ ಬೋಧನೆಗಳಿಂದ ನಿದ್ರಿತ ಸಮಾಜವನ್ನು ಬಡೆದೆಬ್ಬಿಸುವ ಪುರುಷಸಿಂಹರನ್ನು ತಯಾರಿಸಬೇಕು. ದೈಹಿಕವಾಗಿ, ಮಾನಸಿಕವಾಗಿ ಶುದ್ಧ ಚಾರಿತ್ರ್ಯವುಳ್ಳ ಪರಿಪೂರ್ಣ ಪುರುಷೋತ್ತಮರನ್ನು ನಿರ್ಮಾಣ ಮಾಡುವ ಕಮ್ಮಟವೊಂದನ್ನು ಸ್ಥಾಪಿಸಬೇಕೆಂಬ ಹಿರಿಯ ಹಂಬಲ ಶ್ರೀ ಜಗದ್ಗುರುಗಳಲ್ಲಿ ಚಿಗುರೊಡೆಯಿತು. ಅವರ ಮನದಲ್ಲಿ ಒಂದು ಒಳ್ಳೆಯ ವಿಚಾರ ಮೂಡಿತೆಂದರೆ ಸಾಕು. ಅದಕ್ಕೊಂದು ಸ್ವರೂಪ ಕೊಡುವವರೆಗೂ ವಿಶ್ರಮಿಸುತ್ತಿರಲಿಲ್ಲ. ಮೂಡಿದ ವಿಚಾರವು ಆಚಾರಕ್ಕಿಳಿದಾಗಲೇ ಅವರಿಗೆ ತೃಪ್ತಿ, ಸಮಾಧಾನ. ಸಂಘ – ಸ್ಥಾಪನೆಯ ಯೋಜನೆ ಅಂಕುರವಾದುದೆ ತಡ. ಹುಬ್ಬಳ್ಳಿಯ ಹೊಸಮಠ ಶ್ರೀಗಳು, ಯರಡೆತ್ತಿನಮಠದ ಶ್ರೀಗಳು, ನವಲಗುಂದ ಗವಿಮಠದ ಶ್ರೀಗಳು, ಸವದಿ ಶ್ರೀಗಳು ಮೊದಲಾದ ಮಹನೀಯರ ಜತೆ ಸಮಾಲೋಚಿಸಿ, ಸಮಾಜ ಸೇವಾಸಾಧಕರ ತರಬೇತಿಗಾಗಿ ದಿನಾಂಕ ೧೨-೧೨-೧೯೩೮ರಂದು ಶಿವಯೋಗಿ ಸಂಘವನ್ನು ನವಿಲಗುಂದ ಗವಿಮಠದ ಶ್ರೀ. ಲಿಂ. ಬಸವಲಿಂಗಮಹಾಸ್ವಾಮಿಗಳವರಿಂದ ಉದ್ಘಾಟನೆ ಮಾಡಿಸಿದರು.

## ವಿದ್ಯಾರ್ಥಿಯಾಗಿ

ಬಾಳಿನ ಬಂಗಾರ ಕಾಲವೆಂದು ತಿಳಿದ ವಿದ್ಯಾರ್ಥಿ ಜೀವನವನ್ನೆಲ್ಲ ಸಂಘದ ಆಶ್ರಯದಲ್ಲಿ ಸಾರ್ಥಕವಾಗಿ ಕಳೆದೆ. ನನ್ನ ತನು, ಮನ, ಬುದ್ಧಿ, ರೂಪಗೊಂಡದ್ದು ಅಲ್ಲಿಯೇ. ಅಲ್ಲಿಯ ಸುಸಂಸ್ಕೃತವಾತಾವರಣವು ಬೆಳೆಯುವ ನನ್ನ ಮನದ ಮೇಲೆ ಅಗಾಧ ಪರಿಣಾಮ ಬೀರಿತು.

ನಾನು ಹೈಸ್ಕೂಲ ವಿದ್ಯಾರ್ಥಿಯಾಗಿದ್ದಾಗಲೇ ಬದುಕಿನ ಮಹತ್ತರ ತಿರುವನ್ನು ದಾಟಿದ್ದೆ. ಇಂದು ಒಂದು ಹಂತದಲ್ಲಿ ನಿಂತು ನಿರೀಕ್ಷಿಸಿದಾಗ ವಿಸ್ಮಿತನಾಗುತ್ತೇನೆ. ಒಂದೊಂದು ಸಲ ಮೋಜೆನಿಸುತ್ತಿದೆ.

ಆಗ ನಾನು ಶಾಲೆ ಓದಿಗಿಂತ ಹೊರಗಿನ ಓದಿನಲ್ಲಿ ಹೆಚ್ಚು ಆಸಕ್ತಿ ತಾಳುತ್ತಿದ್ದೆ. ಮನಮಿಡಿಯುವ ಕತೆ ಕಾದಂಬರಿಗಳನ್ನು ಓದಿ ತೀವ್ರವಾಗಿ ಉದ್ವೇಗಗೊಳ್ಳುತ್ತಿದ್ದೆ.

ಅನೇಕ ಸಲ ಕಣ್ಣೊರಿಸಿಕೊಂಡದ್ದೂ ಉಂಟು. ಕಾದಂಬರಿಯ ಪಾತ್ರಗಳನ್ನು ನಿಜ ಜೀವನದಲ್ಲಿ ಅರಸುತ್ತಿದ್ದೆ. ಕನಸಿನ ಗಾಳಿಗೋಪುರಗಳನ್ನು ಕಟ್ಟುತ್ತಿದ್ದೆ. ಈ ಕಾಲದಲ್ಲಿಯೇ ನಾನು ಮಾನಸಿಕ ದ್ವಂದದ ದಂದುಗದಲ್ಲಿ ಸಿಕ್ಕಿದ್ದು ಮಠದ ಸ್ವಾಮಿಯಾಗುವದಕ್ಕಿಂತ ಚೆನ್ನಾಗಿ ಅಭ್ಯಾಸಮಾಡಿ ಸಾಹಿತಿ, ಪ್ರಾಧ್ಯಾಪಕನಾಗಿರ ಬೇಕೆಂಬ ಹುಚ್ಚು ಮೆಚ್ಚಾಯಿತು. ಸ್ವಾಮಿಯಾಗಲು ನನ್ನ ಮೇಲೆ ಅಂತರಂಗಿಕ ಹಾಗೂ ಬಾಹ್ಯ ಒತ್ತಡಗಳಿಲ್ಲದಿದ್ದಲ್ಲಿ ಇಂದು ಯಾವದಾದರೊಂದು ಮಹಾ ವಿದ್ಯಾಲಯದಲ್ಲಿ ಪ್ರಾಧ್ಯಾಪಕನಾಗಿರುತ್ತಿದ್ದೆನೋ ಏನೋ ?

ನಾನು ಮಠದ ಮರಿಯಾಗಲೇಬೇಕು ಎಂಬ ವಿಷಯದತ್ತ ನನಗೂ ನನ್ನ ಗುರುಗಳಿಗೂ ವಾದ ವಿವಾದವಾಗಿ ಅವರು ತುಂಬ ನೊಂದರು. ಬಂಧುಗಳು ದೂರವಾದರು; ಸ್ನೇಹಿತರು ಸನಿಹ ಬಾರದಾದರು. ಎಲ್ಲ ವಿಧದಿಂದಲೂ ನಾನು ಏಕಾಂಗಿಯಾದೆ. ಬಾಳ ಕಡಲಿನ ಈಜಾಟದ ಆರಂಭದ ಹಂತದಲ್ಲಿ ಒಂಟಿಯಾದೆ, ಸುತ್ತೆಲ್ಲ ಕಪ್ಪುಸಮುದ್ರ ಎಂಥ ಧೈರ್ಯಶಾಲಿಯಲ್ಲೂ ಹೆದರಿಕೆ ಹುಟ್ಟಿಸುವ ಅಂಧಕಾರ ಎದೆ ಹೆಪ್ಪುಗಟ್ಟಿಸುವ ಸಮುದ್ರದ ಕೊರೆತ. ನಾನೊಬ್ಬನೆ ಈಜುತ್ತಿದ್ದೇನೆ. ಭವಿಷ್ಯದ ಬಗ್ಗೆ ಎದೆ ತುಂಬ ಹೆದರಿಕೆ. ಈಜಿ ಈಜಿ ಕೈಸೋತಿದೆ. ಮೈ ಬಳಲಿದೆ. ಇನ್ನು ಒಂದು ಅಡಿಯೂ ಮುಂದೆ ಸಾಗಲಾರೆ. ಸಮುದ್ರದಾಳಕ್ಕೆ ಮುಳುಗುತ್ತಿದ್ದೇನೆ ಆಯ್ಯೋಽಽ ಮುಳುಗಿದೆ....ಎನ್ನುವದರಲ್ಲಿಯೇ ಒಬ್ಬ ಮಹಾತ್ಮ ಕೈಹಿಡಿದೆತ್ತಿ ತೀರದತ್ತ ಒಯ್ದಂತೆ,ಬದುಕಿನ ಈಜಾಟದಲ್ಲಿ ನಿರಾಶೆಯ ಸುಳಿಗೆ ಸಿಕ್ಕಿ ಮುಳುಗುತ್ತಿದ್ದ ನನ್ನನ್ನು ಹುಬ್ಬಳ್ಳಿ ಶ್ರೀ ಜಗದ್ಗುರುಗಳವರ ಪ್ರೀತಿ, ವಿಶ್ವಾಸವು ಕೈ ಹಿಡಿದೆತ್ತಿತು. ಅವರು ನನ್ನ ಅಂತರಂಗದ ನೋವನ್ನರಿತು ಸಂತೈಸಿ ಪ್ರೀತಿ ವಾತ್ಸಲ್ಯದ ಧಾರೆಯನ್ನೆರೆದರು. ಮನೋವೇದನೆಯಿಂದ ನನ್ನನ್ನು ಮುಕ್ತನಾಗಿ ಮಾಡಲು ಕೆಲವು ದಿನಗಳ ಮಟ್ಟಿಗೆ ಶಿವಯೋಗ ಮಂದಿರಕ್ಕೆ ಕರೆದೊಯ್ದರು. ಶಿವಯೋಗ ಮಂದಿರದ ಒಂದು ಮಾಸದ ವಾಸ, ನೆನಪಿನಿಂದ ಎಂದೂ ಮಾಸದು. ಅದು ನನ್ನನ್ನು ಬಹಳಷ್ಟು ಪರಿವರ್ತಿಸಿತು. ಅಲ್ಲಿಯ ಪ್ರಶಾಂತ ಪರಿಸರ, ನಿಯಮಿತ ಜೀವನ, ಸಾತ್ವಿಕ ಆಹಾರ – ವಿಹಾರ, ಓದು, ಸಾಧಕರ ಸ್ನೇಹ ನನ್ನನ್ನು ಹೊಸ ಜೀವನದತ್ತ ಆಕರ್ಷಿಸಿದವು. ಮಂದಿರದಿಂದ ಮೂರುಸಾವಿರ ಮಠಕ್ಕೆ ತೆರಳಿದಾಗ ನನ್ನ ಒಳಗೂ ಹೊರಗೂ ತುಂಬ ಬದಲಾವಣೆ. ಈಗ ಮೊದಲಿನ ಶಾಲಾ ಬಟ್ಟೆಗಳನ್ನು ಬಿಟ್ಟು, ಲುಂಗಿ ಜುಬ್ಬವನ್ನು ಧರಿಸಿದೆ. ಆಚಾರ ವಿಚಾರಗಳಲ್ಲಿ ಬಹಳಷ್ಟು ಬದಲಾಗಿದ್ದೆ. ನನ್ನ ಈ ಹೊಸ ಜೀವನವು ಜಗದ್ಗುರುಗಳಿಗೆ ತುಂಬ ಸಂತೋಷ ತಂದಿತು. ಇನ್ನು ಮೇಲೆ ನೀವು 'ದೇವರು'–'ಸಿದ್ಧರಾಮ ದೇವರು'ಎಂದು, ಹೊಸ ಬಾಳ್ವೆ ಸಾಗಿಸಲು ಅಣಿಯಾದ ನನಗೆ ಹೊಸ ಹೆಸರಿಟ್ಟರು. ನಿಜಕ್ಕೂ ಅದೊಂದು ಪುನರ್ಜನ್ಮವೇ.

ಎಲ್ಲವೂ ಹೊಂದಿಕೆಯಾಯಿತಾದರೂ ಯಾವ ಶಾಲೆಯಲ್ಲಿ ಬಾಲಕನಾಗಿ ಓಡಾಡಿಕೊಂಡಿದ್ದೆನೋ ಅದೇ ಶಾಲೆಯಲ್ಲಿ ಈ ವೇಷದಲ್ಲಿ ಹೋಗಬೇಕಾಗಿ ಬಂದಾಗ

ಏನೋ ಸಂಕೋಚ, ನಾಚಿಕೆ. ನಾನು ಯಾಕಾದರೂ ಈ ವೇಷಧರಿಸಲು ಒಪ್ಪಿದೆನೋ ಎಂಬ ಮುಜುಗರ. ಎಲ್ಲಿ ಸಹಪಾಠಿಗಳು ಗೇಲಿ ಮಾಡುವರೋ ಎಂಬ ಹೆದರಿಕೆ, ಮೊದಲು ಕೆಲ ದಿನ ಶಾಲೆಗೆ ಹೋಗಲಿಲ್ಲ. ಕೊನೆಗೆ ಹೊಸಮಠ ಶ್ರೀಗಳ ಹಾಗೂ ಹುಬ್ಬಳ್ಳಿಜಗದ್ಗುರುಗಳ ಅಂತಃಕರಣ ವಿಶ್ವಾಸಕ್ಕೆ ಧೈರ್ಯದಿಂದ ಹೋದೆ. ಮುಂದೆ ಎಲ್ಲದಕ್ಕೂ ಹೊಂದಿಕೊಂಡೆ.

ಪ್ರತಿನಿತ್ಯ ಸಂಸ್ಕೃತ ಅಭ್ಯಾಸಕ್ಕಾಗಿ ಹೊಸಮಠಕ್ಕೆ ಹೋಗುತ್ತಿದ್ದೆ. ಹೊಸ ಮಠದ ಶ್ರೀಗಳು ಸಂಸ್ಕೃತದಲ್ಲಿ ಪಂಡಿತರು, ಲೋಕಾನುಭಾವಿಗಳು, ವಿಚಾರ ಶೀಲರು, ನ್ಯಾಯನಿಷ್ಠುರರು. ಅವರು ಓದಿದ್ದು ಸ್ವಲ್ಪ; ಸಾಧಿಸಿದ್ದು ಬಹಳ. ಯಾವದೇ ವಿಷಯವಿರಲಿ ಅದನ್ನು ಹೊಸದೃಷ್ಟಿಕೋನದಿಂದ ನೋಡಿ ಹೊಸದಾಗಿ ಪರಿವರ್ತಿಸುವ ಕಲೆ ಅವರಿಗೆ ರಕ್ತಗತ. ಕೆಲಸದಲ್ಲೂಅಷ್ಟೇ ದಕ್ಷತೆ ಒಂದು ಕೆಲಸ ಆಗಬೇಕು ಎಂದು ಮನಸ್ಸಿನಲ್ಲಿ ಬಂದರೆ ಸಾಕು, ಏನೇ ಕಷ್ಟ ನಷ್ಟ ಬಂದರೂ ಪರಿಗಣಿಸದೇ ಪೂರೈಸಿಬಿಡುವ ಪಣ, ಗುಣ ಅವರದು. ಅವರ ಪ್ರತಿನಿತ್ಯ ಪಾಠದಲ್ಲಿ ಜೀವನ ಪಾಠವೇ ಹೆಚ್ಚಾಗಿರುತ್ತಿತ್ತು.

ನನ್ನ ಬಾಳು ಬೇರಿಗೆ ನೀರುಗೊಬ್ಬರವನ್ನಿತ್ತು ಕಾಪಾಡಿದ ಇನ್ನೊಂದು ಅಂತಃ ಕರಣದ ಹಸ್ತ ಶ್ರೀಮಠದ ಕೋಠಿ ಜೋಲಿಯ ಸೊಲಬಪ್ಪಜ್ಜ. ನನ್ನ ಬದುಕಿನಂಗಳದಲ್ಲಿ ಬಹುಕಾಲ ಅಚ್ಚೊತ್ತಿ ಉಳಿಯುವ ವ್ಯಕ್ತಿ ಆತ. ಮೂರುಸಾವಿರಮಠದ ಏಳ್ಗೆಗಾಗಿ ತನ್ನನ್ನು ಸಮರ್ಪಿಸಿಕೊಂಡ ಮಹಾಜೀವ. ದೇವರು ಎಲ್ಲಿದ್ದಾನೆ ಯೆಂದರೆ ದೇವರಂಥ ಮನುಷ್ಯನಲ್ಲಿ,ಅನ್ನುವದಾದರೆ ಅಜ್ಜ ದೇವರಂತಹ ಮನುಷ್ಯ. ಆ ಅಂತಃಕರಣ, ಪ್ರೀತಿ,ಕಳಕಳಿ ಯಾರಲ್ಲಿ ಸಿಕ್ಕೀತು! ಶ್ರೀಮಠದ ಸೇವೆಗೆ ಅವನಿಗೆ: ಹಗಲು ರಾತ್ರಿ ಎರಡು ಅಷ್ಟೇ. ಊಟ ನಿದ್ರೆ ಯಾವಾಗ ಮಾಡುತ್ತಿದ್ದನೋ ಸದಾ ಕೆಲಸ. ಎಲ್ಲದರ ಬಗ್ಗೆಯೂ ಗಮನ. ಮಠದ ಸಂಪತ್ತು ಅವನ ಕೈಯಲ್ಲಿ ಇದ್ದರೂ ಒಂದು ದಿನ ಅಹಂಕಾರದಿಂದ ಬೀಗಲಿಲ್ಲ. ನಾನು ಸ್ವಾಮಿಯ ಸೇವಾಧಾರಿ ಎಂಬುದನ್ನು ಮರೆಯಲಿಲ್ಲ. ನಮ್ಮಂಥ ಸಾಧಕರು ಅವನ ವಾತ್ಸಲ್ಯದ ಅಂತಃಕರಣ ಸವಿಯನ್ನುಂಡಿದ್ದಾರೆ. ಅಂಥ ಕಕ್ಕುಲತೆ, ತ್ಯಾಗ, ನಿಸ್ಪೃಹತೆ, ಸೇವಾಜೇಷ್ಠತೆ ಯುಳ್ಳ ಮತ್ತೊಬ್ಬ ವ್ಯಕ್ತಿಯನ್ನು ನಾನು ಇನ್ನೂ ಕಾಣಬೇಕಾಗಿದೆ.

## ಸಾಧಕ

ಸಂಘದ ನನ್ನ ಸಾಧಕ–ಜೀವನವು ಅವಿಸ್ಮರಣೀಯ. ಸಾಧಕ ಜೀವನದ ಪ್ರಾರಂಭದ ದಿನಗಳಲ್ಲಿ ಮೌನವೇ ನನ್ನ ಜತೆ. ಮಾತನಾಡಿದರೂ ಅದು 'ಟೆಲಿಗ್ರಾಫಿಕ್ ಭಾಷೆ'ಯಲ್ಲಿ. ಹತ್ತು ಮಾತಿಗೆ ಒಂದು ಮಾತು. ಮಾತು ಬರದ ಮೂದೇವಿ, ಅಹಂಕಾರಿಯೆಂದು ಜೊತೆಯವರು ಹಂಗಿಸುತ್ತಿದ್ದರು. 'ಮಠದಲ್ಲಿ ಓಡಾಡಿಕೊಂಡಿದ್ದ ಹುಡುಗ, ಇವನೆಂಥ ಸ್ವಾಮಿಯಾಗುತ್ತಾನೆ, ಒಂದು ತಿಂಗಳ ಮಂದಿರದಲ್ಲಿದ್ದ ಮಾತ್ರಕ್ಕೆ ಸ್ವಾಮಿತ್ವ ಬರುವದೇ ?' ಎಂಬ ಕಟಕಿ ಮಾತನ್ನು ಕೇಳಿ ಚೇಳು ಕುಟುಕಿದಂಥ ವೇದನೆ; ವ್ಯಥೆ ಹೃದಯವನ್ನು ಹಿಂಡುತ್ತಿದ್ದರೂ

ಮಾತನಾಡುವ ಛಾತಿಯಿಲ್ಲದೆ ಇರುಳೆಲ್ಲ ಅತ್ತು ತಲೆದಿಂಬು ತೊಯ್ಯುತ್ತಿತ್ತು. ಹಾಸಿಗೆ ಹೊದಿಕೆಗಳಿಗೆ ಮಾತು ಬಂದಿದ್ದರೆ ಅವು ನನ್ನ ವೇದನೆಯನ್ನು ನನಗಿಂತ ಚೆನ್ನಾಗಿ ಹೇಳಬಹುದಿತ್ತು. ಇಂಥ ಕಾಲದಲ್ಲಿ ನನಗೆ ಆಶ್ರಯವಾಗಿ ನಿಂತ ಸ್ನೇಹಿತ ಪುಸ್ತಕ. ಮುಂಚಿನಿಂದಲೂ ಓದುವ ಷೋಕಿ, ಕೈಗೆ ಸಿಕ್ಕ ಕಾಗದವನ್ನೆಲ್ಲ ಓದುವ ಚಟ. ಅದುವೇ ನನಗೆ ನೋವು ಮರೆಯಲು ಸಹಾಯಕಾರಿ. ಹಳೇ ಪುಸ್ತಕ ವ್ಯಾಪಾರಿಗಳಲ್ಲಿ ಕಡಿಮೆ ದರದಲ್ಲಿ ಕಸ್ತೂರಿ, ಕಥೆ, ಕಾದಂಬರಿಗಳನ್ನು ತಂದು ಓದುತ್ತಿದ್ದೆ. ಓದು ವಿಶಾಲವಾದಂತೆ ಚಿಂತನ ಹೆಚ್ಚಾದಂತೆ ನನ್ನಲ್ಲಿ ಸ್ಥೈರ್ಯ, ಧೈರ್ಯ, ಆತ್ಮವಿಶ್ವಾಸಗಳು ಮೂಡತೊಡಗಿದವು. ಓದಿ ಅರಗಿಸಿಕೊಂಡದ್ದನ್ನು ಆಚರಣೆಗೆ ತರಲು ಪ್ರಯತ್ನಿಸುತ್ತಿದ್ದೆ. ಆ ಸಾಧನೆಯಲ್ಲಿಯ ತೃಪ್ತಿ ನನಗೆ ಉಳಿದೆಡೆ ಎಲ್ಲೂ ಸಿಕ್ಕುತ್ತಿರಲಿಲ್ಲ. ಹೀಗಾಗಿ ಓದು ನನಗೊಂದು ಹುಚ್ಚಾಯಿತು. ಹೊಟ್ಟೆ ಬಟ್ಟೆ ಕಟ್ಟಿ ಸಂಗ್ರಹಿಸಿದ ಪುಸ್ತಕಗಳು-ಎರಡು–ಮೂರು ಸಾವಿರ. ಸಾಧಕ ಜೀವನದಲ್ಲಿಯ ಈ ಜ್ಞಾನರಾಶಿಯನ್ನು ಕೂಡಿಡುವ ಕಲೆ ನನ್ನ ಬೆಳವಣಿಗೆಗೆ ಇನ್ನಷ್ಟು ಬಲವನ್ನು ನೀಡಿತು.

ನನ್ನ ಬಾಳನ್ನು ತಿದ್ದಿದವುಗಳಲ್ಲಿ ನನ್ನ ಪ್ರತಿನಿತ್ಯದ ವಾಯು ವಿಹಾರವೂ ಒಂದು. ಆಹಾರ ತಪ್ಪಿಸಿದರೂ ವಿಹಾರ ತಪ್ಪಿಸುತ್ತಿರಲಿಲ್ಲ. ಕೇಶ್ವಾಪೂರ ರೋಡಿನಿಂದ ನಗರ ಬಿಟ್ಟು ಐದಾರು ಮೈಲು ದೂರ ಹೋಗುತ್ತಿದ್ದೆ. ಅಲ್ಲೊಂದು ಮೈಲುಗಲ್ಲು, ಅದುವೇ ನನ್ನ ವಿಶ್ರಾಂತಿ ತಾಣ. ಅಲ್ಲಿ ಕುಳಿತು ಅನೇಕ ರೀತಿಯಾಗಿ ವಿಚಾರಿಸಿದ್ದುಂಟು; ಮೌನ ಚಿಂತನೆಗೆ ಆ ಸ್ಥಳ ತುಂಬ ಪ್ರಶಸ್ತವಾಗಿತ್ತು. ಈ ವಾಯು–ವಿಹಾರ ನನಗೆ ಶಾರೀರಿಕ ಹಾಗೂ ಮಾನಸಿಕ ಬಲವನ್ನು ನೀಡಿತು. ಹಲವಾರು ಆದರ್ಶಗಳನ್ನು ಕಲಿಸಿತು. ಆ ಆದರ್ಶಗಳ ಸಾಧನೆಗಾಗಿ ಹಗಲಿರುಳೂ ಯತ್ನಿಸಿದೆ. ಹುಬ್ಬಳ್ಳಿ ಮಠಕ್ಕೆ ಬಂದ ಅತಿಥಿಗಳ ಸೇವೆ ಮಾಡುತ್ತಿದ್ದೆ. ಶ್ರೀ ಮಠಕ್ಕೆ ನಾಡಿನ ನಾನಾ ಮೂಲೆಗಳಿಂದ ಸಾಹಿತಿಗಳು, ಕವಿಗಳು, ಕಲಾವಿದರು, ರಾಜಕಾರಣಿಗಳು, ಬಡವರು, ಬಲ್ಲಿದರು, ಭಾವುಕರು ಎಲ್ಲ ರೀತಿಯ ಜನರು ಬರುತ್ತಿದ್ದುದರಿಂದ ಕ್ರಮೇಣ ಅವರೊಡನೆ ಸಂಪರ್ಕಿಸಿದಂತೆ ಬದುಕನ್ನು ಹತ್ತಿರವಾಗಿ ನೋಡುವ ದೃಷ್ಟಿ ಬಂದಿತು. ನಗರದ ಖ್ಯಾತ ಭಾವುಕ ಕವಿ ವಾಲಿ ಗಂಗಪ್ಪನವರ, ಹೆಬಸೂರ ಮಾಸ್ತರರ ಹಾಗೂ ಸಾಹಿತ್ಯ ಮಂಟಪದ ಕವಿಗಳ ಪರಿಚಯ ಬಂದಂತೆ ನನ್ನಲ್ಲಿ ಮಾತನಾಡುವ ಧೈರ್ಯ ಹೆಚ್ಚಾಗಹತ್ತಿತು.

## ಬೋಧಕ

ಹಂತಹಂತವಾಗಿ ವರ್ಷದಿಂದ ವರ್ಷಕ್ಕೆ ನನ್ನ ಬೆಳವಣಿಗೆ ಕಂಡ ಜಗದ್ಗುರುಗಳಿಗೆ ತುಂಬ ತೃಪ್ತಿ. ಅವರ ಜತೆ ಮಾತನಾಡುವದೆಂದರೆ ಭಯ. ಎದುರು ನಿಂತು ಮಾತನಾಡುವದೇ ಕಷ್ಟ ಎಂದುಕೊಂಡಿರುವಾಗ ಅವರ ವಾತ್ಸಲ್ಯ, ಅಂತಃಕರಣ, ವಿಶ್ವಾಸವು ಮೈಛಳಿ ಬಿಡಿಸಿತು. ನಿಧಾನವಾಗಿ ಅವರೆದುರು ಪ್ರವಚನ ಮಾಡತೊಡಗಿದೆ. ಪ್ರತಿ ಪ್ರವಚನಕ್ಕೂ ಅವರಿಂದ ಸಿಕ್ಕ 'ಶಹಬಾಸ್' ಗಿರಿಯಿಂದ ನಾನು ತುಂಬ

ಉತ್ಸಾಹಿತನಾದೆ. ಅವರ ಜತೆ ಕಾರ್ಯಕ್ರಮಗಳಿಗೆ ಹೋಗಲು ಪ್ರಾರಂಭಿಸಿದೆ. ಮಗುವಿನಂತಹ ಸ್ವಭಾವವಿದ್ದವರು ಮಹಾಪುರುಷರು ಎಂದು ಹೇಳುವದುಂಟು. ನಾನು ಹುಬ್ಬಳ್ಳಿ ಜಗದ್ಗುರುಗಳಲ್ಲಿ ಕಂಡದ್ದು ಮಗುವಿನಂತಹ ಸರಳತೆ,ನಿರ್ಮಲತೆ. ಇಂದಿನವರೆಗೂ ಅವರು ಯಾರಿಗೂ ಬಿರುಸು ಮಾತನಾಡಿದ್ದನ್ನೂ, ಒಬ್ಬರ ಮೇಲೆ ಕೋಪಗೊಂಡಿದ್ದನ್ನೂ ಕಂಡಿಲ್ಲ. ನಾವು ದೊಡ್ಡವರು, ಜಗದ್ಗುರುಗಳು ಎಂಬ ಅಹಂಕಾರದಿಂದ ಗಾವುದ ದೂರವಿದ್ದು ಎಲ್ಲರ ಜತೆ ಸರಳವಾಗಿ ನಡೆದುಕೊಳ್ಳುತ್ತಾರೆ. ಅವರ ಕಾರ್ಯತತ್ಪರತೆ, ಮನೋದಾರ್ಢ್ಯ, ಎಲ್ಲರಲ್ಲಿ ಬೆರೆತುಕೊಳ್ಳುವ ರೀತಿ ತಮಗೆ ಅಸೂಯೆ ಪಟ್ಟವರನ್ನು ನಿರಸೂಯತೆಯಿಂದ ಕಾಣುವ ಗುಣ, ಅವರನ್ನು ತುಂಬ ದೊಡ್ಡವರನ್ನಾಗಿ ಮಾಡಿದೆ. ಅವರಿಗೆ ಸದಾ ಕೆಲಸಬೇಕು. ಇವರ ಕೈಯಲ್ಲಿ ಕೆಲಸ ದಣಿದೀತೆ ಹೊರತು, ಇವರು ದಣಿದದ್ದಿಲ್ಲ. ಇಂಥ ದಿವ್ಯ ಚೇತನ ಎದುರಿಗಿರುವಾಗ ಸಾಧನೆ ಸಫಲವಾಗುವದರಲ್ಲಿ ಸಂದೇಹವೇನು ? ನಾನು ಬೆಳೆಯುತ್ತ ಹೋದಂತೆ ಬಾಳು ನನಗೆ ಹೊಸಹೊಸ ಪಾಠಗಳನ್ನು ಕಲಿಸಿತು. ಅರಿವೇ ಗುರುವಾಯ್ತು. ನಿರಂತರ ಓದು ಬದುಕಿನ ಚಿಂತನ ಮಂಥನ ಬದುಕಿನ ಹತ್ತು ಮುಖದ ಸಂದರ್ಶನ ನನ್ನನ್ನು ಬಹಳಷ್ಟು ತಿದ್ದಿದವು. ನಾನು ಕಂಡುಂಡ ಅನುಭವಗಳನ್ನೇ ಹಲವಾರು ಮಾಧ್ಯಮದಲ್ಲಿ ಹೇಳುತ್ತಿದ್ದುದರಿಂದ ಉತ್ತಮ ಬೋಧಕನೆನಿಸಿದೆ.

## ವ್ಯವಸ್ಥಾಪಕ

ಶ್ರೀ ಜಗದ್ಗುರುಗಳ ನಿಕಟ ಸಂಪರ್ಕ ಬಂದಂತೆ 'ಪರಂಜ್ಯೋತಿ' ಹಾಗೂ ಸಂಘದ ವ್ಯವಸ್ಥಾಪಕನಾಗಿ ತುಂಬ ಪರಿಶ್ರಮ ಪಟ್ಟೆ. 'ಪರಂಜ್ಯೋತಿ' ಮಾಸಪತ್ರಿಕೆ ನನಗೆ ಬಹಳಷ್ಟು ಕಲಿಸಿತು. ಕಲಿಯಬೇಕೆಂಬ ನನ್ನ ಕುತೂಹಲ ಪ್ರಿಂಟಿಂಗ್ ಕಲಿಸಿತು. ಪರಿಣತ ಪ್ರಿಂಟರನ ಕುಶಲತೆ ಬಂದನಂತರ ಅದನ್ನು ಬಿಟ್ಟೆ. ಕಂಪೋಜ ಕಲಿಯಲು ಪ್ರಯತ್ನ ಪಟ್ಟೆ, ಅದು ನನ್ನದಲ್ಲವೆನಿಸಿತು.

ಪರಂಜ್ಯೋತಿಯಲ್ಲಿ 'ಸಾಧಕ' 'ಬಂಡುಣಿ' 'ಪ್ರತ್ಯಕ್ಷದರ್ಶಿ' ಹೆಸರಿನಿಂದ ಲೇಖನಗಳನ್ನು ಬರಯುತ್ತಿದ್ದೆ. ಈ ಕಾರ್ಯದಲ್ಲಿ ಶ್ರೀ ಸನ್ನಿಧಿಯವರ ಮಾರ್ಗದರ್ಶನ, ಇನ್ನೊಬ್ಬ ಸಹೃದಯಿ ಶ್ರೀ ಹುಲ್ಯಾಳರ ಸಹಾಯ ನೆನೆಯುವಂತಹದು. ಇದೇ ಅವಧಿಯಲ್ಲಿ ಬಂದ ಶ್ರೀ ಜಗದ್ಗುರುಗಳವರ ದ್ವಾದಶ ವಾರ್ಷಿಕೋತ್ಸವ ಸಮಾರಂಭದಲ್ಲಿ ಎರಡು ತಿಂಗಳವರೆಗೆ ಪ್ರೆಸ್ ಹಗಲು ರಾತ್ರಿ ದುಡಿಯಿತು. ಹನ್ನೆರಡು ಪುಸ್ತಕಗಳಲ್ಲಿ ಒಂಬತ್ತು ಪುಸ್ತಕ, ದೊಡ್ಡ ಗಾತ್ರ ವಿಶೇಷ ಸಂಚಿಕೆ ಪರಂಜ್ಯೋತಿ ಪ್ರೆಸ್ಸಿನಲ್ಲಿ ಅಚ್ಚುಗೊಂಡವು. ಶ್ರೀ ಮಠದಲ್ಲಿ ಹನ್ನೊಂದು ವರ್ಷದ ಇರುವಿಕೆ ನನ್ನನ್ನೂ ಮಠದ ಮಗುವನ್ನಾಗಿ ಮಾಡಿತ್ತು. ಮಠದ ಕೆಲಸವು ಕೆಲಸ ಎನ್ನುವಷ್ಟು ತಾದಾತ್ಮತೆ ಬಂದಿತು. ಪಾಠಶಾಲೆಯಿರಲಿ ಪ್ರೆಸ್ ಇರಲಿ, ಬೋರ್ಡಿಂಗ್ ಇರಲಿ,ಸಂಘ ಇರಲಿ,ಹಾಸ್ಟೇಲ್ ಇರಲಿ ಎಲ್ಲೆಡೆಯೂ ಲಕ್ಷ್ಯ.ಬಂದು ಹೋದವರ ಬಗ್ಗೆಯೂ ಆಸ್ಥೆ, ಅಕ್ಕರೆ. ಸನ್ನಿಧಿಯವರ ಪತ್ರವ್ಯವಹಾರದ ಕಾರ್ಯ

ಎಲ್ಲದರಲ್ಲಿಯೂ ತ್ರಿಕರಣಪೂರ್ವಕ ದುಡಿದೆ. ನನ್ನನ್ನು ಅರ್ಥಮಾಡಿಕೊಂಡ ಶ್ರೀಗಳು ನನ್ನ ಸಲಹೆ ಸೂಚನೆಗಳಿಗೆ ಅಸ್ತು ಎನ್ನುತ್ತಿದ್ದರು. ಒಂದೊಂದು ಸಲ ವೈಚಾರಿಕ ಭಿನ್ನತೆಯೂ ಬರುತ್ತಿತ್ತು. ಆಗಿನ ಅವರ ವರ್ತನೆ ತುಂಬಾ ದೊಡ್ಡದು. ನನ್ನ ಮೇಲೆ ತಮ್ಮ ಅಭಿಪ್ರಾಯದ ಒತ್ತಡವನ್ನು ಎಂದೂ ಹೇರಲಿಲ್ಲ. ಇದು ಕಂಡವರಿಗೆ ಬಾರದು.

## ಸಂಘದ ವ್ಯವಸ್ಥೆ

ಲಿಂಗವಂತ ಧರ್ಮದ ಯಾವದೇ ಮಠದ ಉತ್ತರಾಧಿಕಾರಿಗೆ ಸಂಘದಲ್ಲಿ ಪ್ರವೇಶವಿದೆ. ಉತ್ತರಾಧಿಕಾರಿಗಳಲ್ಲದವರ ಸಂಖ್ಯೆ ಕಡಿಮೆ. ಸಂಘದಲ್ಲಿ ಒಂದರಿಂದ ಇಪ್ಪತ್ತು ಸದಸ್ಯರಿರುವದುಂಟು. ಹಿರಿಯ ಸಾಧಕರೇ ಸಂಘದ ಮೇಲ್ವಿಚಾರಕ, ಸಂಚಾಲಕರು. ಈ ನೇಮಕ ಸಂಘದ ಮಹಾಪೋಷಕರಾದ ಶ್ರೀ ಜಗದ್ಗುರುಗಳಿಂದ ಸಾಧಕರ ಒಪ್ಪಿಗೆಯ ಮೇರೆಗೆ ನಡೆಯುತ್ತಿದೆ.

ಪ್ರತಿನಿತ್ಯ ಪ್ರಾತಃಕಾಲ ೪-೩೦ ಗಂಟೆಗೆ ಸಾಮೂಹಿಕ ಪ್ರಾರ್ಥನೆ ಮತ್ತು ಅಧ್ಯಯನ. ೬ ಗಂಟೆಗೆ ಸಂಚಾಲಕರ ನಿರ್ದೇಶನದಲ್ಲಿ ಯೋಗಾಸನ. ಮಧ್ಯಾಹ್ನ ೧೨ ಗಂಟೆಗೆ ಸ್ನಾನ, ಪೂಜೆ, ಪ್ರಸಾದ. ಸಾಯಂಕಾಲ ಶಿವಾನುಭವ ಶಾಸ್ತ್ರ, ಪ್ರವಚನ. ಸರದಿಯಂತೆ, ಹದಿನೈದು ದಿನಗಳಿಗೊಮ್ಮೆ ನಡೆಯುವ ಪಾಕ್ಷಿಕ ಸಭೆಯಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯಗಳಿಗೆ ಸಂಬಂಧಿಸಿದ ಉಪನ್ಯಾಸ. ವರ್ಷಕ್ಕೊಂದು ಕೈಬರಹದ ಸಂಪುಟ, 'ಧರ್ಮತರಂಗಿಣಿ' ಸಂಘದ ಸಾಧನೆಗೆ ಸಾಕ್ಷಿ.

ಪ್ರತಿವರ್ಷ ಲಿಂ. ಹಾನಗಲ್ ಕುಮಾರ ಶಿವಯೋಗಿಗಳ ಪುಣ್ಯ ದಿನಾಚರಣೆ ಸಂದರ್ಭದಲ್ಲಿ ಸಂಘದ ವಾರ್ಷಿಕೋತ್ಸವ. ಅಂದು ಸಾಧಕರು ಪಠ್ಯೇತರ ಚಟುವಟಿಕೆಗಳ ಪ್ರದರ್ಶನಕ್ಕೊಂದು ಸದವಕಾಶ. ಸಂಘಕ್ಕಾಗಿ ಪ್ರತ್ಯೇಕ ಕಾರ್ಯಾಲಯ. ಪ್ರತಿ ಮೂರು ನಾಲ್ಕು ಜನ ಸಾಧಕರಿಗೊಂದು ಒಪ್ಪ ಓರಣದಿಂದ ಒಡಗೂಡಿದ ಕೋಣೆ, ಸ್ನಾನದ ಮನೆ, ಪೂಜಾ ಮನೆ. ದಿನಕ್ಕೆರಡು ಹೊತ್ತು ಸತ್ವಪೂರ್ಣ ಆಹಾರ. ವಿವಿಧ ವಿಷಯಗಳನ್ನು ಕುರಿತು ಸಹಸ್ರ ಗ್ರಂಥಗಳ ದೊಡ್ಡ ಗ್ರಂಥಾಲಯ. ದಿನಪತ್ರಿಕೆ, ನಿಯತಕಾಲಿಕೆಗಳ ವಾಚನಾಲಯ, ಗೋಶಾಲೆ, ಹೂತೋಟ, ತರಕಾರಿತೋಟ, ಯೋಗಮಂದಿರ, ಸಭೆ ಸಮ್ಮೇಳನಗಳಿಗೆ ಶಿವಾನುಭವ ಮಂಟಪ, ಪ್ರಿಂಟಿಂಗ್ ಪ್ರೆಸ್, ಪರಂಜ್ಯೋತಿ ಮಾಸಪತ್ರಿಕೆ. ಒಟ್ಟಿನ ಮೇಲೆ ಸಂಘದಲ್ಲಿ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಬೇಕಾದ ಎಲ್ಲ ಅವಕಾಶಗಳನ್ನು ಕಲ್ಪಿಸಲಾಗಿದೆ. ಈ ಅವಕಾಶವನ್ನೆಲ್ಲ ಸದುಪಯೋಗ ಪಡಿಸಿಕೊಂಡೆ ಎಂಬುದು ಎಂಥ ಅಭಿಮಾನ !

ಸಂಘದ ಸಾಧಕರಲ್ಲಿ ಎರಡು ವರ್ಗ. ಸಂಸ್ಕೃತ ಅಭ್ಯಾಸದವರು ಒಂದಾದರೆ, ಇನ್ನೊಂದು ಇಂಗ್ಲೀಷ ಅಭ್ಯಾಸಿಗಳದು. ಸಂಸ್ಕೃತ ಅಭ್ಯಸಿಸುವ ಸಾಧಕರು ಕಲಕತ್ತ, ಮೈಸೂರು ಸಂಸ್ಕೃತ ಪರೀಕ್ಷೆಗಳನ್ನು ಕಟ್ಟಬೇಕು. ಮಠದಲ್ಲಿ ನಡೆಯುವ ಶಾಸ್ತ್ರ, ಪುರಾಣ ಪ್ರವಚನ ಅಧ್ಯಯನಗಳಲ್ಲಿ ಭಾಗವಹಿಸಬೇಕು. ಗಾಯನದಲ್ಲಿ

ಆಸಕ್ತಿ ಇದ್ದವರಿಗೆ ಸಂಗೀತ ಪಾಠವೂ ಉಂಟು. ಇಂಗ್ಲೀಷ ವಿಭಾಗದ ಸಾಧಕರು ತಮ್ಮ ಹೈಸ್ಕೂಲ ಕಾಲೇಜು ಅಥವಾ ವಿಶ್ವವಿದ್ಯಾಲಯದ ಅಭ್ಯಾಸದೊಂದಿಗೆ ಸಂಸ್ಕೃತವನ್ನೂ ಕಡ್ಡಾಯವಾಗಿ ಕಲಿಯಬೇಕು. ಆಚಾರ, ವಿಚಾರ, ಸೇವಾಭಾವ, ಇವು ಎರಡೂ ವರ್ಗದವರು ಪಾಲಿಸಬೇಕಾದ ಸಾಮಾನ್ಯ ನಿಯಮಗಳು. ಆಚಾರ ಶೀಲರಾಗಬೇಕು ಎಂದಾಗ ಆಚಾರವೆಂದರೆ ಬರೀ ಸಾಂಪ್ರದಾಯಿಕ ನಡೆಯಲ್ಲ. ಆಚಾರವೆಂದರೆ ನಡೆ, ಒಳ್ಳೆಯ ನಡೆ, ಸ್ವಾವಲಂಬನದ ನಡೆ. ಸಾಧಕ ಬ್ರಹ್ಮ ಚಾರಿಯಾಗಿರಬೇಕು. ತಣ್ಣೀರು ಸ್ನಾನ ಮಾಡಬೇಕು. ಹಿರಿಯ ಸಾಧಕರು ಸಂಜೆ ಮುಂಜಾವುಗಳಲ್ಲಿ ಎರಡು ಹೊತ್ತು ಸ್ನಾನ ಮಾಡಬೇಕು. ಪ್ರತಿನಿತ್ಯ ಕೆಲ ಸಮಯ ವಾದರೂ ಧ್ಯಾನ, ಲಿಂಗಾರ್ಚನೆ ಆಧ್ಯಾತ್ಮಿಕ ಸಾಧನೆಯಲ್ಲಿ ಕಾಲಕಳೆಯಬೇಕು. ತನ್ನ ಬಟ್ಟೆಗಳನ್ನು ತಾನೆ ತೊಳೆದುಕೊಳ್ಳಬೇಕು. ಕೊಠಡಿಯನ್ನು ಸ್ವಚ್ಛವಾಗಿ ಇಟ್ಟುಕೊಳ್ಳಬೇಕು. ಸಂಚಾಲಕರಿಗೆ ವಿಧೇಯನಾಗಿದ್ದುಕೊಂಡು, ಶ್ರೀಮಠದ ಸೇವೆ ಸಲ್ಲಿಸುತ್ತಿರಬೇಕು. ಸಂಘದ ವಿಚಾರ ಸಂಕಿರಣ, ಸಭೆ, ಸ್ಪರ್ಧೆಗಳಲ್ಲಿ ಕಡ್ಡಾಯವಾಗಿ ಭಾಗವಹಿಸಬೇಕು. ಪಠ್ಯೇತರ ಚಟುವಟಿಕೆಗಳು ಆಶ್ರಮೋಚಿತ ವಾಗಿರಬೇಕು. ಮೇಲು ಕೀಳು ಭಾವವಿಲ್ಲದೆ ಸೇವೆಗೈಯಬೇಕು. ಈ ವ್ಯವಸ್ಥೆ ಹಲವು ಹನ್ನೆರಡು ಭಾಗದಿಂದ ಬಂದ ನಮ್ಮನ್ನು ಬೌದ್ಧಿಕವಾಗಿ, ಮಾನಸಿಕವಾಗಿ, ಸ್ನೇಹತಂತುವಿನಿಂದ ಬಿಗಿಯುತ್ತಿತ್ತು.

## ಸ್ನೇಹ–ರಂಗ

ನನ್ನ ಸಂಘ ಜೀವನದ ಅಪೂರ್ವತೆ ಇರುವದು ಸಾಗಳಿಸಿದ ಸ್ನೇಹ ರಂಗ ದಲ್ಲಿ. ಪ್ರಾರಂಭದಲ್ಲಿ ಕೆಲ ವರ್ಷಗಳನ್ನು ಬಿಟ್ಟರೆ ಇತ್ತೀಚಿನ ೪–೫ ವರ್ಷಗಳ ಜೀವನ ಅದೊಂದು ಜೇನು ತೊಟ್ಟಿ, ರಸಘಟ್ಟಿ. ಹೆಚ್ಚು ಕಡಿಮೆ ಸಮ ವಯಸ್ಸಿನ ಸಮಾನ ವಿಚಾರದ ನಮ್ಮಲ್ಲಿ ವಿದ್ಯಾರ್ಥಿ ಜೀವನದ ಸಾಮಾನ್ಯವಾದ ಅಸೂಯೆ, ಮಾತ್ಸರ್ಯ ಎಂದೂ ಕಾಣಲಿಲ್ಲ. ಹೊರಗಿನವರು ಅದನ್ನು ಬಿತ್ತಿದರೆ ಮೊಳಕೆ ಯೊಡೆಯಗೊಡುತ್ತಿರಲಿಲ್ಲ. ಚಿಕ್ಕವ, ದೊಡ್ಡವ, ಧನಿಕ, ಬಡವ, ಹಳಬ, ಹೊಸಬ, ಎಂಬ ಭಾವ ನಮ್ಮಿಂದ ತುಂಬ ದೂರ. ವಾರದಲ್ಲಿ ಒಂದು ದಿನವಾದರು ಸಾಹಿತ್ಯ-ವಾಚನ, ಧರ್ಮ, ಸಾಮಾಜಿಕ ಚಿಂತನ, ವಾದ-ವಿವಾದ ನಡೆಯುತ್ತಿತ್ತು. ಈ ಚರ್ಚೆಗಳು ಪರಸ್ಪರರಲ್ಲಿ ತಿಳುವಳಿಕೆಯನ್ನು ಹೆಚ್ಚಿಸಿ ನಮ್ಮನ್ನು ಮತ್ತಷ್ಟು ಹತ್ತಿ ರಕ್ಕೆ ತಂದುವೆ ಹೊರತು ಭಿನ್ನತೆಯ ಅಪಸ್ವರ ಹೊರಡಿಸಲಿಲ್ಲ. ನಮ್ಮಲ್ಲಿಯೂ ತಪ್ಪು ಗಳು ನಡೆಯುತ್ತಿದ್ದವು. ನಾವಾರೂ ಹುಟ್ಟನಿಂದಲೆ ಪರಮಹಂಸರಾಗಿರಲಿಲ್ಲ. ತಪ್ಪಿದಾಗ ಸಹಜವಾಗಿ ಅದನ್ನು ಒಪ್ಪಿ ಮುಂದೆ ಹಾಗೆ ನಡೆಯದಂತೆ ಎಚ್ಚರ ವಹಿಸುತ್ತಿದ್ದೆವು. ಎಂತಹದೆ ಸಮಸ್ಯೆಯನ್ನು ಸಮಾಧಾನವಾಗುವ ಹಾಗೆ ಪರಿ ಹರಿಸಿ ಅಲ್ಲಿ ನಗೆಯುಕ್ಕುವಂತೆ ಮಾಡುತ್ತಿದ್ದೆವು.

ಸಮ ವಯಸ್ಸಿನ ಸಮಾನ ವಿಚಾರ ಧೋರಣೆಯ ಹಿರಿಯ ಸಾಧಕರ ನಮ್ಮ 'ಟೀಮು' ಬಲು ಸುಂದರವಾಗಿತ್ತು. ನಮ್ಮಲ್ಲಿಯ ಆ ಒಡನಾಟ, ಮಾತುಕತೆಯ

ರಸ ನಿಮಿಷಗಳನ್ನು ಶಬ್ದದಲ್ಲಿ ಹಿಡಿದಿಡುವದು ಅಸಾಧ್ಯ. ನಾನು ಏನಾದರೂ ಹೊಸ ಸಾಹಿತ್ಯಿಕ, ಸಾಮಾಜಿಕ, ಧಾರ್ಮಿಕ ವಿಷಯವನ್ನು ಕುರಿತು ಹೇಳುತ್ತಿದ್ದರೆ "ದುಂಡು ಮೇಜಿನ ಪರಿಷತ್ತೇ" ನೆರೆಯುತ್ತಿತ್ತು ಲಕ್ಷಕೊಟ್ಟು ಕೇಳುವ ಆ ತನ್ಮಯತೆ ಮಧ್ಯದಲ್ಲಿ ಬರುವ ಸಲುಗೆಯ ಜೋಕು, ಆ ಹರ್ಷ, ಆ ಹುರುಪು, ಇನ್ನೆಂದು ದೊರೆತಾವು ? ಒಂದಕ್ಕಿಂತ ಒಂದು ಅಪೂರ್ವ. ಒಬ್ಬೊಬ್ಬರು ಒಂದೊಂದು ತರಹ. ಪ್ರತಿಭಾನ್ವಿತ ಮಧುರ ಮಾತುಗಾರ 'ಆನಂದಂ' (ಆನಂದಪುರ ಮಲ್ಲಿಕಾರ್ಜುನ ದೇವರು) ನಿಷ್ಕಲ್ಮಷ ಸ್ನೇಹದ 'ಶರಣ' (ಷಡಕ್ಷರಿ ದೇವರು) ಶಿಸ್ತಿನ ಜೀವನ, ಕೊಂಚ ಬಿಗುಮಾನದ ತೆಲಸಂಗದವರು (ತೆಲಸಂಗದ ಮಲ್ಲಿಕಾರ್ಜುನ ದೇವರು). ನಿಃಸ್ವಾರ್ಥ ಪ್ರವೃತ್ತಿಯ ಕಲ್ಯಾಣದ ಪ್ರಭು ದೇವರು ಕೃತ್ರಿಮವನರಿಯದ ಶಿವಕುಮಾರ ದೇವರು, ಮಹೇಶ್ವರ ದೇವರು· ಮೇಳಗಿ ಬಾಳಿಗೆ, ಆಕುಟಿಲ ಮನದ 'ಪ್ಯಾಂಟಮ್' (ರುದ್ರಾಕ್ಷಿ ಮಠದ ವಿಶ್ವನಾಥ ದೇವರು) ಶಾಂತ ಸರೋವರದಂತಹ ಕೂಡಲದೇವರು, ಹಾಲು ಹೃದಯದ ಶಿವಯೋಗಿ ದೇವರು, ಪಾರಜ ಬುದ್ಧಿಯ ಬಂಥನಾಳ ದೇವರು, ಸರಳ ಸ್ವಭಾವದ ಉಮಾಪತಿ ದೇವರು, ಸೌಮ್ಯಸ್ವಭಾವದ ಮೋರಟಗಿ ದೇವರು, ಎರಡೆತ್ತಿನ ಮಠದ ದೇವರು ನಾವೆಲ್ಲ ಒಂದೇ ಕುಟುಂಬದವರೆನ್ನುವಷ್ಟು ಅನ್ಯೋನ್ಯವಾಗಿ ಸಂಘದ ಸುವಿಶಾಲ ಸ್ನೇಹದಾಲದಡಿಯಲ್ಲಿ ಬೆಳೆದು, ಸಧ್ಯ ಒಂದೊಂದು ದಿಕ್ಕಿಗೆ ನಾವು ಹೊಂದಿದ ಸಾಧನೆ, ಸಂಸ್ಕಾರದ ಬಲದಿಂದ ಸೇವೆ ಮಾಡುತ್ತಿದ್ದೇವೆ. ಅಂದಿನ ಸ್ನೇಹ ಭಾಂದವ್ಯವನ್ನಿಂದೂ ಉಳಿಸಿಕೊಂಡಿದ್ದೇವೆ.

ನಾನು ಶ್ರೀ ಕುಮಾರೇಶ್ವರ ಸಂಘವನ್ನು ಸೇರಿದ್ದು, ಹೊಸ ಮನುಷ್ಯನಾಗಿ ಹೊಸ ಹೆಸರಿನಿಂದ. ಬಿಟ್ಟದ್ದು ಹೊಸ ಮನುಷ್ಯನಾಗಿ,ಹೊಸ ಹೆಸರಿನಿಂದ. ಸೇರುವ ಪೂರ್ವದಲ್ಲಿ ಕಾಡು ಕಲ್ಲಾಗಿದ್ದೆ, ಬಿಡುವ ಪೂರ್ವದಲ್ಲಿ ಸುಂದರ ಮೂರ್ತಿಯಾದೆ. ನನ್ನ ದೇಹ ಅಲ್ಲಿಯ ಅನ್ನದಿಂದ ಬೆಳೆದಿದೆ. ನನ್ನ ಬುದ್ಧಿ ಅಲ್ಲಿಯ ಜ್ಞಾನದಿಂದ ಬೆಳೆದಿದೆ. ಒಟ್ಟು ನಾನು ಸಂಘದ ನಿರ್ಮಾಣ.

ಇಂದು ಸಂಘದ ಚಟುವಟಿಕೆಗಳು ವಿಸ್ತಾರವಾಗಿವೆ. ಅವನ್ನೆಲ್ಲ ಕಂಡಾಗ ನಾನು ಇನ್ನೂ ಕೆಲ ದಿನವಾದರೂ ಅಲ್ಲಿ ಇರಬಾರದಾಗಿತ್ತೆ ಎನಿಸುತ್ತದೆ. ದ್ವಾದಶ ವರ್ಷದ ಈ ಸಮಾರಂಭದಂತೆಯೇ ಈ ಸಂಘವು ಶತವರ್ಷದ ಸಮಾರಂಭವನ್ನು ಏರ್ಪಡಿಸುವ ಸುಯೋಗ ಬರಲಿ; ಸಾವಿರ ವರುಷ ಸಾವಿರದೆ ಬದುಕಿ, ಧರ್ಮ, ಸಂಸ್ಕೃತಿ, ಸಮಾಜಗಳ ರಕ್ಷಣೆಗೆ ಯೋಗ್ಯ ಸ್ವಾಮಿಗಳನ್ನು ತಯಾರಿಸುತ್ತಿರಲಿ; ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಉತ್ತರೋತ್ತರ ಅಭಿವೃದ್ಧಿ ಹೊಂದಿ ಅವರ ಧರ್ಮಕೀರ್ತಿ ದಶ ದಿಕ್ಕುಗಳಲ್ಲಿ ಹರಡುವಂತೆ ಸ್ವಾಮಿ ಸಿದ್ಧಲಿಂಗನು ಅನುಗ್ರಹಿಸಲಿ ಎಂದು ತುಂಬು ಹೃದಯದೊಡನೆ ಹಾರೈಸಿ, ಲೇಖನಿಗೆ ಮಂಗಲ ಮಾಡುವೆ.





ಲೇ. : ಶ್ರೀಮ. ನಿ. ಜ. ಮಲ್ಲಿಕಾರ್ಜುನ ಮುರುಘರಾಜೇಂದ್ರ
ಮಹಾಸ್ವಾಮಿಗಳು, ಆನಂದಪುರಂ.

---

[ಚಿಕ್ಕಮಗಳೂರ ಜಿಲ್ಲೆಯ ಕಡೂರ ತಾಲೂಕಿನ ಕುನ್ನಾಳ ಗ್ರಾಮದಲ್ಲಿ ೨೯-೮-೧೯೫೨ ರಂದು ಜನಿಸಿದರು. ಸ್ವಗ್ರಾಮ ಹಾಗು ಸಖರಾಯ ಪಟ್ಟಣದಲ್ಲಿ ಮಾಧ್ಯಮಿಕ ಶಿಕ್ಷಣದ ವರೆಗೆ ಓದಿದರು. ಸ್ವಾಮಿ ಜೀವನದ ತರಬೇತಿಗಾಗಿ ಶಿವ: ಯೋಗ ಮಂದಿರದಲ್ಲಿ ಪ್ರವೇಶ ಪಡೆದರು. ಹಾನಗಲ್ಲ ಶ್ರೀಗಳವರ ನೇತೃತ್ವದಲ್ಲಿ ಸಂಸ್ಕೃತಾಧ್ಯಯನ ಮಾಡಿದರು. ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡು ಹೆಚ್ಚಿನ ಓದಿಗಾಗಿ, ಹೊಸ ವಿಚಾರ ಧಾರೆಯನ್ನು ಮೈಗೂಡಿಸಿಕೊಳ್ಳುವ ಹಂಬಲ ದಿಂದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಕಾಲೇಜ ಅಧ್ಯಯನದ ಜೊತೆಗೆ ಹಿಂದಿ, ಸಂಸ್ಕೃತ ಹಾಗು ಬೇರೆ ಬೇರೆ ಪರೀಕ್ಷೆಗಳನ್ನು ಮಾಡಿ ಕೊಂಡರು. ಇವರದು ಮಿತಮಾತು, ನಿಶಿತಮತಿ.]

ಧಾರವಾಡ, ಗದಗ, ಹುಬ್ಬಳ್ಳಿ ಮೊದಲಾದೆಡೆಗಳಲ್ಲಿ ಪುರಾಣ ಪ್ರವಚನ ಮಾಡಿದರು. ತುಂಬ ಪ್ರಸಿದ್ಧಿ ನಿಸರ್ಗಳ ರಸಪೂರ್ಣವಾಣಿ ಉಳ್ಳವರು. ಹಾಗು ಒಳ್ಳೆಯ ಲೇಖಕರಾಗಿರುವರು. ಸಂಘದ ಮಠದ ವೈವಿಧ್ಯಮಯ ಚಟುವಟಿಕೆಗಳಲ್ಲಿ ಪಳಗಿ ಪ್ರವೀಣರಾಗಿರುವರು. ಬಿ. ಎ. ಪದವಿ ಪಡೆದ ನಂತರ ಸ್ನಾತಕೋತ್ತರ

ಅಧ್ಯಯನಕ್ಕಾಗಿ ಧಾರವಾಡದಲ್ಲಿಯ ಶಾಖಾ ಮೂರುಸಾವಿರಮಠದಲ್ಲಿ ಎರಡು ವರ್ಷ ಗಳ ವರೆಗೆ ಇದ್ದು, ಎಂ. ಎ. ಪದವಿ ಪಡೆದರು. ಅವರ ಪ್ರತಿಭೆ ದಾಂಗುಡಿ ಇಟ್ಟಿತು. ಕೀರ್ತಿ ಎಲ್ಲೆಡೆ ಹರಡಿತು. ಮೂರುಸಾವಿರ ಮಠದ ಜಗದ್ಗುರುಗಳವರ ಆಶೀರ್ವಾದ ದಿಂದ ಸಿಂಗಪುರದಲ್ಲಿ ನಡೆದ ಧರ್ಮ ಹಾಗು ಶಾಂತಿ ಸಮ್ಮೇಳನದಲ್ಲಿ ಭಾಗವಹಿಸಿ ದರು. ಈ ಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದವರಲ್ಲಿ ಇವರು ತುಂಬ ಚಿಕ್ಕವರು. ವಿದೇಶದಿಂದ ಬಂದು ಕೆಲವು ದಿನಗಳ ವರೆಗೆ ವಿವಿಧ ಭಾಗಗಳಲ್ಲಿ ಧರ್ಮ ಪ್ರಚಾರ ಮಾಡಿದರು. ಅನಂತಪುರ ಮುರುಘಾಮಠದ ಶ್ರೀಮ. ನಿ. ಜ. ಸಚ್ಚಿದಾನಂದ ಮುರು ಘರಾಜೇಂದ್ರ ಮಹಾಸ್ವಾಮಿಗಳವರು ತಮ್ಮ ಮಠದ ಸರ್ವಾಧಿಕಾರವನ್ನು ನಿರ್ವ ಹಿಸಿಕೊಡಲು ತಮ್ಮ ಹಾಗು ಭಕ್ತರ ಇಚ್ಛೆಯ ಮೇರೆಗೆ ನಿರ್ಧರಿಸಿದರು. ಎಳೆಯ ವಯಸ್ಸಿನ ಬೆಳೆದ ಚೇತನಕ್ಕೆ ಮಠದ ಗುರುತರ ಹೊಣೆ ಕೈಮಾಡಿ ಕರೆಯಿತು. ಮಠದ ಕಾರ್ಯಭಾರವನ್ನು ಲೀಲಾಜಾಲವಾಗಿ ನಡೆಸಿರುವರು. ಮಲೆನಾಡಿನ ಮಹಾ ಮಠಗಳಲ್ಲಿ ಮುರುಘಾಮಠವೂ ಒಂದು. ಮಠಾಧಿಕಾರಿಗಳಾದ ನಂತರ ಕೆಲವೇ ದಿನಗಳಲ್ಲಿ ಮಠದ ಕಾರ್ಯವ್ಯಾಪ್ತಿಯನ್ನು ಹಿಗ್ಗಿಸಿರುವರು. ಅಲ್ಪಾವಧಿಯಲ್ಲಿಯೇ ಮಲೆನಾಡಿನಲ್ಲಿ ಧರ್ಮದ ಬೆಳಗು ಹೊರಡಿಸಿರುವರು. ಭವಿಷ್ಯತ್ತು ಇವರಿಂದ ಭವ್ಯತೆ ಯನ್ನು ಕಾಣಲಿದೆ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ಮಾತಿಗೆ ಇವರು ಜೀವಂತ ನಿದರ್ಶನ. ಸಂ]



# 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು'

ಶ್ರೀ ಮ. ನಿ. ಜ ಮಲ್ಲಿಕಾರ್ಜುನ ಮುರುಘ ರಾಜೇಂದ್ರ
ಮಹಾ ಸ್ವಾಮಿಗಳು ಆನಂದಪುರಂ

'ಮಹಾ ವ್ಯಕ್ತಿಯ ನಿಜವಾದ ಯೋಗ್ಯತೆ ಪ್ರಕಟವಾಗುವುದು ಸಣ್ಣ ಕಾರ್ಯಗಳ ಮೂಲಕ ಅಲ್ಲ; ಆತ ಮಹತ್ತಾದ ಕಾರ್ಯಗಳ ಹೊಣೆ ಹೊತ್ತಾಗ' ಎಂಬ ಕನ್‌ಫೂಷಿಯಸ್‌ನ ಮಾತಿಗೆ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಒಂದು ನಿದರ್ಶನ. ನಮ್ಮ ಸಮಾಜವು ಅಜ್ಞಾನಾಂಧಕಾರದಲ್ಲಿ ಮುಳುಗಿರುವಾಗ ಕೋಲ್ಮಿಂಚಿನಂತೆ ವ್ಯಕ್ತಿಯಾಗಿ ಜನಿಸಿ, ಶಕ್ತಿಯಾಗಿ ವಿಕಾಸಹೊಂದಿ, ಸಂಸ್ಥೆಯಾಗಿ ಕಾರ್ಯಗೈದರು. ವೀರಶೈವ ಧರ್ಮದ ಪ್ರಗತಿಗಾಗಿ ಸಕಲ ಜೀವಾತ್ಮರ ಲೇಸಿಗಾಗಿ ತಮ್ಮನ್ನು ಅವಲಂಬಿಸಿ ವಿಕಾಸವಾಗುವುದು ಮನುಷ್ಯಗುಣ. ವ್ಯಕ್ತಿಯು ಸಮಾಜದ ಅಂಗ. ಸಮಾಜವು ರಾಷ್ಟ್ರದ ಒಂದು ಭಾಗ. ವ್ಯಕ್ತಿಯ ಉನ್ನತಿಯು ಸಮಾಜಕ್ಕೂ, ಸಮಾಜದ ಅಭ್ಯುದಯವು ರಾಷ್ಟ್ರಕ್ಕೂ ಒಂದಕ್ಕೊಂದು ಪೂರಕ. ಈ ತತ್ತ್ವವನ್ನರಿತ ಶ್ರೀ ಕುಮಾರ ಶಿವಯೋಗಿಗಳು ಅಖಿಲ ಭಾರತ ವೀರಶೈವ ಮಹಾಸಭೆ ಸ್ಥಾಪಿಸಿ, ಸಮಾಜದ ಸಂಘಟನೆಗೆ ಬುನಾದಿ ಹಾಕಿದರು. ಆದರ್ಶ ಮಠಾಧೀಶರ ನಿರ್ಮಾಣಕ್ಕೆ ಧರ್ಮ ಸಾಹಿತ್ಯ ಸಂಸ್ಕೃತಿಗಳ ರಕ್ಷಣೆಗಾಗಿ ಶಿವಯೋಗ ಮಂದಿರ ನಿರ್ಮಿಸಿದರು. ಇವುಗಳ ಪರಿಣಾಮ ಸರ್ವಶೃತ. ಇಂತಹ ಕಾರಣಿಕ ಯುಗಪುರುಷ ದಿವ್ಯ ಧ್ಯೇಯಾದರ್ಶಗಳ ಭದ್ರ ಬುನಾದಿಯ ಮೇಲೆ ಜನ್ಮವೆತ್ತ ಸಂಘವೇ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ.

ಮಹಾನ್ ತತ್ತ್ವಜ್ಞಾನಿ ಸಾಕ್ರಟೀಸ ಒಂದಕ್ಷರ ಬರೆಯದಿದ್ದರೂ ಅವನ ಆತ್ಮೀಯ ಶಿಷ್ಯ: ಪ್ಲೇಟೊ ಆತನ ಸಿದ್ಧಾಂತವನ್ನು ವಿಶ್ವವ್ಯಾಪಕಗೊಳಿಸಿದ. ರಾಮಕೃಷ್ಣರ ತತ್ತ್ವ ವಿವೇಕಾನಂದರಿಂದ ಲೋಕಪ್ರಿಯವಾಯಿತು. ಅಂತೆಯೇ ಶ್ರೀ ಕುಮಾರೇಶ್ವರರ ಸಂಕಲ್ಪಗಳು, ಅವರ ಕರುಣೆಯ ಕಂದರೂ ಅವರ ಶಿವಯೋಗ ಮಂದಿರದಲ್ಲಿ ಅಧ್ಯಯನ ಗೈದವರೂ ಆದ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರಿಂದ ನೆರವೇರಿದವು. ವೀರಶೈವ ಧರ್ಮ ತತ್ತ್ವಗಳನ್ನು ದೇಶವಿದೇಶಗಳಲ್ಲಿ ಬಿತ್ತರಿಸಿ ಬಂದಿದ್ದಾರೆ; ವಿಶ್ವಧರ್ಮವೆಂಬ ಮಾತನ್ನು ದೃಢಪಡಿಸಿದ್ದಾರೆ. ವೀರಶೈವ ಧರ್ಮದ ಇತಿಹಾಸದಲ್ಲಿ ಹುಬ್ಬಳ್ಳಿ ಶ್ರೀ ಮೂರುಸಾವಿರ ಮಠದ ಪಾತ್ರ ಹಿರಿದಾದುದು. ಸದ್ಯದ ಶ್ರೀ ಜಗದ್ಗುರುಗಳವರು ಸುವ್ಯವಸ್ಥಿತ ಸಮಾಜ ರಚನೆಗಾಗಿ ಶ್ರಮಿಸುತ್ತಿದ್ದಾರೆ.

ಆದರ್ಶ ನೇತಾರರೆನಿಸಿದ್ದಾರೆ. ಅವರ ಆಶ್ರಯದಲ್ಲಿ ಹಲವಾರು ಸಂಘ ಸಂಸ್ಥೆಗಳು ತಲೆಯೆತ್ತಿ ನಿಂತಿವೆ. ಅವುಗಳಲ್ಲಿಯೇ ಬಹುಮುಖ್ಯವಾದುದು ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ. ಇದು ಹನ್ನೆರಡರ ಎಳೆಯ ಹರೆಯದಲ್ಲಿದ್ದರೂ ಸಾಧಿಸಿದ ಪ್ರಗತಿ ಗಮನಾರ್ಹವಾಗಿದೆ. ಇದೊಂದು ಶಿವಯೋಗಿಗಳ ತರಬೇತಿ ಕೇಂದ್ರ. ಜನತೆಗೆ ದಾರಿ ತೋರುವ ಮಠಾಧೀಶರನ್ನು ಸಮಾಜಕ್ಕೆ ನೀಡಿದೆ; ನೀಡುತ್ತಲಿದೆ. ಧರ್ಮ ಹಾಗೂ ಮಠಗಳ ಸ್ಥಾನ ಕೆಳಗಿಳಿಯುತ್ತಿರುವ ಈ ವಿಕ್ಷಿಪ್ತ ಕಾಲದಲ್ಲಿ ಧರ್ಮ ಹಾಗು ಮಠಗಳನ್ನು ಸಮರ್ಥ ರೀತಿಯಲ್ಲಿ ಎತ್ತಿ ಹಿಡಿಯುವ ಧರ್ಮದರ್ಶಿಗಳ ಅವಶ್ಯಕತೆ ಯನ್ನು ಪೂರೈಸಲು ಪಣತೊಟ್ಟು ಕಾರ್ಯಪ್ರವೃತ್ತವಾಗಿದೆ. ಯೋಗಿಗಳೆಂದರೆ ಗಿರಿ ಗಹ್ವರಗಳಲ್ಲಿರುವ ಕಾಲ ಒಂದಿತ್ತು. ಈಗ ಭಿನ್ನವಾಗಿದೆ. ಸಮಾಜದೊಡನೆ ನಿಕಟ ಸಂಪರ್ಕ ಹೊಂದಿ ಲೌಕಿಕ ಪಾರಮಾರ್ಥವೆರಡನ್ನು ಕೂಡಿ ನಡೆಸುವ ಜಾಣರಾಗ ಬೇಕಾಗಿದೆ. ಬಹು ಭಾಷಾ ಪಂಡಿತರಾಗಿ ದೇಶ ವಿದೇಶಗಳಲ್ಲಿ, ಮನೆ ಮನೆಗೂ, ಮನ ಮನಕ್ಕೂ, ಧರ್ಮ ಸಂದೇಶಗಳ ವಾಹಕರಾಗಬೇಕಾಗಿದೆ. ಈ ದಿಶೆಯ ಶಿಕ್ಷಣವು ಸಂಘದ ಸಾಧಕರಿಗೆ ದೊರೆಯುತ್ತಿದೆ. ಹುಬ್ಬಳ್ಳಿ ಶ್ರೀ ಜಗದ್ಗುರುಗಳವರ ನಿರಂತರ ಮಾರ್ಗದರ್ಶನದಲ್ಲಿ ಸಂಘ ಅತ್ಯಂತ ಜನಪ್ರಿಯವಾಗಿದ್ದು ಸಮಾಜದ ಆಶಾಕಿರಣವಾಗಿದೆ.

ಕಲ್ಯಾಣದ ಕ್ರಾಂತಿಯು ನಾಡಿನ ತುಂಬೆಲ್ಲ ಹರಡಿದ್ದ ಶರಣರನ್ನು ತನ್ನತ್ತ ಆಕರ್ಷಿಸಿದಂತೆ, ಶ್ರೀ ಸಂಘದ ದಿವ್ಯ ಧ್ಯೇಯಾದರ್ಶಗಳು ನಮ್ಮನ್ನು ಆಕರ್ಷಿಸಿದವು. ಶಿವಯೋಗಮಂದಿರ ಆಧ್ಯಾತ್ಮ ಶಿಕ್ಷಣ ಪೂರೈಸಿದ ನಂತರ ಇತರ ಉನ್ನತ ವ್ಯಾಸಂಗಕ್ಕೆ ಕಾಶಿಗೆ ಹೊರಡಬೇಕೆಂದಿದ್ದಾಗ ಶ್ರೀ ಸಂಘದ ಸಾಧಕರಾಗಿ ೧೯೬೮ ರಲ್ಲಿ ಸೇರಿದುದು ಒಂದು ಯೋಗಾಯೋಗ; ಸುಯೋಗ. ಸಂಘದ ಕಾರ್ಯಕ್ಷೇತ್ರ ವ್ಯಾಪಕವಾದುದು. ಇಲ್ಲಿ ಜ್ಞಾನ ಕ್ರಿಯೆಗಳು ಸಮನ್ವಯಗೊಂಡಿವೆ. ಸಾಧಕರ ಪುಸ್ತಕ ಜ್ಞಾನ, ಧಾರ್ಮಿಕ, ಸಾಹಿತ್ಯಿಕ ಕ್ಷೇತ್ರಗಳ ಕ್ರಿಯೆ ಇವೆರಡರ ಅನುಭವದ ಜೇಂಗೊಡ ಶ್ರೀ ಸಂಘ. ಎತ್ತಣ ಮಾಮರ ಎತ್ತಣ ಕೋಗಿಲೆಯಂತೆ ನಾವುಗಳೆಲ್ಲ ಸಂಘದ ಸಮರಸ ಜೀವನ ನಡೆಸುತ್ತಿದ್ದೆವು. ಎಲ್ಲರೂ ಸಾಧನೆಯತ್ತ ಏಕಮುಖವಾಗಿ ಪ್ರವಹಿಸುತ್ತಿ-ದ್ದುದು ವಿಶೇಷ. ಸಮಾಜ ಶಾಸ್ತ್ರದ ವಿಕಾಸ ತತ್ತ್ವದಂತೆ ಸಂಘ ಜೀವನ ಪ್ರಾಣಿ ಗಳಿಗೂ ಅನಿವಾರ್ಯವಾಗಿರುವಾಗ ಪ್ರಗತಿಪರ ಮಾನವನಿಗೆ ಅನಿವಾರ್ಯವಾಗುವಲ್ಲಿ ಅಚ್ಚರಿ ಏನು ! ಆ ದೃಷ್ಟಿಯಿಂದ ಇದು ಆದರ್ಶ ಸಂಘ.

ಸಾಧಕರ ಹಿರಿಕಿರಿತನ ವಯದಿಂದಲ್ಲ, ಅನುಭವದಿಂದ. ವಿವಿಧ ಭಾಷೆ ಸಂಸ್ಕೃತಿಗಳ ಸಾಧಕರು ಒಂದೆಡೆ ಸೇರಿದ್ದರೂ ಪರಸ್ಪರ ಅರಿವು ಒಲಿದಿತ್ತು. ಯಾವುದೇ ಭಿನ್ನತೆ ಏಕತೆಗೆ ತೊಡಕಾಗಲಿಲ್ಲ. ಕಿರಿಯರಿಗೆ ಹಿರಿಯರಿಂದ ಹಿರಿಯರಿಗೆ ಶ್ರೀ ಜಗದ್ಗುರುಗಳವರಿಂದ ಮಾರ್ಗದರ್ಶನವು ನಿರಂತರವಾಗಿ ದೊರೆಯುತ್ತಿತ್ತು. ಪ್ರತಿಯೊಬ್ಬ ಸಾಧಕರ ವೈಯಕ್ತಿಕ ಪ್ರಗತಿಯ ಬಗೆಗೂ ಅತ್ಯಂತ ಆಸ್ಥೆ ವಹಿಸುವ ವಾತ್ಸಲ್ಯ ಮೂರ್ತಿ ಶ್ರೀ ಜಗದ್ಗುರುಗಳವರದು. ಅವರ ಸರಳ ಸೌಜನ್ಯತೆ, ಕಾರ್ಯ

ಕ್ಷಮತೆ ಸಾಧಕರಿಗೆ ದಾರಿದೀಪವಾದರೆ, ಕರ್ತೃ ಜಗದ್ಗುರು ಗುರುಸಿದ್ಧೇಶನ ಪವಿತ್ರ ಪರಿಸರವು ದಿವ್ಯ ಚೇತನ. ನಿತ್ಯದ ಕಾರ್ಯ ಚಟುವಟಿಕೆಗಳು ಮಾನಸಿಕ, ಶಾರೀರಿಕ ಪ್ರಗತಿಗೆ ಪ್ರೇರಕ. ಧ್ಯಾನ, ಪೂಜಾ, ಅಧ್ಯಯನ, ಚರ್ಚಾಗೋಷ್ಠಿ, ಲೇಖನ ಸ್ಪರ್ಧೆ ಮಾನಸಿಕ ಸ್ಥಿರತೆಗೆ ನೆರವಾದರೆ, ಆಸನ, ಇತರ ಕಾರ್ಯಕ್ಷೇತ್ರಗಳ ಸಕ್ರಿಯ ಸೇವೆ ಶಾರೀರಿಕ ದೃಢತೆ ಪೋಷಕ. ವಿದ್ಯೆ ವಿನಯ ಪಾತ್ರತೆ, ಸಾಮಾಜಿಕ ಹಿತ ಚಿಂತನೆ, ಸಾಧಕರಿಗೆ ಸಹಜ ಸಿದ್ಧ 'ಅಧ್ಯಯನ ನಿರತರಾಗಿದ್ದರೂ ಸಮಾಜದ ಆಗು ಹೋಗುಗಳತ್ತ ಲಕ್ಷ್ಯ. ಪಟ್ಟಣದ ನಟ್ಟ ನಡುವಿದ್ದರೂ ನವನಾಗರಿಕತೆಯ ಸೋಂಕಿಲ್ಲ; ಆಧ್ಯಾತ್ಮ ಜೀವನಕ್ಕೆ ಕುಂದಿಲ್ಲ. ಬಹು ಮುಖ ಪ್ರತಿಭೆಯ ಸಾಧಕ ರಿಗಿದ್ದರಂತೂ ಪ್ರತಿಭೆಗೆ ತಕ್ಕ ಪುರಸ್ಕಾರ. ಒಬ್ಬ ಆದರ್ಶ ಮಠಾಧೀಶರಿಗೆ ಏನೆಲ್ಲ ಅರ್ಹತೆಗಳು ಬೇಕೋ ಅವು ಇಲ್ಲಿ ಸುಲಭ ಸಾಧ್ಯ.

ಈಗಾಗಲೇ ಅನೇಕ ಸಾಧಕರು ಮಠಾಧೀಶರಾಗಿದ್ದು, ಸಂಘದ ಉದ್ದೇಶ ಗಳನ್ನೂ ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗಿದ್ದಾರೆ; ಪ್ರಗತಿಯ ಪ್ರತೀಕ ರೆನಿಸಿದ್ದಾರೆ. ಸಂಘದ ಸ್ಥಾನ ಸಮಾಜದಲ್ಲಿ ಗಣನೀಯವಾದುದು. ಇಲ್ಲಿ ಕಟ್ಟಿ ಕೊಂಡ ಜನದ ಬುತ್ತಿ ನಮ್ಮ ಭವಿಷ್ಯದ ಬಾಳಿನ ದಾರಿಯ ಬುತ್ತಿಯಾಗಿದೆ. ನಮ್ಮ ಸಾಧಕ ಜೀವನದ ಎಂಟು ವರ್ಷಗಳ ನಂಟಿನ ಗಂಟು ಬಿಚ್ಚಲಾರದಂತಹದು. ಶಿವ ಯೋಗ ಮಂದಿರದಲ್ಲಿ ಹಾಕಿದ ಅಡಿಪಾಯದ ಮೇಲೆ ಪರಿಪೂರ್ಣ ವ್ಯಕ್ತಿತ್ವದ ಮಹಾನ್ ಸೌಧದ ನಿರ್ಮಾಣ ಮಾಡುವಲ್ಲಿ ಒಂದು ಸಂಘದ ಪಾತ್ರ ಮಹತ್ವಪೂರ್ಣ ವಾದುದು. ಸಾಧಕರು ಸಮಾಜ ಪ್ರೇಮಿಗಳೂ ಜ್ಞಾನಿಗಳೂ ಆಗಿರುವುದರಿಂದ ಭವಿಷ್ಯ ಉಜ್ವಲ. ಅಂತೆಯೇ "ಇಲ್ಲಿ (=ಸಂಘದಲ್ಲಿ) ಸಲ್ಲುವರು ಅಲ್ಲಿಯೂ (=ಸಮಾಜದಲ್ಲಿಯೂ) ಸಲ್ಲುವರಯ್ಯ" ಎಂಬುದು ಇಂದಿನ ಅನುಭವ.

ಸಾಧಕ ಜೀವನದ ಸಂಸ್ಮರಣೆ ಸದಾ ಸಂಸ್ಮರಣೀಯ ಹಾಗೂ ಚೇತೋಹಾರಿ ಅಂತಹವುಗಳಲ್ಲಿ ನಮ್ಮ ವಿದೇಶ ಯಾತ್ರೆ ಅವಿಸ್ಮರಣೀಯ.

ಮಾನವನಿಗೆ ಇಂದು ಬೇಕಾಗಿರುವುದು ಶಾಂತಿ. ಶಾಂತಿ ಇಲ್ಲದೆ ಬಾಳಿಗೆ ನೆಮ್ಮದಿ ಇಲ್ಲ. ಇದನ್ನು ಹೊಂದಲು ಏಕೈಕ ದಾರಿ ಅದು: ಧರ್ಮ. ಈ ಸಿದ್ಧಾಂತದ ಮೇಲೆ ಸರ್ವಧರ್ಮ ಸಮ್ಮೇಳನ ಸಿಂಗಪುರದಲ್ಲಿ ೧೯೭೬ ರಲ್ಲಿ ನಡೆಯಿತು. ೩೦೦ ಜನ ಪ್ರತಿನಿಧಿಗಳಲ್ಲಿ ವೀರಶೈವ ಧರ್ಮದ ಪ್ರತಿನಿಧಿಗಳು ನಾವಿಬ್ಬರು ಭಾಗವಹಿಸಿದ್ದೆವು.

ನಾವೆಲ್ಲರೂ ಆರು ದಿನಗಳ ಸಮ್ಮೇಳನದಲ್ಲಿ ಧರ್ಮದ ಮೂಲಕ ಶಾಂತಿ ಪಡೆ ಯಲು ಸಾಧ್ಯವೆಂದು, ನಂಬಿ ನ್ಯಾಯಯುತ ಹಾಗೂ ಯುದ್ಧ ರಹಿತ ಶಾಂತಿ, ಜಾಗ ತಿಕ ನವೀನ ಅರ್ಥರಚನೆ ಮತ್ತು ಧರ್ಮಗಳ ಸಮನ್ವಯ ಕುರಿತು ಚರ್ಚಿಸಿದೆವು. ಧರ್ಮಗಳ ಸೌಹಾರ್ದತೆಯಿಂದ ಶಾಂತಿ ಸಾಧ್ಯವೆಂದ ಶರಣರ ವಚನಗಳ ಆಧಾರದಿಂದ ವಂದಿಸಲಾಯಿತು. ಮುಕ್ತಾಯ ಸಮಾರಂಭದಲ್ಲಿ ಹಿಂದೂ ಧರ್ಮದ

ಪ್ರಾರ್ಥನೆಯನ್ನು ನಿರ್ವಹಿಸುವ ಅವಕಾಶ ನಮ್ಮದಾಯಿತು. ವಿದೇಶಗಳ ಜನ ಜೀವನ, ಸಂಸ್ಕೃತಿ ಮೊದಲಾದವುಗಳ ಅಧ್ಯಯನದೊಂದಿಗೆ ಪ್ರೇಕ್ಷಣೀಯ ಸ್ಥಳ ಗಳನ್ನು, ಥೈಲೆಂಡ್ ಮೊದಲಾದ ರಾಷ್ಟ್ರಗಳನ್ನು ಸಂದರ್ಶಿಸಲಾಯಿತು. ಸಮ್ಮೇ ಳನ ಯಶಸ್ವಿಯಾಗಿ ನಡೆದು ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ನಿರ್ಧರಿಸಿ ದೆವು. ಶ್ರೀ ಸಂಘದ ಸಾಧಕರಾಗಿದ್ದಾಗಲೇ ಈ ಧರ್ಮಯಾತ್ರೆಯಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆತದ್ದು ಸುದೈವ; ಶ್ರೀ ಕುಮಾರೇಶನ ಸಂಕಲ್ಪ. ಜಾಗತಿಕ ಧರ್ಮ ಸಮ್ಮೇಳನದ ಸದಸ್ಯರಾದ ಪೂಜ್ಯ ಶ್ರೀ ಮೂರುಸಾವಿರ ಮಠದ ಜಗದ್ಗುರುಗಳವರು ಈ ಕಾರ್ಯಕ್ಕೆ ಪ್ರೇರೇಪಿಸಿದರು. ಅವರ ಚೇತನಾ ಪೂರ್ಣ ಹರಕೆಯ ಫಲವೇ ಈ ವಿದೇಶ ಯಾತ್ರೆ. ಇದೊಂದು ಸಾಧಕ ಜೀವನದ ಮರೆಯಲಾಗದ ಸಂಸ್ಮರಣೆ.

ಶ್ರೀ ಸಂಘದ ದಿವ್ಯ ಸಂದೇಶಗಳನ್ನು ಸಾಮಾಜಿಕ ರಂಗದಲ್ಲಿ ಕಾರ್ಯರೂಪಕ್ಕೆ ತರಲಿರುವುದೇ ಮುಂದಿನ ಗುರಿ. ಇಂದಿನ ಯುಗದಲ್ಲಿ ಮಠಾಧೀಶರು ಬಹು ಜಾಗೃತರಾಗಿರಬೇಕು. ಎಲ್ಲರೂ ಸಂಘದ ಶಕ್ತಿಯಿಂದ ಸಮಾಜದ ಬೆಳವಣಿಗೆಗೆ ಶ್ರಮಿಸಬೇಕೆಂದು ಕಂಕಣ ಬದ್ಧರಾಗಬೇಕು. ಇಂತಹ ಆದರ್ಶ ಸಾಧಕರು ಶ್ರೀ ಸಂಘದಿಂದ ಹೊರಬರಲಿ. ಶ್ರೀ ಜಗದ್ಗುರುಗಳವರ ಕೃಪೆಯಿಂದ ಸಂಘ ಬೆಳೆದು ಜನಮನಸವನ್ನು ಬೆಳಗಲೆಂಬುದೆ ಹಿರಿಯಾಸೆ.





## ಶ್ರೀ ಮ.ನಿ.ಪ್ರ.
## ಜಡೆಯ ಶಾಂತಲಿಂಗ ಮಹಾಸ್ವಾಮಿಗಳು
## ನಿಂಬಾಳ-ದುಧನಿ

ಶಿವಮೊಗ್ಗಾ ಜಿಲ್ಲೆಯ, ಸೊರಬ ತಾಲೂಕದ, ಜಡೆ ಗ್ರಾಮದ ಹಿರೇಮಠದಲ್ಲಿ ಜನಿಸಿದರು. ಸ್ವಗ್ರಾಮದಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪೂರ್ತಿಗೊಳಿಸಿ ಕೊಂಚ ಕಾಲ ಹಾಯಸ್ಕೂಲ ಅಧ್ಯಯನ ಮಾಡಿದರು. ಸಿಂದಗಿಯ ಪಟ್ಟದ್ದೇವರ ಹಾವೇರಿ ಪಾಠಶಾಲೆಗೆ ಬಂದು ಅಲ್ಲಿ ವೈದಿಕ ಹಾಗೂ ಜ್ಯೋತಿಷ್ಯ ವಿದ್ಯೆಯಲ್ಲಿ ಪೂರ್ತಿ ಶಿಕ್ಷಣ ಪಡೆದು ಬೋಧಕರಾಗಿ ಸೇವೆ ಸಲ್ಲಿಸಿದರು. ಹುಬ್ಬಳ್ಳಿಯ ಶ್ರೀ ಜಗದ್ಗುರು ಮಹಾಸನ್ನಿಧಿಯ ಅಪ್ಪಣೆಯ ಮೇರೆಗೆ ಮೂರು ಸಾವಿರ ಮಠಕ್ಕೆ ಬಂದರು. ಇಲ್ಲಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸದಸ್ಯರಾಗಿಯೂ ಶ್ರೀ ಕುಮಾರೇಶ್ವರ ವೈದಿಕ ಜ್ಯೋತಿಷ್ಯ ಪಾಠಶಾಲೆಯ ಪ್ರಾಧ್ಯಾಪಕರಾಗಿಯೂ ನಾಲ್ಕು ವರ್ಷಗಳವರೆಗಿದ್ದರು. ಇವರು ನಿತ್ಯ ಅನುಷ್ಠಾನ ಪ್ರಿಯರು; ನ್ಯಾಯ-ನಿಷ್ಠುರ ಸ್ವಭಾವದವರು. ಶರಣರಂತೆ ನಿರ್ಮಲ ಜೀವನ ಇವರದು. ಶಿಸ್ತು, ನಿಯಮಿತತನ, ಏಕಾಂತಪ್ರಿಯತೆ, ಶಾಂತ, ನೀರವ ಪ್ರಕೃತಿ ವಾತಾವರಣ ಇವರಿಗೆ ಅತಿ ಮೆಚ್ಚು. ಅದೇ ಇವರ ಆಸ್ತಿ. ಇವರಾಡುವ ಮಾತು ಮುತ್ತು, ಅತಿ ಕಡಿಮೆ. ಇವರಿಗೆ ಹಾನಗಲ್ ಕುಮಾರೇಶ್ವರರ ಆದರ್ಶವೆಂದರೆ ಪಂಚಪ್ರಾಣ. ಇವರ ಅಚ್ಚುಮೆಚ್ಚಿನ ಆಧ್ಯಾತ್ಮ ವೃದ್ಧ ಸ್ವಾಮಿಗಳೆಂದರೆ ಕಪನಳ್ಳಿಯ ಶತಾಯುಷಿ-ರುದ್ರಮುನಿ ಸ್ವಾಮಿಗಳು.

ಶ್ರೀ ಜಗದ್ಗುರುಗಳವರ ಅಪ್ಪಣೆಯ ಮೇರೆಗೆ ಹಾಗೂ ದುಧನಿಯ ಭಕ್ತರ ಕರೆಯ ಮೇರೆಗೆ ದುಧನಿ-ನಿಂಬಾಳ ಹಾಗೂ ಇನ್ನೂ ಅನೇಕ ಶಾಖಾ ಮಠಗಳ ಒಡೆತನವನ್ನು ವಹಿಸಿಕೊಂಡು ಪಟ್ಟಾಭಿಷಿಕ್ತರಾಗಿದ್ದಾರೆ. ಎರಡು-ಮೂರು ವರ್ಷಗಳಲ್ಲಿಯೇ ಮಠಗಳ ಜೀರ್ಣೋದ್ಧಾರದ ಕಾರ್ಯ ಮಾಡಿದ್ದಾರೆ. ಇವರ ತ್ರಿಕಾಲ ಲಿಂಗಪೂಜೆ ಸಂತೋಷ ಪಡುವಂತಹದು. ಹುಬ್ಬಳ್ಳಿ ಮೂರುಸಾವಿರಮಠದ ಪ್ರಸಾರೋಪನ್ಯಾಸ ಮಾಲೆಯಲ್ಲಿ 'ಶರಣ ಸಂದೇಶ' ಎಂಬ ಪುಸ್ತಕವನ್ನು ಹಾಗೂ ತ್ರಿಪದಿಯ ಒಂದು ಕವನ ಸಂಕಲನವನ್ನೂ ಬರೆದಿರುವರು. ಲೇಖನ ಪದ್ಯ ರಚನೆಯಲ್ಲಿ ಆಸಕ್ತಿ ಇದ್ದು ಜನಹಿತಕಾರ್ಯದಲ್ಲಿ ಮಗ್ನರಾಗಿದ್ದಾರೆ. ಆಚಾರ ವಿಚಾರಗಳ ಮೂಲಕ ಜನಜಾಗ್ರತಿ ಮಾಡುತ್ತಿರುವರು.



## ಶ್ರೀ ಮ.ನಿ.ಪ್ರ.
## ಸಿದ್ಧಲಿಂಗ ಸ್ವಾಮಿಗಳು ಮೋರಟಗಿ

ವಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ ಮೋರಟಗಿಯ ಹಿರೇಮಠದಲ್ಲಿ 28-12-1957ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಅಲ್ಲಿಯೇ ಮುಗಿಸಿದರು. ಸಾಧಕ ಜೀವನದ ತರಬೇತಿಗೆ ಹಾಗೂ ವಿದ್ಯಾಭ್ಯಾಸಕ್ಕೆಂದು ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಈ ಸಂಘದಲ್ಲಿದ್ದು ಹೈಸ್ಕೂಲು ಹಾಗೂ ಕಾಲೇಜಿನ ಮೊದಲು ಎರಡು ವರ್ಷದ ಶಿಕ್ಷಣ ಪಡೆದರು. ಲೇಖನ ಸ್ಪರ್ಧೆ, ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನ ಪಡೆದಿರುವರು. ತಮ್ಮ ಗುರುಗಳ ಅಭಿಲಾಷೆಯಂತೆ ಎಳೆಯ ವಯಸ್ಸಿನಲ್ಲಿಯೇ ಮೋರಟಗಿ ವಿರಕ್ತ ಮಠದ ಸ್ವಾಮಿಗಳಾಗಿರುವರು. ಮೋರಟಗಿ, ಜವಳಗಿ, ಹಂಜಗಿ ಮುಂತಾದ ಮಠಗಳ ಹೊಣೆ ಹೊತ್ತಿರುವರು. ಓದುವದರಲ್ಲಿ ವಿಶೇಷ ಆಸಕ್ತಿ. ಇವರ ಬರವಣಿಗೆ ಸ್ವಲ್ಪ ಸಮಯದಲ್ಲಿ ಸಿದ್ಧಿ ಪಡೆಯುವಂಥಹದ್ದು. ದಾಸೋಹ ನಡೆಸಬೇಕೆಂಬ ಹಂಬಲದವರಾಗಿ ಧರ್ಮಕಾರ್ಯ ಮಾಡುತ್ತಿರುವರು. ಈಗ ಗದುಗಿನ ತೋಂಟದಾರ್ಯ ಜಗದ್ಗುರು ಮಠದಲ್ಲಿದ್ದು ಅಧ್ಯಯನ ನಡೆಸಿರುವರು. ಇತರರು ಮಾಡುವ ಸತ್ಕಾರ್ಯಕಲಾಪಗಳನ್ನು ಕಂಡು ಕಲಿಯಬೇಕೆಂಬುದರಲ್ಲಿ ಇವರಿಗೆ ಬಲವಾದ ಹಂಬಲ. ಜ್ಞಾನಾರ್ಜನೆಗಾಗಿ ದೊರೆತ ಪುಸ್ತಕಗಳನ್ನು ಖರೀದಿಸಿ ಸಂಗ್ರಹ ಮಾಡಿರುತ್ತಾರೆ. ಕಿಂಕರ ಭಾವದವರಿವರು. ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವವನ್ನು ಕಾಯ್ದುಕೊಂಡು ಬರುತ್ತಿದ್ದಾರೆ.



## ಶ್ರೀ ಮ.ನಿ.ಪ್ರ.
## ಸಿದ್ಧಲಿಂಗ ಸ್ವಾಮಿಗಳು,
## ಎರಡೆತ್ತಿನಮಠ. ಹುಬ್ಬಳ್ಳಿ-ನಿಡೋಣಿ

ವಿಜಾಪೂರ ಜಿಲ್ಹೆಯ ಬಾಗಿಲುಕೋಟೆ ಇವರ ಜನ್ಮಸ್ಥಳ. ಬಾಲ್ಯದಲ್ಲಿ ಶಿವಯೋಗ ಮಂದಿರದಲ್ಲಿ ಪ್ರವೇಶ ಪಡೆದರು. ಅಲ್ಲಿ ಯೋಗಾಸನಗಳಲ್ಲಿ ಪರಿಣತರಾದರು. ಪಂ. ಇಟಗಿ ಚನ್ನಬಸವಶಾಸ್ತ್ರಿಗಳ ಹತ್ತಿರ ಸಂಸ್ಕೃತಾಧ್ಯಯನ ಮಾಡಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹುಬ್ಬಳ್ಳಿಯ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಬಂದರು. ಇವರ ಸಾಧಕಾವಸ್ಥೆಯ ಹೆಸರು ಸಿದ್ಧವೀರ ದೇವರು. ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀ ಮ.ನಿ.ಪ್ರ. ಹೊಸಮಠದ ಶಿವಬಸವ ಸ್ವಾಮಿಗಳವರ ಹತ್ತಿರ ಓದಿದ ಇವರು ವಿದ್ವತ್ ಪದವಿ ಪಡೆದರು. ಸಂಗೀತದಲ್ಲಿ ವಿಶೇಷ ಆಸಕ್ತಿ. ಇವರ ಸಚ್ಚೇತನ ನಡುವಳಿಕೆಗಳನ್ನು ಮೆಚ್ಚಿ ಶ್ರೀ ಜಗದ್ಗುರುಗಳವರ ಅಪ್ಪಣೆಯ ಪ್ರಕಾರ ಲಿಂ. ಶ್ರೀ ಚನ್ನವೀರ ಸ್ವಾಮಿಗಳು ತಮ್ಮ ಮಠದ ಮರಿದೇವರನ್ನಾಗಿ ಸ್ವೀಕರಿಸಿದರು. ಕಾಪನಹಳ್ಳಿಯ ಶತಾಯುಷಿಗಳಿಂದ ಹುಬ್ಬಳ್ಳಿಯಲ್ಲಿ ಒಳ್ಳೆಯ ವೈಭವದಿಂದ ಪಟ್ಟಾಭಿಷಿಕ್ತರಾಗಿರುವರು. ಹುಬ್ಬಳ್ಳಿ-ನಿಡೋಣಿ ವಿರಕ್ತಮಠಗಳ ಹೊಣೆ ಹೊತ್ತಿರುವರು. ಮೌನಿಗಳಾಗಿ ಹುಬ್ಬಳ್ಳಿಯಲ್ಲಿ ಅನುಷ್ಠಾನ ಮಾಡಿದರು. ಪುರಾಣ ಪ್ರವಚನಗಳ ಮೂಲಕ ಜನ ಜಾಗ್ರತಿ ನಡೆಸಿರುವರು. ಮಠದ ಜೀರ್ಣೋದ್ಧಾರ ಕಾರ್ಯ ಮಾಡುತ್ತಿರುವರು. ಎಲ್ಲರೊಳು ಬೆರೆವ ಸ್ವಭಾವ. ಬರಗಾಲದ ನಿಧಿ ಸಂಗ್ರಹ ಕಾರ್ಯದಲ್ಲಿ ಜಗದ್ಗುರು ಮೂರುಸಾವಿರ ಮಠದ ಸಮಿತಿಯವರೊಂದಿಗೆ ಪಾಲ್ಗೊಂಡಿದ್ದರು. 'ಎಲ್ಲರೊಡನೆ ವೈರವಿಲ್ಲದೆ ಕೂರ್ಪದೇ ಚಂದ ಮಾಮಾ' ಎಂಬಂತೆ ತನ್ನವರೆನ್ನುವವರಲ್ಲಿ ಅಷ್ಟೇ ಅಲ್ಲದೆ, ಅನ್ಯರೆನ್ನುವವರಲ್ಲಿಯೂ ಸ್ನೇಹ ಬೆಳೆಸಬಲ್ಲರು. ಇವರ ಸರಳ ಹೃದಯ ಮೆಚ್ಚುವಂತಹದು. ಹುಬ್ಬಳ್ಳಿಯ ಜಗದ್ಗುರುಗಳವರ ಕೃಪಾಪಾತ್ರರಾಗಿರುವರು. ಇವರು ವಯಸ್ಸಿನಿಂದ ಚಿಕ್ಕವರಾದರೂ ಒಳ್ಳೆಯ ದಕ್ಷತೆಯಿಂದ ಕಾರ್ಯ ಮಾಡುವರು. ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಕಾರ್ಯಕಾರಿ ಸದಸ್ಯರೂ ಆಗಿದ್ದಾರೆ.



ಶ್ರೀ ಷ.ನಿ.ಪ್ರ.
ರೇವಣಸಿದ್ಧ ಸ್ವಾಮಿಗಳು
ಗದ್ದುಗೆಮಠ. ಗುಲಬರ್ಗಾ
( ಕಲಬುರ್ಗಿಮಠ, ಹುಬ್ಬಳ್ಳಿ )

ರಾಯಚೂರ ಜಿಲ್ಲೆಯ ಕುಷ್ಟಗಿ ತಾಲೂಕಿನ ಕಂದಕೂರ ಗ್ರಾಮದ ಹಿರೇಮಠದಲ್ಲಿ ೧-೧-೧೯೪೯ ರಂದು ಜನಿಸಿದರು. ಬಾಲ್ಯದಲ್ಲಿಯೇ ಗದುಗಿನಲ್ಲಿದ್ದು ಜಗದ್ಗುರು ತೋಂಟದಾರ್ಯಮಠದ ಸಹಾಯದಿಂದ ಶಿಕ್ಷಣ ಪಡೆದರು. ಜಗದ್ಗುರುಗಳವರಿಂದ ಪ್ರಸಾದಿಸ್ಥಲದ ಅನುಗ್ರಹಿತರಾಗಿ ದೇಶಿಕರಾದರು. ಬೆಂಗಳೂರಿನ ಸರ್ಪಭೂಷಣ ಮಠದಲ್ಲಿ ಒಂದೆರಡು ವರ್ಷಗಳವರೆಗಿದ್ದರು. ತಮ್ಮ ಮುಂದಿನ ಸಾಧನೆಯ ದಿನಗಳನ್ನು ಹುಬ್ಬಳ್ಳಿ ಮೂರುಸಾವಿರ ಮಠದ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ನಡೆಯಿಸಬೇಕೆಂದು ಬಂದರು. ಸಂಘದ ಆದರ್ಶ ಸಾಧಕರಾಗಿ ಮುಂದುವರೆದರು. ಸಂಘದ ಕಾರ್ಯದರ್ಶಿಗಳಾಗಿ ಹಾಗೂ ಪರಂಜ್ಯೋತಿ ಕಾರ್ಯಾಲಯದಲ್ಲಿ ಸೇವೆ ಸಲ್ಲಿಸಿದರು. ಬಿ. ಎ. ಪದವಿಯನ್ನು ಪಡೆದಿರುವರು.

ನಗುತ ನಗಿಸುವ ಸ್ವಭಾವದ ಇವರು ರಸಿಕರಾಗಿರುವರು. ದ್ವಿಭಾಷಾ ಪಂಡಿತರಾಗಿರುವರು. ಇವರ ಇರುವಿಕೆ ಸಾದಾಸೀದಾ. ಹುಬ್ಬಳ್ಳಿಯ ಶ್ರೀ ಜಗದ್ಗುರುಗಳವರ ಕೃಪಾಶೀರ್ವಾದದಿಂದ ಹುಬ್ಬಳ್ಳಿಯ ಕಲಬುರ್ಗಿ ಮಠದ ಹಾಗೂ ಕಲಬುರ್ಗಿಯ ಗದ್ದುಗೆಯ ಮಠದ ಹೊಣೆ ಹೊತ್ತಿರುವರು. ದಿನಾಂಕ 17-2-78 ರಂದು ಪಟ್ಟಾಭಿಷಿಕ್ತರಾಗಿರುವರು ಹುಬ್ಬಳ್ಳಿ ಕಲಬುರ್ಗಿ ಇತರ ಶಾಖಾಮಠಗಳ ಕಾರ್ಯವ್ಯಾಪ್ತಿಗೆ ಅನುಕೂಲವಾದ ರೂಪರೇಷೆ ಇಟ್ಟುಕೊಂಡಿದ್ದಾರೆ. ಇವರು ಅನೇಕ ಹೊಸ ಹೊಸ ಯೋಜನೆಗಳನ್ನು ಹಮ್ಮಿಕೊಂಡಿರುವದರಿಂದ ಇವರಿಗೆ ಶ್ರೇಯಸ್ಸು ಕಾದಿದೆ. ಶ್ರದ್ಧೆ ನಿಷ್ಠೆಯಿಂದ ನಡೆದು ಎಲ್ಲ ಗೆಳೆಯರಿಗೂ ಆತ್ಮೀಯರಾಗಿ ಬಾಳತಕ್ಕವರು. ಕಪನಳ್ಳಿಯ ಶತಾಯುಷಿ ರುದ್ರಮುನಿ ಸ್ವಾಮಿಗಳವರಿಂದ ಅಧಿಕಾರ ವಹಿಸಿಕೊಂಡಿರುವರು.

ಹೆಚ್ಚಿನ ಅಧ್ಯಯನ ಮುಂದುವರಿಸಬೇಕೆಂಬ ಹಿರಿಯ ಹಂಬಲ ಇರುವಾಗಲೇ ಕಲಬುರ್ಗಿ ಗದ್ದುಗೆ ಮಠದ ಹೊಣೆ ಇವರ ಹೆಗಲೇರಿತು. ಇಂದು ಶೈಕ್ಷಣಿಕ ಪ್ರಾಧಾನ್ಯತೆಯನ್ನು ಹೊಂದಿದ ಕಲಬುರ್ಗಿಯಲ್ಲಿ ಅನೇಕ ಕಾರ್ಯಗಳು ವೈಚಾಚಿವೆ. ಅವುಗಳನ್ನು ಕೈಹಿಡಿದು ನಡೆಸುವ ಕಾಯಕ ಇವರ ಪಾಲಿಗಿದೆ. ಆ ಕಾರ್ಯಗಳನ್ನು ಹಮ್ಮಿಕೊಳ್ಳುವುದರಿಂದ ಇವರಿಗೆ ಶ್ರೇಯಸ್ಸು ಕಾಯ್ದಿದೆ.



**ಶ್ರೀ ಷ. ಬ್ರ. ಶಾಂತವೀರ ಶಿವಾಚಾರ್ಯ ಸ್ವಾಮಿಗಳು, ಬಂದರವಾಡ.**

ಗುಲಬರ್ಗಾ ಜಿಲ್ಲೆಯ ಅಫಜಲಪೂರ ತಾಲೂಕಿನ ಬಂದರವಾಡ ಗ್ರಾಮದ ಇವರು 6-10-1953ರಂದು ಹಿರೇಮಠದಲ್ಲಿ ಜನಿಸಿದರು. ಧರ್ಮ ಸಂಸ್ಕೃತಿಗಳ ಅಧ್ಯಯನಕ್ಕಾಗಿ ಹಾಗೂ ಹಾಗೂ ಕಾಲೇಜ ಓದಿಗಾಗಿ ಶ್ರೀ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದ ಇವರು ಸಾಧನೆಯಿಂದಾಗಿ ಆಚಾರ ವಿಚಾರ ಸಂಪನ್ನರಾದರು. ಅಲ್ಲಲ್ಲಿ ಪುರಾಣ ಪ್ರವಚನಗಳನ್ನು ಮಾಡಿ ಹೆಸರು ಗಳಿಸಿರುವರು. ಮೂರು ವರ್ಷಗಳ ವರೆಗೆ ಸಂಘದಲ್ಲಿದ್ದರು. ಫಿಲಾಸಫಿ ಅಧ್ಯಯನಕ್ಕಾಗಿ ಈಗ ಧಾರವಾಡದ ಶ್ರೀ ಮುರುಘಾಮಠದಲ್ಲಿರುವರು. ಬಂದರವಾಡ ಮಠದ ಹೊಣೆಯನ್ನು ಹೊತ್ತಿದ್ದು 'ಧೈರ್ಯಂ ಸರ್ವತ್ರ ಸಾಧನಂ' ಎಂಬ ಎಚ್ಚರಿಕೆಯಿಂದ ಮುಂದುವರೆಯುತ್ತಿರುವರು. ಆಗಾಗ ಇವರು ಅನುಷ್ಠಾನ ಮಾಡುತ್ತಿರುವರು. ತಮ್ಮ ಮಠದಲ್ಲಿ ವಿವಿಧ ರೀತಿಯ ಸಾಂಸ್ಕೃತಿಕ ಚಟುವಟಿಕೆಗಳನ್ನು ಆಗಾಗ ನಡೆಸುತ್ತಿರುವರು. ಎಲ್ಲವನ್ನು ಕಲಿಯಬೇಕೆಂಬ ಕುತೂಹಲ ಇವರಿಗಿದೆ. ಸತತ ಪರಿಶ್ರಮ ವಹಿಸಿ ಕಲಿಯುತ್ತಿರುವರು.



ಶ್ರೀ ಷ. ಬ್ರ.
ಚನ್ನಬಸವ ಶಿವಾಚಾರ್ಯರು
ಮಟಮಾರಿ-ಬಿಚ್ಚಾಲಿ.

ಬೀದರ ಜಿಲ್ಲೆಯ ಔರಾದ ತಾಲೂಕಿನ ಸಂಗಮ ಗ್ರಾಮದಲ್ಲಿ ಜನಿಸಿದರು. ಭ್ರಾತಾಂಬ್ರಾ ಮಠಕ್ಕೆಂದು ಮರಿದೇವರಾಗಿದ್ದ ಇವರು ಪಟ್ಟ ಜೀವನದ ತರಬೇತಿಗಾಗಿ ಬದಾಮಿ ಹತ್ತಿರದ ಶ್ರೀ ಶಿವಯೋಗ ಮಂದಿರದಲ್ಲಿದ್ದರು. ಅಲ್ಲಿ ಯೋಗ, ಧರ್ಮ ಶಿಕ್ಷಣ ಹೊಂದಿ ಹೆಚ್ಚಿನ ವ್ಯಾಸಂಗಕ್ಕೆ ಹುಬ್ಬಳ್ಳಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದು ಐದು ವರ್ಷಗಳ ವರೆಗೆ ಶಿಕ್ಷಣ ಪಡೆದರು. ಇವರು ತುಂಬಾ ಸರಳ ಜೀವಿಗಳು. ಇವರು ಕಾಶಿಗೂ ಹೋಗಿ ಬಂದಿದ್ದಾರೆ. ಇವರ ಸಾತ್ವಿಕ ಗುಣಗಳನ್ನು ಸರಳತೆಯನ್ನು ಕಂಡ ರಾಯಚೂರ ಜಿಲ್ಲೆಯ ಮಟಮಾರಿ ಮತ್ತು ಬಿಚ್ಚಾಲಿಯ ಮಠಗಳ ಒಡೆತನ ಇವರಿಗೆ ಕೈ ಮಾಡಿ ಕರೆಯಿತು. ಕೋಟಿ ವಿದ್ಯೆಗಳಲ್ಲಿ ಮೇಟ ವಿದ್ಯೆಯೇ ಮಿಗಿಲೆಂದು ಕೃಷಿಕಾಯಕದಲ್ಲಿ ಮಗ್ನರಾಗಿರುವರು. ಜನಜಾಗ್ರತಿಗಾಗಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಗಾಗ ಏರ್ಪಡಿಸುತ್ತಿರುವರು ಜ್ಞಾನ ದಾಸೋಹದೊಡನೆ ಅನ್ನ ದಾಸೋಹವನ್ನೂ ನಡೆಸಿರುವರು.



ಶ್ರೀ. ಷ. ಬ್ರ.
ರುದ್ರಮುನಿ ಶಿವಾಚಾರ್ಯರು
ರುದ್ರಸ್ವಾಮಿಮಠ
ಹಡಗಲಿ-ನಿಡಗುಂದಿ

ಇವರು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆಯಲ್ಲಿ ಜನಿಸಿದರು. ಪ್ರಾಥಮಿಕ ಅಧ್ಯಯನವನ್ನು ಸ್ವಗ್ರಾಮದಲ್ಲಿ ನಡೆಸಿದರು. ಮುಂದೆ ಸ್ವಾಮಿ ಜೀವನದ ಮೊದಲು ಹಂತದ ತರಬೇತಿಗೆ ಮಲಪ್ರಭಾ ನದಿಯ ತಟದಲ್ಲಿರುವ ಶ್ರೀ ಶಿವಯೋಗ ಮಂದಿರಕ್ಕೆ ಆಗಮಿಸಿದರು. ಅಲ್ಲಿ ಕೆಲವರ್ಷಗಳ ವರೆಗೆ ಅಧ್ಯಯನ ಮುಂದುವರೆಸಿದರು. ಅಲ್ಲಿ ಶಿವಪೂಜಾ ಹಾಗೂ ಆಸನಗಳಲ್ಲಿ ವಿಶೇಷ ಆಸಕ್ತಿ ವಹಿಸಿ ಬಲ್ಲಿದರಾದರು. ಹೆಚ್ಚಿನ ವ್ಯಾಸಂಗಕ್ಕಾಗಿ ಹುಬ್ಬಳ್ಳಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಬಂದರು. ಇಲ್ಲಿ ಸ್ವಾಧ್ಯಾಯದೊಡನೆ ಪರಂಜ್ಯೋತಿ ಪತ್ರಿಕೆಯ ಸೇವೆಯನ್ನು ಮಾಡಿದರು. ಸ್ವಕಾರ್ಯ, ಸ್ವಾಮಿಕಾರ್ಯ ಗಳೆರಡನ್ನೂ ಕೂಡಿ ನಡೆಸಿದರು. ಸತತ ಪರಿಶ್ರಮ ಸಾಧನೆಗಳಿಂದ ಜೀವನದಲ್ಲಿ ಹೊಸ ಬೆಳಕು ಕಂಡರು. ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳ ಅಪ್ಪಣೆಯ ಪ್ರಕಾರ ಹಾಗೂ ಸದ್ಭಕ್ತರ ಇಚ್ಛೆಯ ಮೇರೆಗೆ ನಿಡಗುಂದಿಯ ಜೀರ್ಣ ಮಠವು ಈ ತರುಣ ಸಾಧಕರನ್ನು ತನ್ನ ಸೇವೆಗೆ ಕರೆದೊಯ್ಯಿತು. ಇಂದು ಆ ಭಾಗ ದಲ್ಲಿ ಧರ್ಮ ಜಾಗ್ರತಿಯ ಕಾರ್ಯವನ್ನು ಮಾಡುತ್ತಿರುವರು. ಶಾಂತ ಸ್ವಭಾವದ ವರಿರುವರು.

ನಿಡಗುಂದಿಯ ಆಯಕಟ್ಟಿನ ಸ್ಥಳದಲ್ಲಿ ನಿಂತುಕೊಂಡು ಸಕಲ ಸದ್ಭಕ್ತರ ಪ್ರೋತ್ಸಾಹದ ಮೇರೆಗೆ ಧರ್ಮ ಸಂಸ್ಕೃತಿಗಳ ಕಾರ್ಯವನ್ನು ಯಶಸ್ವಿಯಾಗಿ ನಡೆಸಿರುವರು.



## ಶ್ರೀ ಷ. ಬ್ರ. ಗುರುನಂಜೇಶ್ವರ ಶಿವಾಚಾರ್ಯ ಸ್ವಾಮಿಗಳು ಹಿರೇಮಠ ಕೂಡಲ.

ಧಾರವಾಡ ಜಿಲ್ಲೆಯ ಹಾನಗಲ್ಲ ತಾಲೂಕಿನ ವರದಾ-ಧರ್ಮಾ ನದಿಗಳ ಸಂಗಮ ಕ್ಷೇತ್ರವಾದ ಕೂಡಲ ಗ್ರಾಮದ ಗುರುನಂಜೇಶ್ವರ ಮಠದಲ್ಲಿ ೨-೪ ೧೯೩೪ ರಂದು ಜನಿಸಿದರು. ಸ್ವಗ್ರಾಮದಲ್ಲಿ ಮೊದಲು ಶಿಕ್ಷಣ ನಡೆಸಿ ಎಳೆಯ ವಯಸ್ಸಿನಲ್ಲಿಯೇ ಹಾವೇರಿಯ ಪಾಠಶಾಲೆಯಲ್ಲಿ ಶಿಕ್ಷಣ ಪಡೆದರು. ಸದ್ದುಗದ್ದಲಿಲ್ಲದ ಮೃದು ಜೀವನ. ಇವರಾಡುವ ಮಾತು ಹೂವಿನಂತೆ ಕೋಮಲ.

ಚಿಕ್ಕ ವಯಸ್ಸಿನಲ್ಲಿಯೇ ಪಟ್ಟಾಭಿಷಿಕ್ತ ಪಟ್ಟಾಧ್ಯಕ್ಷರಾಗಿರುವ ಇವರು ಹೆಚ್ಚಿನ ವ್ಯಾಸಂಗಕ್ಕಾಗಿ ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಬಂದರು. ಇಲ್ಲಿ ಪೂರ್ತಿ ಹೈಸ್ಕೂಲ ಹಾಗೂ ಕಾಲೇಜಿನ ಮೊದಲು ಎರಡು ವರ್ಷದ ಶಿಕ್ಷಣ ಪಡೆದರು. ಶಿಕ್ಷಣ ಮುಂದುವರೆಸಬೇಕೆಂಬ ಹಂಬಲ ಅತಿಯಾಗಿದ್ದರೂ ಮಠದ ಕರ್ತವ್ಯದ ಕರೆಗೆ ಓಗೊಟ್ಟು ಈಗ ಮಠದಲ್ಲಿರುವರು ಕಪನಳ್ಳಿ ಶತಾಯುಷಿ ರುದ್ರಮುನಿ ಸ್ವಾಮಿಗಳಿಂದ ಅನುಗ್ರಹ ಪಡೆದಿರುವರು. ಪುರಾಣ ಪ್ರವಚನಗಳ ಮೂಲಕ ಧರ್ಮದ ಕಾರ್ಯ ನಡೆಸಿರುವರು. ಆಗಾಗ ಅನುಷ್ಠಾನ ಮಾಡುತ್ತಿರುವರು. ಒಳಮುಖ ಜೀವಿಗಳಾದ ಇವರಿಗೆ ಓದಿನಲ್ಲಿ ಆಸಕ್ತಿ ಇರುವದು ಸರಳ ಹೃದಯ, ಶಾಂತ ಸ್ವಭಾವ, ಗುರುನಂಜೇಶ್ವರ ಶಿವಾಚಾರ್ಯ ಎಂಬ ಹೆಸರು ಇವರಿಗಿರುವದರಿಂದಲೋ ಏನೋ ಇತರರು ಕೊಟ್ಟ ತೊಂದರೆಯನ್ನು ನಂಜೆಂದು ಹೆದರದೆ ಸೌಮ್ಯತೆಯಿಂದ ತಾಳಿಕೊಂಡು ಎಲ್ಲ ಭಕ್ತಾದಿಗಳಿಗೆ ಅಚ್ಚು ಮೆಚ್ಚಿನ ಗುರುಗಳಾಗಿರುವರು. ಸಂಗಮೇಶ್ವರನ ಜಾತ್ರೆಯನ್ನು ವಿಜೃಂಭಣೆಯಿಂದ ಆಚರಿಸುವರು. ತಮ್ಮ ಗುರುನಂಜೇಶ್ವರ ಕರ್ತೃಗದ್ದುಗೆಯ ವಾರ್ಷಿಕೋತ್ಸವವನ್ನು ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಒಳ್ಳೆ ಉತ್ಸಾಹದಿಂದ ಪ್ರತಿವರ್ಷವೂ ಮಾಡುತ್ತಿರುತ್ತಾರೆ.



## ಶ್ರೀ ಶಿವಲಿಂಗದೇಶಿಕರು, ಬಣ್ಣದಮಠ ಶಿರಸಿ

ಬಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಸಾಸನೂರಲ್ಲಿ ಜನಿಸಿದ ಈ ಶಿವಲಿಂಗ ದೇಶಿಕೇಂದ್ರರು ಸ್ವಾಭಾವಿಕವಾಗಿಯೇ ಎಲ್ಲ ವಿದ್ಯಾರ್ಥಿಗಳಂತೆ ತಮ್ಮ ಪ್ರಾರಂಭದ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸ್ವಗ್ರಾಮದಲ್ಲಿ ಪೂರೈಸಿ, ಬ್ಯಾಡಗಿ ಶ್ರೀ ಕುಮಾರೇಶ್ವರ ಜ್ಯೋತಿಷ, ವೈದಿಕ ಪಾಠಶಾಲೆಯಲ್ಲಿ ಶಿಕ್ಷಣ ಪಡೆದರು. ಆಚಾರ ವಿಚಾರ ಸಂಪನ್ನರಾದರು. ಧಾರ್ಮಿಕ ಪ್ರಕ್ರಿಯೆಗಳನ್ನು ಅರಿತರು ಮುಂದೆ ಕೀರ್ತನ ಪುರಾಣಾದಿಗಳನ್ನು ಕಲಿಯಬೇಕೆಂಬ ಹಂಬಲದಿಂದ ಅತ್ತಿತ್ತ ಅಲೆದಾಡುತ್ತಿದ್ದರು. ಆಗ ತಾನೆ ಶ್ರೀ ಜಗದ್ಗುರು ಮೂರುಸಾವಿರ ಮಠದಲ್ಲಿ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಕಾಲೇಜು ಪ್ರಾರಂಭವಾಗಿತ್ತು. ಅರಸುವ ನಿಧಾನದ ಸ್ಥಾನ ದೊರಕಿತೆಂಬಂತೆ ಬಂದು ಕೀರ್ತನ ಪುರಾಣಗಳ ಅಧ್ಯಯನಕ್ಕಾಗಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಇಲ್ಲಿ ಕೆಲ ವರ್ಷ ತರಬೇತಿ ಪಡೆದು ಈಗ ಅಲ್ಲಲ್ಲಿ ಪುರಾಣ ಪ್ರವಚನ ನಡೆಸಿರುವರು. ಚಿಕ್ಕತೊಟ್ಟಲಕೆರೆ ಇಸುಳೂರು ಮುಂತಾದಕಡೆ ಅನುಷ್ಠಾನ ಮಾಡಿರುವರು. ಕಾರವಾರ ಜಿಲ್ಲೆಯ ಶಿರ್ಶಿಯ ಬಣ್ಣದಮಠದ ಉತ್ತರಾಧಿಕಾರಿಗಳಾಗಿರುವ ಇವರು ತಮ್ಮ ಗುರುಗಳವರಿಂದ "ಅನುಗ್ರಹ" ಪಡೆದು ಶ್ರೀ ಶಿವಲಿಂಗದೇಶಿಕರಾಗಿರುವರು. ಇವರು ಧೈರ್ಯಶಾಲಿಗಳಾಗಿರುವರಲ್ಲದೆ ಮುಂದೆ ಮುಂದೆ ಸಾಗಬೇಕೆಂಬ ಹಂಬಲದವರು. ನಿಷ್ಠುರ ಸ್ವಭಾವ ಇವರಿಗಿರುವುದಾದರೂ ಇವರ ಮಾತು ಮುತ್ತು, ಯಡೆಯೂರ ವರೆಗೆ ಇವರು ಪಾದಯಾತ್ರಾ ಮಾಡಿರುವರು. ಹಾನಗಲ್ ಶ್ರೀ ಕುಮಾರೇಶ್ವರನ ಬಗ್ಗೆ "ಜ್ಯೋತಿ ಬೆಳಗಿತು...." ಎಂಬ ಮಂಗಲ ಪಾಡುವುದರಲ್ಲಿ ಇವರು ನಿಸ್ಸೀಮರು.



## ಶ್ರೀ ಮಂಟಿಳ ಸಿದ್ಧದೇಶಿಕರು
## ಮಾಢ್ಯಾಳ

ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ಮರೋಳ ಹಿರೇಮಠದಲ್ಲಿ ಇವರು ಜನಿಸಿದರು. ಮೊದಲು ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಲ್ಲಿ ಸಾಗಿಸಿ ನಂತರ ಸಿಂದಗಿಯ ಶ್ರೀ ಶಿವಾಚಾರ್ಯರ ಹಾವೇರಿಯಲ್ಲಿಯ ಶ್ರೀ ಕುಮಾರೇಶ್ವರ ವೈದಿಕ ಜ್ಯೋತಿಷ್ಯ ಪಾಠಶಾಲೆಗೆ ವಿದ್ಯಾರ್ಥಿಯಾಗಿ ಇವರ ಆಗಮನ. ಅಲ್ಲಿ ಧರ್ಮಾಚರಣೆಯ ಪ್ರಕ್ರಿಯೆಗಳ ಸಂಪೂರ್ಣ ಜ್ಞಾನವನ್ನು ಪಡೆದು, ಅಲ್ಲಿಯೇ ಕೆಲವರ್ಷಗಳವರೆಗೆ ಪಾಠ ಹೇಳುವ ಸೇವೆ ಸಲ್ಲಿಸಿದರು. ನಂತರ ಹುಬ್ಬಳ್ಳಿಗೆ ಆಗಮಿಸಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸದಸ್ಯರಾದರು. ಶ್ರೀ ಜಗದ್ಗುರು ಮೂರುಸಾವಿರಮಠದ ಶ್ರೀ ಕುಮಾರೇಶ್ವರ ವೈದಿಕ ಜ್ಯೋತಿಷ್ಯಪಾಠ ಶಾಲೆಯಲ್ಲಿ ಪಾಠ ಬೋಧನೆ ಮಾಡುತ್ತ ತಮ್ಮ ಅಧ್ಯಯನ ಮುಂದುವರೆಸಿದರು. ಸಂಸ್ಕೃತದಲ್ಲಿ ಹಿಂದಿಯಲ್ಲಿ ಸಂಗೀತದಲ್ಲಿ ವಿಶೇಷಾಸಕ್ತಿ ಇವರಿಗಿದೆ. ಶಿಸ್ತು ಅಚ್ಚುಕಟ್ಟಿನ ಜೀವನ, ನಿಷ್ಠುರ ಸ್ವಭಾವ, ಲಿಂಗ ಪೂಜಾ ನಿಷ್ಠೆ ಇವರ ಜೀವನದಲ್ಲಿ ಹಾಸು ಹೊಕ್ಕಾಗಿದೆ ಶಾಸ್ತ್ರೋಕ್ತವಾಗಿ ವೈದಿಕ ಪೌರೋಹಿತ್ಯವನ್ನು ದೀಕ್ಷಾದಿಕಾರ್ಯಗಳನ್ನು ಕನ್ನಡ ನಾಡು ಹಾಗೂ ಹೊರನಾಡುಗಳಲ್ಲಿ ಮಾಡಿರುವರು ಕಪನಳ್ಳಿ ಶಾಖಾ ಶಿವಯೋಗ ಮಂದಿರದ ಶತಾಯುಷಿ ಋಷಿ ಜೀವನದ ಶ್ರೀ ಮ. ನಿ. ಪ್ರ. ರುದ್ರಮುನಿ ಸ್ವಾಮಿಗಳಿಂದ ಅನುಗ್ರಹ ದೀಕ್ಷೆ ಪಡೆದಿರುವರು. ಮಾಢ್ಯಾಳ ಮಠದ ಉತ್ತರಾಧಿಕಾರಿಗಳಾಗಿರುವರು.



## ಶ್ರೀ ಶಿವಲಿಂಗ ದೇವರು
## ಶಿವಲಿಂಗೇಶ್ವರಮಠ ಶೇಳಗಿ
## ಹುಬ್ಬಳ್ಳಿ.

ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲೂಕೀನ ಮಂಟೂರ ಗ್ರಾಮದಲ್ಲಿ ಜನನ.
ಶೇಳಗಿ ಆದಿನಾಥ ಸ್ವಾಮಿಗಳು ಇವರನ್ನು ಬಾಲ್ಯದಲ್ಲಿಯೇ ಶಿವಯೋಗಮಂದಿರ
ದಲ್ಲಿರಿಸಿದರು. ಅಲ್ಲಿ ಕೆಲವರ್ಷಗಳ ವರೆಗೆ ಯೋಗಾಭ್ಯಾಸ ಹಾಗೂ ಸಂಸ್ಕೃತಾ
ಧ್ಯಯನ ಮಾಡಿದರು. ನಂತರ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ
ಶಿವಯೋಗಿ ಸಂಘಕ್ಕೆ ಬಂದರು. ವಿಶೇಷಾಧ್ಯಯನ ಮಾಡಿ ಧಾರ್ಮಿಕ ಪ್ರಕ್ರಿಯೆ-
ಗಳನ್ನು ಬಲ್ಲವರಾಗಿರುವರು. ಹಿಂದಿ, ಸಂಸ್ಕೃತ, ಕನ್ನಡ ಅಧ್ಯಯನ ಮಾಡಿರುವರು.
ಸುಶಾಂತ ಸ್ವಭಾವ ಇವರದು. ಹಿತಮಿತ ಮಾತು, ಯಾರ ಮನನೋಯಿಸಿ
ಗೊತ್ತಿಲ್ಲ. ಪ್ರತಿವರ್ಷ ಶೇಳಗಿಯಲ್ಲಿ ಅದ್ದೂರಿಯಾಗಿ ಶಿವಲಿಂಗೇಶ್ವರ ಜಾತ್ರೆ
ಯನ್ನು ಮಾಡುವರು. ಇವರು ಮಂಟೂರ, ಗುತ್ತಲ, ಸಿಡ್ಡೋಣಿ ಮೊದಲಾ
ದೆಡೆಗಳಲ್ಲಿ ಪುರಾಣ ಪ್ರವಚನ ಮಾಡಿ ಧರ್ಮ ಸಂಸ್ಕೃತಿಗಳ ಮೇಲೆ ಮುಸುಕಿದ
ಪರೆ ತಗೆದಿರುವರು. ಇದೀಗ ತಮ್ಮ ಮಠಗಳ ಜೀರ್ಣೋದ್ಧಾರ ಕಾರ್ಯದಲ್ಲಿ
ತೊಡಗಿರುವರು. ಸಂಘದಲ್ಲಿ ಎಂಟು ವರ್ಷಗಳ ವರೆಗೆ ಇದ್ದ ಇವರು ಶ್ರೀ ಜಗದ್ಗುರು
ಮಹಾಸನ್ನಿಧಿಯವರ ಪೀಠಾರೋಹಣದ ದ್ವಾದಶ ವಾರ್ಷಿಕೋತ್ಸವದಲ್ಲಿ,
ಬರಗಾಲದ ಭಿಕ್ಷಾ ಯಾತ್ರೆಯಲ್ಲಿ ಸೇವೆ ಸಲ್ಲಿಸಿರುವರು. ಸಂಘದ ಮೊದಲು
ಐವರು ಸದಸ್ಯರಲ್ಲಿ ಇವರೋರ್ವರು. ಸಂಘದ ಮೊಟ್ಟಮೊದಲ ಅಧ್ಯಕ್ಷರಾಗಿದ್ದ
ಕೀರ್ತಿ ಇವರಿಗಿದೆ. ಇವರು ಸರಳಸ್ವಭಾವದವರು, ಸಂಯಮಿಗಳು, ನಿರಾಡಂಬರ
ಜೀವಿಗಳು ಆಗಿದ್ದು, ಶೇಳಗಿ ಮಂಠಾದ ತಮ್ಮ ಮಠದ ಭಕ್ತಾದಿಗಳಿಗೆ ಅತ್ಯಂತ
ಪ್ರೀತಿ ಪಾತ್ರ ಮರಿದೇವರಾಗಿ ಅಲ್ಲಿಯ ಎಲ್ಲ-ಜಾತಿ-ಮತ-ಪಂಥದವರನ್ನು ಆತ್ಮೀ
ಯತೆಯಿಂದ ಕಾಣುತ್ತಾರೆ. ಪರಂಜ್ಯೋತಿ ಮಾಸಿಕ ಪತ್ರಿಕೆಯಲ್ಲಿ ಸೇವೆ ಮಾಡಿ
ರುವರು. ಮಗುವಿನಂತೆ ನಿರ್ಮಲ ಮನಸ್ಸು ಇವರದು. ಬಹುಮುಖವಾಗಿ ಪ್ರಗತಿ
ಸಾಗಬೇಕೆಂಬುದು ಅವರ ಬಯಕೆ.



## ಶ್ರೀ ಪ್ರಭುದೇವರು ಬಸವ ಕಲ್ಯಾಣ. ಹುಲಸೂರ.

ಕಾಯಿ ಸೀಮೆಯ ಕಡೂರ ತಾಲೂಕಿನ ಕಂಚು ಕಲ್ಲು ಬಿದರೆ ದೊಡ್ಡ ಮಠದವರಾಗಿರುವ ಇನರು ದಿನಾಂಕ ೮-೯-೧೯೪೪ ರಂದು ಜನಿಸಿದರು. ಜನಿಸಿದ ಊರಲ್ಲಿ ಪ್ರಾಥಮಿಕ ಅಭ್ಯಾಸ ಮುಗಿಸಿ ಚಿತ್ರದುರ್ಗ ಹಾಗೂ ಶ್ರೀ ಶಿವಯೋಗ ಮಂದಿರದಲ್ಲಿ ಅಧ್ಯಯನ ಮಾಡಿದರು. ಇವರ ಕಾರ್ಯ ಚಟುವಟಿಕೆಗಳನ್ನು ನೋಡಿ ಬಸವ ಕಲ್ಯಾಣದ ಶ್ರೀ. ಮ. ನಿ. ಪ್ರ. ಜಡೆ ಪ್ರಭು ಸ್ವಾಮಿಗಳು ತಮ್ಮ ಬಸವ ಕಲ್ಯಾಣ ಪ್ರಭುದೇವರ ಮಠದ ಉತ್ತರಾದಿಕಾರಿಗಳೆಂದು ಇವರನ್ನು ನೇಮಿಸಿಕೊಂಡರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇವರು ಹುಬ್ಬಳ್ಳಿ ಮೂರುಸಾವಿರ ಮಠಕ್ಕೆ ಬಂದರು. ಶ್ರೀ ಕುಮಾರೇಶ್ವರ ಶಿವಯೋಗಿಶ್ವರ ಸಂಘದ ಸ್ಥಾಪನೆಯ ಸಮಯದಲ್ಲಿ ಐವರು ಸದಸ್ಯರಲ್ಲಿ ಇವರೋರ್ವರು. ಬಿ. ಎ. ಪದವಿಧರರಾಗಿರುವರು. ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀ. ಮ. ನಿ. ಪ್ರ ಶಿವಬಸವ ಸ್ವಾಮಿಗಳವರ ಮಾರ್ಗದರ್ಶನದಲ್ಲಿ ಸಂಸ್ಕೃತಾಧ್ಯಾಯನ ಮಾಡಿರುವರು. ಶಾಂತ ಸಹಜ ಸರಳ ಸ್ವಭಾವದ ಇವರು ಅತಿಥಿ ಅಭ್ಯಾಗತರ ಸೇವೆ ಮಾಡುವಲ್ಲಿ ಅದ್ವಿತೀಯರು. ಮೂರುಸಾವಿರಮಠದ ಎಲ್ಲ ವಿಭಾಗದಲ್ಲಿ ಕೈಯಾಡಿಸಿ ಕುಶಲ ಕಾಯಕಶೀಲರಾಗಿರುವರು. ಪರಂಜ್ಯೋತಿ ಕಾರ್ಯಾಲಯದಲ್ಲಿ ಸೇವೆ ಮಾಡಿ ಲೇಖನ ಪದ್ಯ ರಚನಾ ಕಲೆಯನ್ನು ಬೆಳೆಸಿಕೊಂಡಿರುವರು. ಹನ್ನೊಂದು ವರ್ಷಗಳ ವರೆಗೆ ಸಂಘದಲ್ಲಿದ್ದು ಓದಿನಲ್ಲಿ ಹೆಚ್ಚಾಗಿ ಕಾಯಕದಲ್ಲಿ ವಿಶೇಷ ಆಸಕ್ತಿ ವಹಿಸುವುದಲ್ಲದೆ ಇತರ ಅನೇಕರಿಗೆ ಪ್ರೋತ್ಸಾಹ ಸಹಕಾರ ನೀಡುವಂತಹ ಸ್ವಭಾವ ಇವರ ಹುಟ್ಟು ಗುಣವಾಗಿದೆ. ಅನೇಕ ಮಠಗಳ ಏಳ್ಗೆಗೆ ಸೇವೆ ಸಲ್ಲಿಸಿರುವುದಲ್ಲದೆ ಈಗ ತಮ್ಮ ಮಠದ ಜೀರ್ಣೋದ್ಧಾರ ಹಾಗೂ ಬೇಸಾಯ ಸುಧಾರಣೆಯ ಕಾರ್ಯದಲ್ಲಿ ತೊಡಗಿರುವರು. ವಾಕ್ ಸೇವೆಯಿಂದ ಭಕ್ತೋದ್ಧಾರದ ಕಾರ್ಯ ನಡೆಸಿರುವರು. ಬರಗಾಲ ಬಂಧುಗಳ ರಕ್ಷಣಾ ಸೇವಾ ಕುರಿತು ಪಾದ ಯಾತ್ರೆಯಲ್ಲಿ ಭಾಗವಹಿಸಿದ್ದರು. ನಿರಾಡಂಬರ ಜೀವಿಗಳು. ಪರೋಪಕಾರದಲ್ಲಿ ನಿರತರಾದವರು. ಕಷ್ಟ ಸಹಿಷ್ಣುಗಳು; ತಮ್ಮ ಹಿತಕ್ಕಿಂತಲೂ ಇತರರ ಹಿತವನ್ನೇ ಮಾಡುವಂಥವರು. ನೇಮ ನಿಷ್ಠೆಯನ್ನು ಮನವಪ್ಪಿ ನಡೆಸುವವರು. ಶ್ರೀ ಜಗದ್ಗುರುಗಳ ಕೃಪೆಗೆ ಪಾತ್ರರಾಗಿರುವರು.

# ಶ್ರೀ ಚಂದ್ರಶೇಖರದೇವರು ಹೊಸಮಠ ಎಂ.ಎ. ಹುಬ್ಬಳ್ಳಿ.

ರಾಯಚೂರ ಜಿಲ್ಲೆಯ ಯಲಬುರ್ಗಾ ತಾಲೂಕಿನ ತಳಕಲ್ಲ ಗ್ರಾಮದ ಹಿರೇಮಠದಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿ ನಡೆಸಿದ ಇವರು, ಸ್ವಾಮಿ ಜೀವನದ ಮುನ್ನಿನ ತರಬೇತಿಗಾಗಿ ಕೆಲವು ವರ್ಷಗಳ ವರಗೆ ಶ್ರೀ ಶಿವಯೋಗ ಮಂದಿರದಲ್ಲಿದ್ದರು. ಅಲ್ಲಿ ಧಾರ್ಮಿಕ ಆಚರಣೆಗಳಲ್ಲಿ ಪ್ರಾಯೋಗಿಕವಾಗಿ ಅನುಭವ ಪಡೆದು ಸಂಸ್ಕೃತಾಧ್ಯಯನವನ್ನು ನಡೆಸುವುದರ ಜೊತೆಗೆ ಯೋಗಾಸನಗಳಲ್ಲಿ ಬಲ್ಲಿದರಾದರು. ಹೆಚ್ಚಿನ ಅಧ್ಯಯನಕ್ಕಾಗಿ ಶ್ರೀ ಜಗದ್ಗುರು ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು ಹುಬ್ಬಳ್ಳಿಯ ಹೊಸಮಠದ ಶ್ರೀ ಶಿವಬಸವ ಸ್ವಾಮಿಗಳವರ ಮಾರ್ಗ ದರ್ಶನದಲ್ಲಿ ಇವರು ಅಕ್ಕಿಹೊಂಡ ಹೊಸಮಠದ ಉತ್ತರಾಧಿಕಾರಿಗಳಾಗಿ ಸಂಸ್ಕೃತಾಧ್ಯಯನ ಮಾಡಿದರು. ಅಲ್ಲದೆ ಹಾಯಸ್ಕೂಲ, ಕಾಲೇಜು ಯುನಿವರ್ಸಿಟಿಯಲ್ಲಿ ಅಧ್ಯಯನ ನಡೆಸಿ ಎಂ.ಎ. ಪದವೀಧರರಾಗಿರುವರು. ಈಗ ರಿಸರ್ಚ ಮಾಡುತ್ತಿರುವರು.

ಚತುರ್ಭಾಷಾ ಬಲ್ಲಿದರಾಗಿರುವರು. ಇವರ ಲೇಖನಗಳು ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪುರಾಣ ಪ್ರವಚನಗಳ ಮೂಲಕ ಧಾರ್ಮಿಕ ಸಾಂಸ್ಕೃತಿಕ ಜಾಗೃತಿಯ ಕಾರ್ಯಗಳನ್ನು ಇವರು ಕೈಗೊಂಡಿರುವರು. ಅಲ್ಲದೆ ಎಳೆಯ ವಯಸ್ಸಿನಲ್ಲಿಯೇ ಬೆಲ್ಜಿಯಂದಲ್ಲಿ ನಡೆದ ವಿಶ್ವಧರ್ಮ ಶಾಂತಿ ಸಮ್ಮೇಳನದಲ್ಲಿ ಇವರು ಸಕ್ರಿಯವಾಗಿ ಪಾಲ್ಗೊಂಡಿದ್ದರು.

ಇವರ ಪ್ರತಿಭೆ, ಸರಳ ಸ್ವಭಾವಗಳನ್ನು ಕಂಡು ಹೊಸಮಠದ ಶಿವಬಸವ ಸ್ವಾಮಿಗಳವರು ಇವರನ್ನು ತಮ್ಮ ಮಠದ ಉತ್ತರಾಧಿಕಾರಿಗಳನ್ನು ನಿಯಮಿಸಿಕೊಂಡು ಮಠದ ಆಡಳಿತದ ಅನುಭವ ನೀಡುತ್ತಿದ್ದಾರೆ.

ಅತುಳ ಧೈರ್ಯವಂತರಾಗಿರುವರು. ಸಮಾಜ ಸೇವೆ ಮಾಡಬೇಕೆಂಬ ಹಂಬಲ ಇವರದಾಗಿದೆ. ಇವರು ಉನ್ನತ ಮಹತ್ವಾಕಾಂಕ್ಷೆಯುಳ್ಳವರಾಗಿರುವರು. ನಮ್ಮ ಸಂಘದ ಮೊದಲು ಐವರು ಸಾಧಕರಲ್ಲಿ ಇವರು ಒಬ್ಬರು. ಸಂಘದ ಅಧ್ಯಕ್ಷರಾಗಿದ್ದು ಕಾರ್ಯ ನಿರ್ವಹಿಸಿದರು. ಆನರರಿ ಲಕ್ಚರರಾಗಿ ಪಿ. ಸಿ. ಜಾಬೀನ ಸಾಯನ್ಸ ಕಾಲೇಜಿನಲ್ಲಿ ಸಂಸ್ಕೃತ ಕಲಿಸುತ್ತಿದ್ದರು.

## ಶ್ರೀ ಮಹಾಂತದೇವರು ಕಲ್ಮಠ
## ಸವಣೂರು–ಬಂಕಾಪೂರ.

ಧಾರವಾಡ ಜಿಲ್ಲಿಯ ಸವಣೂರ ತಾಲೂಕಿನ ಬಂಕಾಪುರದಲ್ಲಿ 1948ನೆಯ ಇಸ್ವಿಯಲ್ಲಿ ಜನಿಸಿದ ಇವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಊರಲ್ಲಿ ಮುಗಿಸಿದರು. ಮುಂದೆ ಏಳನೆಯ ವಯಸ್ಸಿನಲ್ಲಿಯೇ ಶಿವಯೋಗ ಮಂದಿರಕ್ಕೆ ಹೋದರು. ಅಲ್ಲಿ ಆಶ್ರಮ ಜೀವನದ ನಿಯಮಗಳಿಗೆ ಹೊಂದಿಕೊಂಡು ಜೀವನ ಹರಿಬಿಟ್ಟರು. ಉನ್ನತ ಕನ್ನಡ ಹಾಗೂ ಸಂಸ್ಕೃತ ಕಲಿತರು. ನಿತ್ಯಾಚರಣೆಗಳನ್ನು ಮೈಗೂಡಿಸಿಕೊಂಡರು. ತಾವು ಬಯಸಿದ ಹೆಚ್ಚಿನ ಶಿಕ್ಷಣ ಹೊಸ ಗಾಳಿ ಬೆಳಕುಗಳಿಗೆ ಮೈ-ಚಾಚಲು ಹುಬ್ಬಳ್ಳಿಗೆ ಬಂದರು. ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ ಸ್ಥಾಪನೆಯ ಕಾಲದಲ್ಲಿ ಮೊದಲು ಐವರು ಸದಸ್ಯರಲ್ಲಿ ಇವರೋರ್ವರು. ಬಿ. ಎ ಷವಿಧಭರರು ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಹೊಸಮಠ ಶ್ರೀಗಳವರ ಮಾರ್ಗದರ್ಶನದಲ್ಲಿ ಸಂಸ್ಕೃತಾಧ್ಯಯನ ಮಾಡಿದರು. ಹಿಂದಿ ಮುಖ್ಯ ವಿಷಯ ನಿಶಿತಮತಿ ತಮ್ಮ ಮನ ಒಪ್ಪದುದನ್ನು ಯಾರ. ಹೇಳಿದರೂ ಕೇಳದೆ ಸಿದ್ಧ ಮಾಡಿ ತೋರಿಸುವ ಇವರು ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಕಾರ್ಯದರ್ಶಿಗಳಾಗಿ ಸಂಘದಲ್ಲಿದ್ದರು.

ಸವಣೂರ–ಬಂಕಾಪೂರ ಜಂಟಿಮಠಗಳ ಹೊಣೆ ಹೊತ್ತು ಮಠಗಳ ಜೀರ್ಣೋದ್ಧಾರದ ಕಾರ್ಯದೊಡನೆ ಧರ್ಮ ಸಂಸ್ಕೃತಿಗಳ ಕಾರ್ಯ ನಡೆಸುತ್ತಿರುವರು ಚಿಂತೆ ಸುಳಿಯದ ಧೈರ್ಯಗೆಡದ ಇವರು ಸ್ವತಂತ್ರ ಪ್ರಿಯರು



ಶ್ರೀ ಉಮಾಪತಿ ದೇವರು ಬನ್ನೂರು

ವಿಜಾಪೂರ ಜಿಲ್ಹೆಯ ಬಸವನ ಬಾಗೇವಾಡಿ ಇವರ ಜನನಸ್ಥಳ ಎಳೆಯ ವಯಸ್ಸಿನಲ್ಲಿ ಶಿವಯೋಗ ಮಂದಿರಕ್ಕೆ ಆಗಮನ. ಶಿವಯೋಗ ಮಂದಿರದಲ್ಲಿ ಧಾರ್ಮಿಕ ಪ್ರಕ್ರಿಯೆಗಳ ಅಧ್ಯಯನ ಮಾಡಿದ್ದು, ಹೆಚ್ಚಿನ ವ್ಯಾಸಂಗಕ್ಕಾಗಿ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಇವರ ಆಗಮನ ಎಸ್. ಎಸ್. ಎಲ್. ಸಿ. ಹಾಗೂ ಭಾಷಾ ಹಿಂದಿ ರತ್ನ ಪರೀಕ್ಷೆ ಮುಗಿಸಿಕೊಂಡರು. ಇವರು ಸಾಹಸ ಪ್ರವೃತ್ತಿಯವರು ಸ್ನೇಹ ಜೀವಿಗಳೂ ಆದ ಇವರು ಈಗಾಗಲೇ "ಅಪ್ಪಾವರಣ ಮಹಿಮೆ" "ಸುವಿಚಾರಗುಚ್ಛ" ಎಂಬರೆಡು ಕೃತಿಗಳನ್ನು ಹಲವಾರು ಲೇಖನಗಳನ್ನು ಪದ್ಯಗಳನ್ನು ರಚಿಸಿರುವರು. ಮುಂದುವರೆ ಹಂಬಲವಿರುವ ಇವರದು ಪುರಾಣ ಪ್ರವಚನದಲ್ಲಿ ಎತ್ತಿದ ಕೈ ಆರು ವರ್ಷಗಳವರಗೆ ಇವರು ಸಂಘದಲ್ಲಿದ್ದರು

ಈಗ ಬನಾರಸದಲ್ಲಿ ಹೆಚ್ಚಿನ ವಿದ್ಯಾಭ್ಯಾಸ ನಡೆಸಿರುವರು; ಎಂ. ಎ. ಪಿಲಾಸಫಿ ಓದುತ್ತಿರುವರು. ಇವರ ಪ್ರತಿಭೆಯನ್ನು ಕಂಡು ಬೆಳಗಾಂವ ಜಿಲ್ಹೆಯ ರಾಮದುರ್ಗ ತಾಲೂಕಿನ ಬನ್ನೂರು ಹಿರಿಯಮಠದ ಶ್ರೀಗಳವರು ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿ ನಿಯಮಿಸಿ ಕೊಂಡಿರುವರು. ಅತುಳ ಧೈರ್ಯದಿಂದ ಮುನ್ನುಗುವ ಸ್ವಭಾವದ ಇವರು ತಮ್ಮ ಶಕ್ತಿ ಮೀರಿ ಸಮಾಜ ಸೇವೆ ಮಾಡುವ ಕಳಕಳಿ ಇರಿಸಿಕೊಂಡಿರುವರು. ತಿಪಟೂರಲ್ಲಿ "ವೀರಶೈವ ತರುಣ ಸಂಘ" ವನ್ನು ಸ್ಥಾಪಿಸಿರುವರಲ್ಲದೆ, ಅಲ್ಲಲ್ಲಿ ಧರ್ಮ ಬೋಧೆ ಮಾಡುತ್ತಿದ್ದು ತಮ್ಮ ಅಧ್ಯಯನವನ್ನು ಮುಂದುವರೆಸಿರುವರು.



**ಶ್ರೀ ಮಲ್ಲಿಕಾರ್ಜುನದೇವರು**
**ಹಿರಿಯಮಠ ತೆಲಸಂಗ ಎಂ. ಎ.**

ಬೆಳಗಾಂವ ಜಿಲ್ಲೆಯ ಅಥಣಿಯಲ್ಲಿ ದಿನಾಂಕ ೨೮-೮-೧೯೪೮ ರಂದು ಜನಿಸಿದ ಇವರು ತೆಲಸಂಗದಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ, ಅಥಣಿಯಲ್ಲಿ ಮಾಧ್ಯಮಿಕ ಶಿಕ್ಷಣವನ್ನು ನಡೆಸಿದರು. ಪ್ರಸಿದ್ಧ ಪುರಾಣ ಪ್ರವಚನಕಾರರಾದ ಹಲವು ಶೈಕ್ಷಣಿಕ ಸಂಘ ಸಂಸ್ಥೆಗಳನ್ನು ಕಟ್ಟಲು ಪ್ರೇರಕರಾದ ತೆಲಸಂಗದ ಶ್ರೀ ಪ. ಬ. ಬಸವಲಿಂಗ ಪಟ್ಟಾಧ್ಯಕ್ಷರು ತಮ್ಮ ಮಠದ ಉತ್ತರಾಧಿಕಾರಿಯನ್ನಾಗಿ ಇವರನ್ನು ಸ್ವೀಕರಿಸಿದರು. ಸ್ವಾಮಿ ಜೀವನದ ಮುನ್ನಿನ ತರಬೇತಿಗೆಂದು ಹಾಗೂ ಹೆಚ್ಚಿನ ವ್ಯಾಸಂಗಕ್ಕೆಂದು ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರುಗಳವರ ಅಪ್ಪಣೆಯ ಪ್ರಕಾರ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಸಾಧಕ ಸದಸ್ಯರಾಗಿ, ಪ್ರವೇಶ ಪಡೆದು ಇವರು ಇಲ್ಲಿ ಕಾಲೇಜಿನ ಅಧ್ಯಯನದ ಜೊತೆಗೆ ಶ್ರೀ ಜಗದ್ಗುರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಹೊಸಮಠದ ಶ್ರೀ ಮ. ನಿ. ಪ್ರ. ಶಿವಬಸವ ಸ್ವಾಮಿಗಳವರ ಮಾರ್ಗದರ್ಶನದಲ್ಲಿ ಸಂಸ್ಕೃತ ಅಧ್ಯಯನ ಮಾಡಿದರು. ಆಚಾರ ವಿಚಾರಗಳಲ್ಲಿ ತೊಡಗಿ ಧಾರ್ಮಿಕ ಪ್ರಕ್ರಿಯೆಗಳಲ್ಲಿ ಬಲ್ಲವರಾಗುವದಲ್ಲದೆ ಸಂಘದ ಸಕಲ ಚಟುವಟಿಕೆಗಳಲ್ಲಿ ಒಂದಾಗಿ ಪಾಲ್ಗೊಳ್ಳುತ್ತಿರುವರು.

೧೯೭೨ ರಲ್ಲಿ ಬಿ. ಎ. ಪದವಿಧರರಾದ ನಂತರ ಇವರು ಕರ್ನಾಟಕ ಯುನಿವರ್ಸಿಟಿಯಲ್ಲಿ ಸ್ನಾತಕೋತ್ತರ (ಕನ್ನಡ) ಅಧ್ಯಯನ ನಡೆಸಿ ಎಂ. ಎ. ಪದವಿ ಪಡೆದರು. ಇವರು ಬರೆದ ಅನೇಕ ಲೇಖನಗಳು ಪ್ರಕಟವಾಗಿವೆ. "ಶ್ರೀ ಸಿದ್ಧಲಿಂಗೇಶ್ವರ ಭಕ್ತಿ–ಗೀತೆಗಳು" ಎಂಬ ಪುಸ್ತಕವು ಗದುಗಿನ ತೋಂಟದಾರ್ಯಮಠ ವೀರಶೈವ ಪ್ರಗತಿ ಶೀಲಸಂಘದಿಂದ ಇವರ ಸಂಪಾದಕತ್ವದಲ್ಲಿ ರೂಪುಗೊಂಡಿದೆ.

ಸಾಹಿತ್ಯ ಚಟುಪಟಿಕೆಗಳಲ್ಲಿ ವಿಶೇಷ ಆಸಕ್ತಿ ವಹಿಸುತ್ತಿರುವ ಕನ್ನಡ ಪಂಡಿತರಾದ ಇವರು ಮಾಧುರ್ಯ ಪೂರ್ಣ [illegible] ಪುರಾಣ ಪ್ರವಚನಗಳ

ಮೂಲಕ ವಿವಿದೆಡೆಗಳಲ್ಲಿ ಧರ್ಮ, ಸಂಸ್ಕೃತಿ ಪ್ರಚಾರದ ಕಾರ್ಯಕೈಕೊಂಡಿರು-ವರು. ತಮ್ಮ ಗುರುಗಳ ಅನುಭವಿಕ ಆದರ್ಶ ಮಾರ್ಗದರ್ಶನದಲ್ಲಿ ಪ್ರಮುಖವಾಗಿ ಹುಬ್ಬಳ್ಳಿ ಗದಗ ಹಾಗೂ ತಾಳಿಕೋಟೆ ಭದ್ರಾಪುರಗಳಲ್ಲಿ ಅಲ್ಲದೇ ಮಹಾರಾಷ್ಟ್ರದ ಜತ್ತದಲ್ಲಿ ಧರ್ಮಕಾರ್ಯವನ್ನು ಈಗಾಗಲೆ ನಡೆಸಿ ತೋರಿಸಿರುವರು. ಮಠದ ಜೀರ್ಣೋದ್ಧಾರದ ಹಾಗೂ ಜಮೀನು ಸುಧಾರಣೆಯ ಕಾರ್ಯವನ್ನು ಸಹ ಕೈ ಗೊಂಡಿರುವರು. ಬರಗಾಲದ ಬಂಧುಗಳಿಗಾಗಿ, ಧನದಾನ್ಯ ಸಂಗ್ರಹದ ಸಮಯ ದಲ್ಲಿ ಹುಬ್ಬಳ್ಳಿಯ ಶ್ರೀ ಜಗದ್ಗುರುಗಳೊಡನೆ ಪಾಲ್ಗೊಂಡಿದ್ದ ಅನುಭವ ಇವರಿಗಿದೆ. ಶಾಂತ ಸ್ವಭಾವ ಹಿತ–ಮಿತ ಮಾತು, ಮೃದು ಮನಸ್ಸು, ಶಿಸ್ತು, ಸಾತ್ವಿಕತೆ, ಇವರ ಗುಣ ವಿಶೇಷಗಳಾಗಿವೆ. ಸಂಘದಲ್ಲಿ ೮ ವರ್ಷಗಳ ವರೆಗೆ ಇದ್ದು ಪ್ರಾಯೋ-ಗಿಕ ಅನುಭವ ಪಡೆದಿರುವ ಇವರು ಸುಂದರ ಸಮಾಜ ಕಟ್ಟಬೇಕೆಂಬ ಕನಸು ಇರಿಸಿ ಕೊಂಡಿರುವರು. ಶರಣ ಧರ್ಮದ ದಾರಿಯಲ್ಲಿ ನಡೆಯಬೇಕೆಂಬ ಹಂಬಲದಿಂದ ಸಾಹಿತ್ಯಿಕ ಕ್ಷೇತ್ರದಲ್ಲಿಯೂ ಸ್ವಯಂ ಬರೆಯುತ್ತಿರುವ ಇವರು "ಪರಂಜ್ಯೋತಿ" ಪತ್ರಿಕೆಯ ಸಹ ಸಂಪಾದಕರಾಗಿರುವರು. ಇತ್ತೀಚಿಗೆ ಇವರು ಮಹಾಶಿವಶರಣೆ ಶ್ರೀ ಗುಡ್ಡಾಪುರದ ದಾನಮ್ಮ ದೇವಿಯ ಪುರಾಣವನ್ನು ಸಂಪಾದಿಸಿದ್ದು ಅದು ಇಷ್ಟ ರಲ್ಲಿಯೇ ಪ್ರಕಟವಾಗಲಿದೆ. ಜಾನಪದದಲ್ಲಿ ವಿಶೇಷ ಆಸಕ್ತಿ. ತಾತ್ವಿಕ ಗೀತಗಳನ್ನು ಸುಂದರವಾಗಿ ಅನ್ನುವರು. ಶ್ರೀ ಜಗದ್ಗುರುಗಳವರ ಕೃಪಾಪಾತ್ರರಾಗಿರುವರಲ್ಲದೆ ಸಂಘದ ಹಿರಿಯ ಆದರ್ಶ ಸಾಧಕರಾಗಿದ್ದಾರೆ.

## ಶ್ರೀ ಬಸವಪ್ರಭುದೇವರು, ತಾಳಿಕೋಟೆ

ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕದ ತಾಳಿಕೋಟೆಯ ಹಿರೇಮಠದಲ್ಲಿ ಇವರು ೮-೧೦-೧೯೪೭ ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣ ಸ್ವಗ್ರಾಮದಲ್ಲಿ ನಡೆಸಿದರು. ನಂತರ ಶಿವಯೋಗ ಮಂದಿರಕ್ಕೆ ಬಂದರು. ಅಲ್ಲಿ ಕೆಲವು ವರ್ಷಗಳ ವರೆಗಿದ್ದು, ನಂತರ ಹುಬ್ಬಳ್ಳಿಯ ಶ್ರೀ ಕುಮಾರೇಶ್ವರ ಶಿವ ಯೋಗಿ ಸಂಘಕ್ಕೆ ಸೇರಿದರು. ಮೂರುಸಾವಿರಮಠದ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಹೊಸಮಠ ಶ್ರೀಗಳವರ ಮಾರ್ಗದರ್ಶನದಲ್ಲಿ ಸಂಸ್ಕೃತ ವಿದ್ವತ್ ಪರೀಕ್ಷೆ ಮುಗಿಸಿದರು. ರಸಿಕರಾಗಿರುವ ಇವರು ಒಂದು ವರ್ಷ ಕಾಶಿ ಯಲ್ಲಿ ಅಧ್ಯಯನ ನಡೆಸಿ, ಈಗ ಅಲ್ಲಲ್ಲಿ ಪುರಾಣ ಪ್ರವಚನಾದಿ ಸೇವೆ ನಡಿಸಿರುವರು. ನಿಷ್ಠುರ ಸ್ವಭಾವದಿಂದಾಗಿ ಜಗದಿ ಸ್ವತಂತ್ರವೇ ಲೇಸೆಂಬಂತೆ ಇವರು ಸ್ವತಂತ್ರ ಪ್ರಿಯರು "ಅವರವರಿಗೆ ಅವರವರೊಲಿದುದೆ ಬ್ರಹ್ಮ" ಎಂಬಂತೆ ತಮ್ಮೊಲ್ಮೆ ಯಂತೆ ಸಾಗುವವರಿವರು. ಮಿಂಚುಮಾತು, ಲೇಖನ ಪದ್ಯಗಳ ರಚನೆ ಸಹ ಜವಾಗಿ ಕೈಗೊಡಿದೆ. ದಿಟ್ಟಹೆಜ್ಜೆ ಇಟ್ಟು ಎದುರು ಬಾಳನ್ನು ಈಸಿ ಜಯಿಸು ವಂಥ ಪ್ರವೃತ್ತಿ ಇವರದು ಇವರು ಸ್ವತಃ ತಮ್ಮ ಪುರಾಣ ಪ್ರವಚನದ ಸೇವೆಯ ಸಂಭಾವನೆಯ ನಿಧಿಯಿಂದ "ಶ್ರೀ ಕುಮಾರ ಕೈಲಾಸಾಶ್ರಮವನ್ನು ತಮ್ಮ ಆರಾಧ್ಯ ದೇವರಾದ ಶ್ರೀ ಹಾನಗಲ್ ಕುಮಾರೇಶ್ವರನ ಹೆಸರಿನಿಂದ ಸ್ಥಾಪಿಸಿದ್ದಾರೆ. ಅದೇ ಶ್ರೀಕುಮಾರೇಶ್ವರನ ಬಗ್ಗೆ ತ್ರಿಪದಿಗಳನ್ನು ಬರೆದು ಮುದ್ರಿಸಿದ್ದಾರೆ.



ಶ್ರೀ ರೇಣುಕ ದೇವರು
ಚಿಕ್ಕ ತೊಟ್ಟಲಕೆರೆ

ತುಮಕೂರು ಜಿಲ್ಲೆಯ ಚಿಕ್ಕತೊಟ್ಟಲಕೆರೆಯಲ್ಲಿ ೨-೧೧-೧೯೪೫ರಲ್ಲಿ ಜನಿಸಿರುವ ಇವರು ಪ್ರಾಥಮಿಕ ಶಿಕ್ಷಣವನ್ನು ಜನ್ಮಭೂಮಿಯಲ್ಲಿ ನಡೆಸಿ ೧೩ನೇ ವಯಸ್ಸಿಗೆ ಶ್ರೀ ಶಿವಯೋಗಮಂದಿರಕ್ಕೆ ಬಂದರು. ಶ್ರೀ ಚೆನ್ನಬಸವಶಾಸ್ತ್ರಿಗಳವರಿಂದ ಸಂಸ್ಕೃತ ಕಲಿತಿರುವರು. ಯೋಗಾಸನಗಳನ್ನು ಸುಲಲಿತವಾಗಿ ಹಾಕುವರು ಶ್ರೀ ಶಿವಯೋಗ ಮಂದಿರದಲ್ಲಿ ಐದುವರ್ಷ ತರಬೇತಿ ಪಡೆದು ನಂತರ ಸಾಹಿತ್ಯ ಸಂಗೀತಗಳ ಅಧ್ಯಯನಕ್ಕೆ ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಪುರಾಣ, ಪ್ರವಚನ ಕೀರ್ತನೆಗಳ ಅಧ್ಯಯನ ಮಾಡುತ್ತಿರುವರು. 'ಪರಂಜ್ಯೋತಿ' ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿರುವರು. ಒಪ್ಪಿಸಿದ ಕೆಲಸವನ್ನು ಓರಣ ತೋರಣಗೊಳಿಸುವರು ಯಾರಿಗೂ ಕೇಡು ಬಗೆದವರಲ್ಲ. ಜನರನ್ನು ಹಚ್ಚಿಕೊಳ್ಳುವ ಸ್ವಭಾವದವರು. ಶ್ರೀ ಜಗದ್ಗುರು ಸನ್ನಿಧಿಯವರ ಅಪ್ಪಣೆಯ ಪ್ರಕಾರ ಇವರು ಕೆಳದಿಯ ರಾಜಗುರು ಹಿರೇಮಠದಲ್ಲಿ ಎರಡು ಮೂರು ವರ್ಷಗಳವರೆಗೆ ಅನುಷ್ಠಾನ ಮಾಡಿದ್ದಾರೆ. ತಮ್ಮ ಕಂಚುಕಂಠದಿಂದ ಭಕ್ತಿಯ ತಾತ್ವಿಕ ಪದಗಳನ್ನು ರಾಗ-ತಾಳ-ಛಂದೋಬದ್ಧವಾಗಿ ಹಾಡುವರು. ಅಲ್ಲಲ್ಲಿ ಪುರಾಣ ಪ್ರವಚನ ಕೀರ್ತನಗಳನ್ನು ಮಾಡುತ್ತಿರುವರು. ಧೈರ್ಯವಂತರಾಗಿರುವರು.

## ಶ್ರೀ ರುದ್ರಮುನಿದೇವರು ಒಡೆಯರ ಎಮ್. ಎ.

ಧಾರವಾಡ ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ಚವಡಪ್ಪ್ಯ ದಾನ ಪೂರದಲ್ಲಿ ೧೯೫೨ರಲ್ಲಿ ಜನಿಸಿ ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಲ್ಲಿಯೇ ಮುಗಿಸಿದ ಇವರು ಸಾಧಕ ಜೀವನದ ತರಬೇತಿಗಾಗಿ, ಹುಬ್ಬಳ್ಳಿಯ ಶ್ರೀ ಮೂರು ಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. S. S. L. C. ಮುಗಿದ ನಂತರ ಕಾರಣಾಂತರಗಳಿಂದ ಕಾಲೇಜಿನ ವಿದ್ಯಾರ್ಥಿ ಜೀವನವನ್ನೇ ಮುಖ್ಯವಾಗಿಸಿಕೊಂಡರು. ಸಾಹಸ ಪ್ರವೃತ್ತಿಯಿಂದ ಅತುಳ ಧೈರ್ಯ ದಿಂದ ಅಧ್ಯಯನ ನಡೆಸಿ ಜಾಗ್ರಫಿ ವಿಷಯದಲ್ಲಿ ಎಮ್. ಎ. ಫಸ್ಟ್‌ಕ್ಲಾಸಿನಲ್ಲಿ ತೇರ್ಗಡೆಯಾದರು. ಈಗ ಆ ಬಗ್ಗೆ ರಿಸರ್ಚ ಮಾಡುತ್ತಿರುವರು. ಮುಂದೆ ಮುಂದೆ ಸಾಗಬೇಕೆಂಬ ಮಹತ್ವಾಕಾಂಕ್ಷೆ ಹೊಂದಿರುವ ಇವರು ಎಲ್ಲಿ ಹೋದರೂ ತಮ್ಮ ಬುದ್ಧಿ ಕೌಶಲದಿಂದ ಹೊಸರಂಗ ನಿರ್ಮಿಸಿಕೊಳ್ಳುವಂಥವರು. ವಿದ್ಯಾ ವಿನಯ ಸಂಪನ್ನರಾದಉದಾತ್ತ ಭಾವನೆಯ ಸತತ ಅಭ್ಯಾಸ ಪ್ರೀಯ ವಿದ್ಯಾರ್ಥಿ ಗಳಿವರು. ಭವ್ಯ ಭವಿಷತ್ತು ಇವರಿಗಾಗಿ ಕಾಯ್ದಿದೆ.



## ಶ್ರೀ ಷಡಕ್ಷರದೇವರು ಕಟಗಿಹಳ್ಳಿಮಠ, ಗುತ್ತಲ.

ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ಗುತ್ತಲ ಹಿರೇಮಠದ ಉತ್ತರಾಧಿಕಾರಿಗಳಾಗಿರುವ ಇವರು ಗುತ್ತಲದಲ್ಲಿ ೩೦-೧೨-೧೯೩೭ ರಂದು ಜನಿಸಿದರು. ಕರ್ನಾಟಕದ ಪುಣ್ಯಕ್ಷೇತ್ರವೂ ಮೈಸೂರ ಭಾಗದ ಪ್ರಮುಖ ವಿದ್ಯಾಕೇಂದ್ರವೂ ಆದ "ಸಿದ್ದಗಂಗೆ"ಗೆ ಹೋಗಿ ಅಲ್ಲಿ ಕೆಲವು ವರ್ಷ ತಂಗಿ ಪ್ರೌಢಶಾಲಾಭ್ಯಾಸ ಮುಗಿಸಿದರು. ಸಂಸ್ಕೃತ ಓದಿದರು. ತದನಂತರ ೧-೬-೬೮ ರಂದು ಮೂರುಸಾವಿರಮಠಕ್ಕೆ ಬಂದರು. ಶ್ರೀ ಕುಮಾರ ಶಿವಯೋಗಿ ಸಂಘದಲ್ಲಿ ಶ್ರೀ ಜಗದ್ಗುರು ಸನ್ನಿಧಿಯವರ ಅಪ್ಪಣೆಯ ಮೇರೆಗೆ ಪ್ರವೇಶ ಪಡೆದರು. "ಜಯವು ದೈವಾಯತ್ತ ಪ್ರಯತ್ನವೊ ಪುರುಷಾಯತ್ತ" ಎಂಬಂತೆ ನಿತ್ಯ ಪ್ರಯತ್ನಶೀಲರಿವರು 'ಪ್ರಯತ್ನ' ಎನ್ನುವುದಕ್ಕೆ ಇವರೊಂದು ಪ್ರತ್ಯಕ್ಷ ನಿದರ್ಶನವಾಗಿದ್ದಾರೆನ್ನಬಹುದು ಮಠದಲ್ಲಿ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನ ಮುಂದುವರೆಸಿ, ಕಾಲೇಜಿನಲ್ಲಿ ಬಿ. ಎ. ಪದವಿ ಮುಗಿಸಿ, ಈಗ ಎಂ. ಎ. ಓದುತ್ತಿರುವರು. ಮಹತ್ವಾಕಾಂಕ್ಷೆಗಳಾದ ಇವರು ಸರಳ ಸ್ವಭಾವದವರು. ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಾಲಯದ ಹೊಣೆಯನ್ನು ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸದಸ್ಯರಾದಂದಿನಿಂದ ನಿರ್ವಹಿಸುತ್ತಿರುವರು. ಯಾರ ಮನವನ್ನು ನೋಯಿಸದ ಇವರು ಅಲ್ಲಲ್ಲಿ ಪರ ಊರಿನಲ್ಲಿಯೂ ಪ್ರವಚನ ಮಾಡುತ್ತಿರುವರು. ಅನ್ನದಾಸೋಹ ಜ್ಞಾನದಾಸೋಹ ಮಾಡುವ ಹಂಬಲದವರು. ಇವರಿಗೆ ಒಪ್ಪಿಸಿದ ಕೆಲಸವನ್ನು ಇವರು ಓರಣವಾಗಿ ತೋರಣವಾಗಿ ಮಾಡುವರು. ಒಳ್ಳೇ ಛಲವುಳ್ಳವರು. ಯಾರ ಗೊಡವೆಗೂ ಹೋಗಲಾರದೆ, ಎಲ್ಲರನ್ನು ಸ್ನೇಹ ಸೌಹಾರ್ದತೆಯಿಂಥ ಕಾಣುವರು. ಪ್ರಯತ್ನ ಫಲದಿಂದಾಗಿ ಇವರ ಭವ್ಯ ಭವಿಷತ್ತು ಇವರಿಗಾಗಿ ಕಾಯ್ದಿದೆಯೆನಿಸುತ್ತದೆ. ಯಾವಾಗಲೂ ಬಾಗಿದ ತಲೆಯು ಮುಗಿದ ಕೈಯ್ಯು ಇವರ ಮಾತು ಮೃದುಮಲ್ಲಿಗೆ ಪ್ಯೆಬಿಚ್ಚಿದಂತೆ. ಅಂತಃಕರಣದ ಪರಿಮಳದ ಸುತ್ತೆಲ್ಲ ಹರಡಿದೆ. ಇವರ ಪಟ್ಟು 'ಉಡದ' ಪಟ್ಟು



## ಶ್ರೀ ಗುರುಸಿದ್ಧದೇವರು ಕಾರಂಜಿಮಠ ಬೆಳಗಾಂವ

ಕನ್ನಡ ಗಂಡುಮೆಟ್ಟಿನ ಸ್ಥಳವಾದ, ಐತಿಹಾಸಿಕ ಐತಿಹ್ಯಗಳನ್ನು ಹೊಂದಿದ ಬೆಳಗಾಂವದಲ್ಲಿಯ ಕಾರಂಜಿಮಠದ ಅಧಿಕಾರಿಗಳಾಗಿರುವಂತಹ ಇವರು ಬಾಲ್ಯದಲ್ಲಿಯೇ ಶಿವಯೋಗ ಮಂದಿರದಲ್ಲಿದ್ದು ಅಧ್ಯಯನ ನಡೆಸಿದರು. ಆಚಾರ ಸಂಪನ್ನರಾದರು. ಲಿಂಗ ಪೂಜೆಯು ಬಗ್ಗೆ ವಿಶೇಷ ಆಸಕ್ತಿ ಇವರಿಗಿದೆ. ಮಾಧ್ಯಮಿಕ ಶಾಲೆಯ ಶಿಕ್ಷಣ ಪಡೆಯಲೆಂದು ಇವರು ಮೂರುಸಾವಿರಮಠ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು.

ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜದಲ್ಲಿ ಪ್ರಿನ್ಸಿಪಾಲರಾಗಿದ್ದ ಹೊಸಮಠದ ಶ್ರೀಗಳವರಿಂದ ಸಂಸ್ಕೃತಾಧ್ಯಯನ ಮಾಡಿದರು. ಇತ್ತೀಚಿಗೆ ಇವರು ಚತುರ್ಭಾಷಾ ಬಲ್ಲಿದರಾಗಿರುವರು. ಸರಳ ಮನಸ್ಸಿನಿಂದ ಎಲ್ಲರೊಡನೊಂದಾಗುವ ಸ್ವಭಾವದ ಇವರು ಪರೋಪಕಾರಿಗಳು ಪರಿಶ್ರಮ ಜೀವಿಗಳು ಆಗಿದ್ದು ಸಂಘದಲ್ಲಿ ನಾಲ್ಕು ವರ್ಷಗಳ ವರೆಗೆ ಇದ್ದರು. ಸಮಾಜದ ಬಗ್ಗೆ ಇವರು ಒಳ್ಳೆ ಕಳಕಳಿವುಳ್ಳವರಾಗಿರುವರು. ಈಗ ಕಾಶಿಯಲ್ಲಿ ವೇದಾಂತಾಚಾರ್ಯ ಅಧ್ಯಯನ ನಡೆಸಿರುವರು. ಶ್ರೀ ಹಾನಗಲ್ ಕುಮಾರೇಶ್ವರ ಸುಪ್ರಭಾತದ ಪ್ರಕಾಶಕರಾಗಿದ್ದಾರೆ. ಇದರ ಮೂಲಕ ಸಾಹಿತ್ಯಕ್ಕೆ ಸಹೃದಯತನ ತೋರಿಸಿರುವರಲ್ಲದೆ, ಇವರು ಸಾಹಿತ್ಯಿಕ ಸೇವೆಯ ಬಗ್ಗೆ ಕುಡಿಯಲ್ಲಿಯೆ ಸುವಾಸನೆಯನ್ನು ಹರಿಸಿರುವರು. ನಿಡಸೋಶಿಯ ಸಂಸ್ಥಾನಮಠದಲ್ಲಿ ಸ್ವಲ್ಪಕಾಲ ಇದ್ದರು. ಶಿಸ್ತಿನ ಜೀವನದವರು, ಮಾತಿಗೆ ಗೋಡೆ ಕಟ್ಟಿಕೊಂಡವರಲ್ಲ.



**ಶ್ರೀ ಶಿವಕುಮಾರ ದೇವರು ಕುನ್ನಾಳ.**

ಇವರು ಚಿಕ್ಕಮಗಳೂರ ಜಿಲ್ಲೆಯ ಕಡೂರ ತಾಲೂಕಿನ ಕುನ್ನಾಳದಲ್ಲಿ ಜನಿಸಿದರು. ಸ್ವಗ್ರಾಮದಲ್ಲಿ ಮಾಧ್ಯಮಿಕ ಶಿಕ್ಷಣ ಮುಗಿಸಿದರು. ಸಾಧಕ ಜೀವನದ ತರಬೇತಿಗಾಗಿ ಶಿವಯೋಗ ಮಂದಿರದಲ್ಲಿ ಮೂರು ವರ್ಷಗಳ ವರೆಗೆ ಇದ್ದರು. ನಂತರ ಹುಬ್ಬಳ್ಳಿಯಲ್ಲಿರುವ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಹೆಚ್ಚಿನ ವಿದ್ಯಾ-ವ್ಯಾಸಂಗಕ್ಕಾಗಿ ಬಂದರು. ಇಲ್ಲಿ ಕಾಲೇಜಿನ ಶಿಕ್ಷಣ ನಡೆಯಿಸಿ ಬಿ.ಎ. ಪದವೀಧರರಾಗಿ ಇದೀಗ ಎಂ. ಎ. ಓದುತ್ತಿರುವರು. ಸ್ವಾಧ್ಯಾಯ ನಿರತರೂ ಪರಿಶ್ರಮ ಶೀಲರೂ ಸಹೃದಯಿಗಳೂ ಆಗಿ ಈಗ ಹುಬ್ಬಳ್ಳಿಯ ಮೂರುಸಾವಿರ ಮಠದ ಧಾರವಾಡದ ಶಾಖಾ ಮೂರುಸಾವಿರಮಠದಲ್ಲಿ ಸ್ನಾತಕೋತ್ತರ ಅಧ್ಯಯನಕ್ಕಾಗಿ ಅಲ್ಲಿಯೇ ಇರುವರು. ಎಂ. ಎ. ಗೆ ಕನ್ನಡ ವಿಷಯವನ್ನು ತೆಗೆದುಕೊಂಡಿರುವರು. ಇತ್ತೀಚೆಗೆ ಇವರು ಆಲ್ ಇಂಡಿಯಾ ರೇಡಿಯೊ ಕಾರ್ಯಕ್ರಮದಲ್ಲಿ ಭಾಗವಹಿಸಿರುವರು.

ಓದಿನೊಡನೆ ಅನೇಕ ಕಡೆ ಉಪನ್ಯಾಸ ಮಾಡಿ ಇವರು ಜನ ಮೆಚ್ಚಿಗೆ ಪಡೆದಿದ್ದಾರೆ. ಸಮಾಜದ ಬಗ್ಗೆ ಸತ್ ಚಿಂತನೆಯುಳ್ಳವರೂ ಸರಳ ಶಾಂತ ಸ್ವಭಾವದವರೂ ಸೌಜನ್ಯತೆ ಸೌಹಾರ್ದತೆಗಳನ್ನು ಮೈಗೂಡಿಸಿ ಕೊಂಡವರೂ ಆಗಿ ಸಾಹಿತ್ಯದಲ್ಲಿ ಹೊಸ ಕ್ಷಿತಿಜ ನಿರ್ಮಿಸುವ ಕ್ಷಾಂಕ್ಷೆಯುಳ್ಳವರಾಗಿರುವರು. ಸಂಘದಲ್ಲಿರತೊಡಗಿ ಎಂಟು ವರ್ಷಗಳಾದವು.



## ಶ್ರೀ ವೃಷಭಲಿಂಗದೇವರು ವಿರಕ್ತಮಠ
## ಬಂಥನಾಳ

ವಿಜಾಪೂರ ಜಿಲ್ಲೆಯ ಹುನುಗುಂದ ಸೊಪ್ಪಿಮಠದಲ್ಲಿ ದಿನಾಂಕ ೫-೪-೧೯೫೪ ರಂದು ಇವರು ಜನಿಸಿದರು. ಬೆಳೆಯ ಸಿರಿ ಮೊಳಕೆಯಲ್ಲಿ ಎಂಬಂತೆ ಒಳ್ಳೆ ಗುಣ ಲಕ್ಷಣವುಳ್ಳ ಇವರನ್ನು ಕಂಡ ಬಂಥನಾಳದ ಶ್ರೀ ಮ. ನಿ. ಪ್ರ. ಸಂಗನಬಸವ ಮಹಾಸ್ವಾಮಿಗಳವರು ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿ ನಿಯಮಿಸಿ ಕೊಂಡರು. ಇವರು ಚಿಕ್ಕ ವಯಸ್ಸಿನಲ್ಲಿಯೇ ಶಿವಯೋಗಮಂದಿರದಲ್ಲಿ ಪ್ರವೇಶ ಪಡೆದು, ಅಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಂದುವರಿಸಿ ಯೋಗಾಸನ ಪೂಜೆ ಯನ್ನು ಕಲಿತರು. ಐದು ವರ್ಷಗಳವರೆಗೆ ಶಿವಯೋಗಮಂದಿರದಲ್ಲಿದ್ದರು. ನಂತರ ಹುಬ್ಬಳ್ಳಿಯ ಮೂರುಸಾವಿರಮಠಕ್ಕೆ ಬಂದರು. ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶಿಸಿದರು. ಇಲ್ಲಿ ಹೈಸ್ಕೂಲ ಅಧ್ಯಯನ ಮುಗಿಸಿ ಕಾಲೇಜಿನ ಅರ್ಧಶಿಕ್ಷಣ ಮುಗಿಸಿದರು ಆಗಾಗ್ಗೆ ಇಲ್ಲಿ ಲೇಖನ, ಭಾಷಣ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದರು. ಅಲ್ಲದೆ ವಿಶೇಷ ಸಂದರ್ಭದಲ್ಲಿ ಸ್ವತಃ ತಾವೇ ವಿದ್ಯಾರ್ಥಿ ಗಳಿಗೆ ಪುರಸ್ಕಾರ ಧನ ನೀಡುತ್ತಿದ್ದರು. ಪರೋಪಕಾರಿಗಳೂ ವಿಶಾಲ ಭಾವನೆ ಯವರು. ಓದು ಒಕ್ಕಾಲು, ಬುದ್ಧಿ ಮುಕ್ಕಾಲು. ತುಂಬ ಪ್ರಸಿದ್ಧ ಮಠಗಳಾದ ಬಂಥನಾಳ, ಕೃಷ್ಣಾ; ಪುಣೆ, ಲಚಾಣಮಠಗಳ ಹೊಣೆ ಹೊತ್ತಿರುವರು. ಲಿಂಗ ಪೂಜಾನಿಷ್ಠರೂ ಸಮಾಜ ಸೇವೆಯತ್ತ ಒಲವುಳ್ಳವರೂ ಆಗಿ ಸಾಹಿತ್ಯ ರಚನೆ ಪ್ರಕಟನೆಯತ್ತ ವಿಶೇಷ ಲಕ್ಷ್ಯಕೊಡುತ್ತಿರುವ ಇವರ ಮುಖದಲ್ಲಿ ನಗವು ಸದಾ ತುಂಬಿರುವದು.



## ಶ್ರೀ ಮಹೇಶ್ವರದೇವರು ಹಿರೇಮಠ
## ಮಂತ್ರೋಡಿ

ಧಾರವಾಡ ಜಿಲ್ಹೆಯ ಸವಣೂರ ತಾಲೂಕ ಮಂತ್ರೋಡಿ ಗ್ರಾಮದ ಹಿರಿಯಮಠದಲ್ಲಿ ೧೯೫೩ ರಲ್ಲಿ ಜನಿಸಿದಂಥ ಇವರು ತಮ್ಮ ಬಾಲ್ಯದ ಕೆಲವರ್ಷಗಳನ್ನು ಹುಟ್ಟೂರಲ್ಲಿಯೇ ಕಳೆದು ಅಲ್ಲಿಯೇ ಪ್ರಾಥಮಿಕಾಭ್ಯಾಸವನ್ನು ಮುಂದುವರೆಸಿ ಸ್ವಾಮಿಜೀವನದ ಮೊದಲ ತರಬೇತಿಗಾಗಿ ಶಿವಯೋಗ ಮಂದಿರದಲ್ಲಿದ್ದು ವಟು-ಜೀವನವನ್ನು ಸಾಗಿಸುತ್ತ "ಆರ್ಯ"ರಾಗಿ ಪ್ರಾಥಮಿಕ ಆಚಾರ ವಿಚಾರಗಳನ್ನು ನಿತ್ಯಜೀವನದಲ್ಲಿ ರೂಢಿಸಿಕೊಂಡರು. ನಂತರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹುಬ್ಬಳ್ಳಿಯ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಹಿಂದೀ ಸಂಸ್ಕೃತಗಳನ್ನು ಓದುತ್ತಿರುವರು. ಜೊತೆಗೆ ಧರ್ಮವನ್ನು ಸುಲಭೋಪಾಯದಿಂದ ಶ್ರೀ ಸಾಮಾನ್ಯನಿಗೆ ತಿಳಿಸುವ ಮಾಧ್ಯಮಗಳಾದ ಕೀರ್ತನ ಪುರಾಣ ಪ್ರವಚನಗಳನ್ನು ಮಾಡುತ್ತಿರುವರು. ನಿಶಿತಮತಿ ಹರಿತ ನಾಲಿಗೆ ಸೇವಾ ಮನೋಭಾವನೆಯುಳ್ಳ ಇವರು ಪರಂಜ್ಯೋತಿ ಪತ್ರಿಕೆಯಲ್ಲಿ ಸೇವೆ ಮಾಡುತ್ತಿರುವರು. ಅನೇಕ ಮಠಗಳಲ್ಲಿ ಸೇವೆ ಸಲ್ಲಿಸುತ್ತ ಡಾ|| ಕೆಳದೀ ಪಟ್ಟಾಧ್ಯಕ್ಷರ ನಿರ್ದೇಶನದಂತೆ ಮುಂದುವರೆಯುತ್ತಿರುವರು.

## ಶ್ರೀ ಶಿವಶಂಕರ ದೇವರು, ತೇರದಾಳ.

ವಿಜಾಪೂರ ಜಿಲ್ಲೆಯ ತೇರದಾಳದಲ್ಲಿ ಜನಿಸಿದರು. ಅಲ್ಲಿಯ ಹಿರೇಮಠದ ಉತ್ತರಾಧಿಕಾರಿಗಳಾಗಿರುವರು. ಸ್ವಗ್ರಾಮದಲ್ಲಿ ಮಾಧ್ಯಮಿಕ ಶಿಕ್ಷಣದ ವರೆಗೆ ಅಧ್ಯಯನ ಮಾಡಿದರು. ಧರ್ಮ ಹಾಗೂ ಕಾಲೇಜಿನ ಶಿಕ್ಷಣಕ್ಕಾಗಿ ಮೂರು ಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಕೆಲ ಮಾಸಗಳ ವರೆಗೆ ಅಧ್ಯಯನ ನಡೆಸಿದರು. ಸೂರ್ಯನ ಕಣ್ಣಿನಡಿಯಲ್ಲಿ ವೈಚಾಚಿ ಬೆಳೆದ ಇವರಿಗೆ ಹುಬ್ಬಳ್ಳಿಯ ತಂಪು ಹವೆ ಆರೋಗ್ಯಕ್ಕೆ ಒಗ್ಗದಾಯಿತು. ಕಾರಣ ಈಗ ಸ್ವಗ್ರಾಮದಲ್ಲಿದ್ದು ಅಧ್ಯಯನ ಮುಂದುವರೆಸಿರುವರು. ಭವಿಷ್ಯದ ಬಗ್ಗೆ ಆದರ್ಶ ಕನಸುಗಳನ್ನು ಕಟ್ಟಿಕೊಂಡಿರುವರು.





**ಶ್ರೀ ಚಂದ್ರಶೇಖರ ದೇವರು**
**ಮುಳ್ಳೂರ**

ಬಿಜಾಪೂರ ಜಿಲ್ಲೆಯ ಮುಧೋಳ ತಾಲೂಕದ ಕಸಬಾ ಜಂಬಗಿ ಗ್ರಾಮದಲ್ಲಿ ದಿ. 1-6-1950 ರಂದು ಜನಿಸಿದರು. ಕಸಬಾ ಜಂಬಗಿ ಹಾಗೂ ಬಾಗಲಕೋಟೆಯಲ್ಲಿ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣ ಪಡೆದು ಬಾಗಲಕೋಟೆಯಲ್ಲಿ ಹಿಂದಿಯೊಂದಿಗೆ ಬಿ. ಎ. ಪದವಿಧರರಾಗಿರುವರು. ಇವರ ಗುರುಗಳಾದ ರಾಮದುರ್ಗ ತಾಲೂಕಿನ ಮುಳ್ಳೂರ ಹಿರೇಮಠದ ಶ್ರೀ ಷ. ಬ್ರ. ಗುರುಪಾದ ಶಿವಾಚಾರ್ಯರು ತಮ್ಮ ಭಕ್ತರ ಅಪೇಕ್ಷೆಯ ಮೇರೆಗೆ ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿ ಇವರನ್ನು ನೇಮಿಸಿಕೊಂಡರು ಸಾಧಕ ಜೀವನದ ಸಂಸ್ಕಾರಕ್ಕಾಗಿ ಜಗದ್ಗುರು ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಜಂಬಗಿ ರುದ್ರದೇವರ ವತಿಯಿಂದ ಪ್ರವೇಶ ಪಡೆದರು ಹಿಂದಿಯಲ್ಲಿ, ಕನ್ನಡದಲ್ಲಿ ವಿಶೇಷ ಪರಿಣತಿ ಪಡೆದ ಇವರು ಪುರಾಣ ಪ್ರವಚನಗಳ ಅಧ್ಯಯನ ನಡೆಸಿರುವರು. 'ಪರಂಜ್ಯೋತಿ' ಮಾಸಿಕದಲ್ಲಿ ಒಂದೆರಡು ವರ್ಷ ಸಂಚಾಲಕರಾಗಿ ಕಾರ್ಯ ನಿರ್ವಹಿಸಿರುವರು ಮಿತವಾದ ಮಾತು ಶಾಂತ ಸ್ವಭಾವ ಸಮಾಜಸೇವೆ ಮಾಡಬೇಕೆಂಬ ಕಳಕಳಿ ಇರಿಸಿಕೊಂಡಿರುವ ಇವರು ತಮ್ಮ ಮುಳ್ಳೂರ ಹಿರೇಮಠದ ಜವಾಬ್ದಾರಿ ಹೊತ್ತಿರುವರು.



## ಶ್ರೀ ಚೆನ್ನವೀರ ದೇವರು ನರಗುಂದ

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕದ ತಡಹಾಳದಲ್ಲಿ ೩-೯-೫೭ ರಂದು ಇವರು ಜನಿಸಿದರು. ಸ್ವಗ್ರಾಮದಲ್ಲಿ ಕೆಲ ವರ್ಷಗಳವರೆಗೆ ಪ್ರಾಥಮಿಕ ಅಧ್ಯಯನ ಮಾಡಿ ಧಾರವಾಡ ಮುರುಘಾಮಠದಲ್ಲಿ ಹಾಗೂ ಶ್ರೀ ಶಿವಯೋಗ ಮಂದಿರದಲ್ಲಿ ಕೆಲವು ವರ್ಷ ಇದ್ದು ಇವರು ಆಚಾರ ವಿಚಾರ ಸಂಪನ್ನರಾದರು. ಯೋಗದ ಆಸನಗಳ ಬಗ್ಗೆ ಆಸಕ್ತಿತಾಳಿ ದಿನಾಲೂ ಸಾಧನೆ ಮಾಡುತ್ತಿರುರಲ್ಲದೆ ಈಗ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿರುವರು. ಈಗ ಕಾಲೇಜು ಅಧ್ಯಯನದ ಜೊತೆಯಲ್ಲಿ ಪುರಾಣ ಪ್ರವಚನದ ತರಬೇತಿಯನ್ನು ಪಡೆಯುತ್ತಿರುವರು ನಿಷ್ಕಪಟ ಪ್ರವೃತ್ತಿಯ ಇವರ ಮನಸ್ಸು ಪ್ರಾಂಜಲ ಮನಸ್ಸು.

ಸೌಜನ್ಯ ಶೀಲರೂ, ಸದಾಹಸನ್ಮುಖಿಗಳೂ 'ಅತಿಥಿ ದೇವೋಭವ' ಎಂಬ ಭಾವನೆಯುಳ್ಳವರೂ ವಿಶಾಲ ಓದುಗರು ವಿವಿಧ ರೀತಿಯ ಲೋಕಾನುಭವವನ್ನು ಪಡೆಯಬೇಕೆಂಬ ಹಂಬಲದವರೂ ಆಗಿರುವ ಇವರು ಸದಾಚಿಂತನ ಶೀಲರಾಗಿರುವರಲ್ಲದೆ, ಹಾಲು ಹೃದಯದವರು, ಜೇನು ಮಾತನ್ನು ಆಡುವ ಮರಿದೇವರಾಗಿದ್ದಾರೆ.

ಮಠಗಳ ಜೀರ್ಣೋದ್ಧಾರದ ಹಾಗೂ ಸಾಹಿತ್ಯ ರಚನೆಯ ಹಂಬಲ ವಿರಿಸಿಕೊಂಡಿರುವರಲ್ಲದೆ ತಮ್ಮ ನರಗುಂದ ಪಂಚಗ್ರಹ ಹಿರೇಮಠದ ಗುರುತರ ಹೊಣೆಯನ್ನು ಸಮರ್ಥವಾಗಿ ಹೊತ್ತು ಆಧ್ಯಾತ್ಮವನ್ನು ಸಾಧಿಸುತ್ತ ಅದನ್ನು ವಿಜ್ಞಾನದ ಬೆಳಕಿನಲ್ಲಿ ತೋರಿಸುವ ಬಯಕೆಯನ್ನಿಟ್ಟುಕೊಂಡು ಅಧ್ಯಯನದಲ್ಲಿ ಯಾವಾಗಲೂ ತಲ್ಲೀನರಾಗಿರುತ್ತಾರೆ. ಎತ್ತರ ಶರೀರದ ಇವರ ಧ್ಯೇಯ-ಧೋರಣೆಗಳನ್ನು ಸಾಧಿಸುವ ಹೆಬ್ಬಯಕೆಯೂ ಎತ್ತರವಾಗಿದೆ.



## ಶ್ರೀ ಶಿವಾನಂದ ದೇವರು ವಿರಕ್ತಮಠ
## ಕರ್ಜಗಿ

ಇವರು ಧಾರವಾಡ ಜಿಲ್ಲೆಯ ಹುಬ್ಬಳ್ಳಿಯ "ಸಂಸ್ಥಾನಮಠ"ದಲ್ಲಿ 1957ರಲ್ಲಿ ಜನಿಸಿದರು. ತಮ್ಮ ಪ್ರಾಥಮಿಕ ಅಧ್ಯಯನವನ್ನು ಸೋಲಾಪೂರ ಜಿಲ್ಲೆಯ ಕರಜಗಿಯಲ್ಲಿ ನಡೆಸಿದರು. ವಟುವಾಗಿ ಶಿವಯೋಗ ಮಂದಿರದಲ್ಲಿ ೨ ವರ್ಷಗಳ ವರೆಗೆ ಇದ್ದು ನಂತರ ಬೆಂಗಳೂರಿನ ಮಹಾಂತನ ಮಠದಲ್ಲಿ ಹಾಗೂ ಧಾರವಾಡದ ಮುರುಘಾಮಠದಲ್ಲಿ ಇದ್ದು ಅಧ್ಯಯನ ಮುಂದುವರಿಸಿದರು. ಶ್ರೀ ಮ. ನಿ. ಪ್ರ. ಸದಾಶಿವ ಮಹಾಸ್ವಾಮಿಗಳವರು ಹಾನಗಲ್ ಅವರ ವತಿಯಿಂದ ಶ್ರೀ ಮೂರು ಸಾವಿರ ಮಠದ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಹೆಚ್ಚಿನ ಅಧ್ಯಯನ ನಡೆಸಿ ರುವರು. ಆಚಾರ ವಿಚಾರಗಳನ್ನು ಕೈಗೂಡಿಸಿಕೊಳ್ಳುತ್ತಿರುವರು.

ಎಲ್ಲರೊಡನೆ ಒಂದಾಗುವ ಸ್ವಭಾವದವರಾದ ಇವರು ತುಂಬಾ ಸರಳರು. ನಗುತ ನಗಿಸುವ ಗುಣ ಸ್ವಭಾವದವರು. 'ನಗುವವರ ಹೃದಯ ಸ್ವಚ್ಛ ಇರುವ' ದೆಂದು ಒಂದೆಡೆ ಹೇಳಿರುವ ಹಾಗೆ ಇವರು ಪರಿಶುದ್ಧ ಹೃದಯದವರು. ನೇರವಾದ ನಿಶ್ಚಿತವಾದ ಸಾರ್ಥಕ ಜೀವನದ ಈ ದಾರಿಯನ್ನು ಅತುಳ ಪ್ರಯತ್ನ ಸಾಹಸಗಳಿಂದ ತುಳಿದು ನಡೆಯಬಲ್ಲವರು. ಹಾಲಾಹಲವಾಗಿ ಬಂದುದನ್ನು ಮಾತಿನ ಮೋಡಿ ಯಿಂದ ಹಾಲಾಗಿಸಬಲ್ಲ ಇವರಿಗೆ ಭವ್ಯ ಭವಿಷ್ಯತ್ತು ಕಾಯ್ದಿದೆ.



## ಶ್ರೀ ಶಿವಲಿಂಗ ದೇವರು
### ಮುಧೋಳ

ಬೀದರ ಜಿಲ್ಲೆಯ ಔರಾದ ತಾಲೂಕಿನ ಮುಧೋಳ ಗ್ರಾಮದಲ್ಲಿ 1960ರಂದು ಇವರು ಜನಿಸಿದರು. ಚಿಕ್ಕ ವಯಸ್ಸಿನಲ್ಲಿ ಶಿವಯೋಗ ಮಂದಿರಕ್ಕೆ ಬಂದ ಇವರು ಕೆಲವರ್ಷಗಳ ವರೆಗೆ ಆಚಾರ ವಿಚಾರಗಳನ್ನು ಅಲ್ಲಿಯೇ ಇದ್ದು ಕಲಿತು ಯೋಗಾ ಸನಗಳಲ್ಲಿ ವಿಶೇಷ ಆಸಕ್ತಿ ಇವರಿಗಿದೆ. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹುಬ್ಬಳ್ಳಿಯ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಬಂದಿರುವರು. ಸಂಸ್ಕೃತ ಕೀರ್ತನ ಪುರಾಣಗಳ ಅಧ್ಯಯನ ನಡೆಸಿರುವರು. ಸಹೃದಯದವರಾದ ಇವರು ಮುಂದು ವರಿಯಬೇಕೆಂಬ ಆಕಾಂಕ್ಷೆಯುಳ್ಳವರಾಗಿರುವರು. ಬರೆಯುವ ಕಲೆಯನ್ನು ರೂಢಿಸಿ ಕೊಳ್ಳುತ್ತಿರುವರು. ಇವರು ಓದಿನಲ್ಲಿ ವಿಶೇಷ ಆಸಕ್ತಿ ಬೆಳಗುವ ಪ್ರತಿಭಾವಂತ ರಾಗುವರೆಂಬುದು ಎಳೆಯದಲ್ಲಿಯೇ ತೋರುವದು. ಇವರಿಂದ ಭವಿಷ್ಯವು ಸತ್ಕಾರ್ಯ ಕಾಣಲಿದೆ ಎಂದು ಸಹಜವಾಗಿ ತಿಳಿದು ಬರುತ್ತಿದೆ.



## ಚಂದ್ರಕಾಂತ ದೇವರು
## ಹೊಳೆ ಹಿಪ್ಪರಗಿ

ಇವರು ಬಿಜಾಪೂರ ಜಿಲ್ಲೆಯ ಜಮಖಂಡಿ ತಾಲೂಕಿನ ಹೊಳೆಹಿಪ್ಪರಗಿಯವರು. ಸುಣ್ಣದಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿ ಅಧ್ಯಯನ ನಡೆಸಿದರು. ಮನದ ಬಯಕೆ ಹಾಗು ಭಕ್ತರ ಇಚ್ಛೆಯಂತೆ ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘಕ್ಕೆ ಬಂದಿರುವರು. ಸಂಸ್ಕೃತ, ಪುರಾಣ, ಪ್ರವಚನದ ಅಧ್ಯಯನ ನಡೆಸಿರುವರು. ಇವರು ಮುಗ್ಧರು, ಎಲೆಮರೆಯ ಹೂವಿನಂತೆ ಇವರ ಬದುಕು ಬೆಳಕಾಗಿಸುವ ಹಂಬಲವಿದ್ದು ಹೆಸರಿಗೆ ತಕ್ಕಂತೆ ಚಂದ್ರನಂತೆ ಶೈತ್ಯಗುಣವುಳ್ಳವರು. ಇವರ ಮಾತು ಬೆಳ್ಳಿ, ಮೌನ ಬಂಗಾರದಂತಿರುವದು. ಸೌಮ್ಯ ಪ್ರವೃತ್ತಿಯವರೂ ಏಕಾಂತವಾಸಪ್ರಿಯರೂ, ಸಹನಶಕ್ತಿಯುಳ್ಳವರೂ ಆದ ಇವರು ಇತರರಿಗೆ ತೊಂದರೆಯನ್ನು ಎಳ್ಳಷ್ಟೂ ಕೊಡಬಾರದೆನ್ನುವವರು.



## ಶ್ರೀ ಶ್ರೀಕಾಂತ ದೇವರು
## ತುರುಕರಸೀಗಿಹಳ್ಳಿ.

ಇವರು ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ತುರುಕರಸೀಗಿಹಳ್ಳಿ ಹಿರೇಮಠದಲ್ಲಿ ೧೬-೧೦-೧೯೩೧ರಂದು ಜನಿಸಿದರು. ಸ್ವಗ್ರಾಮದಲ್ಲಿ ಹಾಗೂ ಹಾರೋ ಬೆಳವಡಿಯಲ್ಲಿ ಪ್ರಾಥಮಿಕ ಅಧ್ಯಯನ ನಡೆಸಿದರು. ಮಾಧ್ಯಮಿಕ ಶಿಕ್ಷಣ ಧಾರವಾಡ ಹುಬ್ಬಳ್ಳಿಗಳಲ್ಲಿ ನಡೆಸಿದರು. ಇವರು ಮುರಗೋಡದ ಮಹಾಂತಜ್ಜನವರ ಶ್ರೀ ಮಠದಲ್ಲಿ ಮೂರು ವರ್ಷಗಳ ವರೆಗೆ ಇದ್ದು ವೈದಿಕವನ್ನು ವಿಧಾಯಕವಾಗಿ ಕಲಿತಿರುವರು. ಹೊಸ ಸಿಟ್ಟನಲ್ಲಿ ವಿಶೇಷ ಅಧ್ಯಯನ ಮುಂದುವರಿಸಬೇಕೆಂದು ಹುಬ್ಬಳ್ಳಿ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಈಗ ಸಂಸ್ಕೃತ, ಕೀರ್ತನಾಧ್ಯಯನ ನಡೆಸಿರುವರು. ತತ್ತ್ವಜ್ಞಾನವನ್ನು ತಿಳಿಯಬೇಕೆಂಬ ಕುತೂಹಲ ಇವರಿಗಿದೆ. ಆತ್ಮಕಲ್ಯಾಣದೊಡನೆ ಭಕ್ತೋದ್ಧಾರದ ಕಾರ್ಯ ಮಾಡಬೇಕೆಂಬ ಅಭಿಲಾಷೆಯಿದೆ. ಸಾತ್ವಿಕ ಶಾಂತ ಸ್ವಭಾವದವರಿವರು. ಸೀಗಿಹಳ್ಳಿ ಮಠದ ಕಾರ್ಯಭಾರವನ್ನು ಹೊತ್ತಿರುವರು. ಅತಿಥಿ ಸೇವಾ ನಿರತರು. ಹೊಸ ವಿಷಯ ತಿಳಿದುಕೊಳ್ಳಬೇಕೆಂಬುದರಲ್ಲಿ ಚಾತಕದಂತೆ ಹಂಬಲವುಳ್ಳವರು. ಭಾಷಣ ಕಲೆಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದವರು. ಏನೇ ಗ್ರಹಣ ಮಾಡಬೇಕಾದರೂ ಸಾರಾಸಾರ ವಿಚಾರವನ್ನು ಮಾಡಿ ಮುಂದುವರೆಯುವ ಸ್ವಭಾವದವರಾಗಿದ್ದಾರೆ.



**ಶ್ರೀ ಶಿವಬಸವ ದೇವರು**
**ಕೆರುಟಗಿ.**

ಇವರು ವಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ ಕೆರುಟಗಿ ಗ್ರಾಮದ ಹಿರೇಮಠದಲ್ಲಿ ೧೯೫೭ ರಂದು ಜನಿಸಿದರು. ಕೆರುಟಗಿಯಲ್ಲಿ ಪ್ರಾಥಮಿಕ ಅಧ್ಯಯನ ಮುಗಿಸಿ ಕಲಕೇರಿಯಲ್ಲಿ ಮಾಧ್ಯಮಿಕ ಶಿಕ್ಷಣ ನಡೆಸಿದರು. ಸ್ವಾಮಿ ಜೀವನದ ಮುಂದಿನ ವಿಶಿಷ್ಟ ಸಂಸ್ಕಾರಗಳಿಗಾಗಿ ಶಿವಯೋಗ ಮಂದಿರದಲ್ಲಿದ್ದರು. ಅಲ್ಲಿ ಶ್ರೀ ಚೆನ್ನಬಸವಶಾಸ್ತ್ರಿಗಳವರಲ್ಲಿ ಸಂಸ್ಕೃತಾಧ್ಯಯನ ಮುಂದು ವರೆಸಿದರು. ಇವರು ಸತ್‌ಶೀಲ ಸಂಪನ್ನರಾಗಿರುವರು. ವಿಶೇಷಾಧ್ಯಯನಕ್ಕೆ ಗದಗಿನ ತೋಂಟದಾ ರ್ಯರ ಮಠದಲ್ಲಿ ಕೆಲವು ಮಾಸಗಳ ವರೆಗೆ ಇದ್ದರು. ತದನಂತರ ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಕೀರ್ತನ ಪುರಾಣ ಪ್ರವಚನಗಳ ಅಧ್ಯಯನವನ್ನು ಈ ಮಠದ ಕೀರ್ತನ ಕಾಲೇಜದಲ್ಲಿ ನಡೆಸಿರುವರು. ಬಿಚ್ಚು ಹೃದಯ, ತೆರೆದ ಮನಸ್ಸು, ಸರಳ ಸ್ವಭಾವದ ಇವರು ಒಳಗೆ ಏನೂ ಹುದುಗದು ಎಲ್ಲ ಮಾತಿನಲ್ಲಿ ಮಾಡುವದು, ಬಯಲು ಸೀಮೆಯ ಆ ಭಾಗದಲ್ಲಿ ಸಮಾಜ ಕಾರ್ಯ ಮಾಡುವ ಆಕಾಂಕ್ಷೆ ಇರಿಸಿಕೊಂಡಿರುವ ಇವರು ಮನಸ್ಸುಗೊಟ್ಟು ಅಭ್ಯಾಸ ಮಾಡುತ್ತಿರುವರು.



## ಶ್ರೀ ಬಸವಲಿಂಗ ದೇವರು
## ಕರೆಗುಡ್ಡ.

ರಾಯಚೂರ ಜಿಲ್ಲೆಯ ಮಾನ್ವಿ ತಾಲೂಕಿನ ಕರೆಗುಡ್ಡದ ಗುರುಸ್ಥಲದ ಮಠದಲ್ಲಿ ಜನಿಸಿದರು. ಇವರು ಬಾಲ್ಯದಲ್ಲಿಯೆ ಶಿವಯೋಗ ಮಂದಿರಕ್ಕೆ ಹೋದರು. ಅಲ್ಲಿ ಪ್ರಾಥಮಿಕ ಹಂತದಲ್ಲಿ ಸಂಸ್ಕೃತ ಕನ್ನಡ ಓದಿದರು. ಆಚಾರ ವಿಚಾರಗಳಲ್ಲಿ ತರಬೇತಿ ಪಡೆದರು. ಹೊಸ ಬೆಳಕನ್ನು ಪಡೆಯಬೇಕೆಂಬ ಹಂಬಲದಿಂದ ಮೂರು ಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಸಂಘದಲ್ಲಿದ್ದು ಅಧ್ಯಯನಮುಂದುವರೆಸಿದರು. ಹುಬ್ಬಳ್ಳಿಯ ತಂಪು ಹವೆ ಒಗ್ಗದ ಕಾರಣ ಈಗ ಮತ್ತೆ ಶಿವಯೋಗ ಮಂದಿರದಲ್ಲಿರುವರು. ಒಳ್ಳೆಯ ರೀತಿಯಲ್ಲಿ ಪುರಾಣ ಪ್ರವಚನ ಹೇಳಬೇಕು. ಸಾಹಿತ್ಯಕ ಸೇವೆ ಮಾಡಬೇಕೆಂಬ ಮನಸ್ಸು ಇವರದಾಗಿದೆ.

ಶ್ರೀ ಸದಾಶಿವ ದೇವರು

ನಂದಗಾಂವ.

ಬೆಳಗಾಂವ ಜಿಲ್ಲೆಯ ನಂದಗಾಂವ ಗ್ರಾಮದವರಾದ ಇವರು ಬಾಲ್ಯದಲ್ಲಿಯೇ
ಶಿವಯೋಗ ಮಂದಿರಕ್ಕೆ ಹೋದರು. ಅಲ್ಲಿ ಆಚಾರ ವಿಚಾರಗಳನ್ನು ರೂಢಿಸಿ
ಕೊಳ್ಳುವದಲ್ಲದೆ ಅಧ್ಯಯನ ನಡೆಸಿದರು. ಶಾಂತ ಸಾತ್ವಿಕ ಸ್ವಭಾವದವರಿರುವರು.
ಹುಬ್ಬಳ್ಳಿ ಶಿವಯೋಗಿ ಸಂಘದಲ್ಲಿ ಕೆಲವು ಕಾಲ ಇದ್ದರು. ಇವರ ಮಠದ ಹೊಣೆ
ಇವರನ್ನು ಕೈಮಾಡಿ ಕರೆಯಿತು. ಈಗ ಸ್ವಗ್ರಾಮುಲ್ಲಿದರುವರು. ಅಲ್ಲಲ್ಲಿ ಪುರಾಣ
ಪ್ರವಚನಗಳನ್ನು ಮಾಡುತ್ತಿರುವರು ಬೆಳೆಯಬೇಕೆಂಬ ಆಶೆ ಇವರಿಗಿದೆ.

## ಶ್ರೀ ಗುರುಸಂಜೇಶ್ವರ ದೇವರು

## ವಿರಕ್ತಮಠ ಟೆಂಗಳಿ

ಬೆಳಗಾಂವ ಜಿಲ್ಲೆಯ ಅಥಣಿ ತಾಲೂಕದ ಕೊಕಟನೂರ ಗ್ರಾಮದ ಹಿರೇಮಠದಲ್ಲಿ ಜನಿಸಿರುವ ಇವರು ಸ್ವಗ್ರಾಮದಲ್ಲಿಯೆ ಪ್ರಾಥಮಿಕ ಶಿಕ್ಷಣವನ್ನು ನಡೆಸಿದರು. ಧಾರ್ಮಿಕ ಶಿಕ್ಷಣ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಪಡೆಯಲು ಶ್ರೀ ಶಿವಯೋಗ ಮಂದಿರಕ್ಕೆ ಪ್ರಯಾಣ ಬೆಳೆಸಿ, ಅಲ್ಲಿ ೨ ವರ್ಷಗಳವರೆಗಿದ್ದರು. ಅವರ ಮಠದ ಶ್ರೀ ಗುರುಗಳವರ ಇಚ್ಛೆಯಂತೆ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿದ್ದು ಸಂಸ್ಕೃತ ಕೀರ್ತನಗಳನ್ನು ಕಲಿಯುವುದರ ಜೊತೆಗೆ ಹಾಯಸ್ಕೂಲ ಶಿಕ್ಷಣವನ್ನು ನಡೆಸಿರುವರು. ಶ್ರೀ ಸಂಘದ ಕಿರಿಯ ಸಾಧಕರಾಗಿರುವ ಇವರು ಧೈರ್ಯವಂತರಾಗಿದ್ದು ಜಾಣರಾಗಿರುವರು. ಒಳ್ಳೆಯ ಮೂರ್ತಿಯಾಗುವುದೆಂಬ ಭರವಸೆ ಕಂಡು ಬರುತ್ತಿದೆ. ಇವರು ಟೆಂಗಳಿ ವಿರಕ್ತಮಠದ ಉತ್ತರಾಧಿಕಾರಿಗಳಾಗಿರುವರು.



**ಶ್ರೀ ಗುರುಸಿದ್ಧದೇವರ.**

**ಷಡಕ್ಷರಿಮಠ, ತಿಪಟೂರ**

ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕದ ಬೆಟದೂರ ಗ್ರಾಮದಲ್ಲಿ ೧೯೫೭ ರಲ್ಲಿ ಜನಿಸಿದರು. ಪ್ರಾಥಮಿಕ ಅಧ್ಯಯನವನ್ನು ಸ್ವಗ್ರಾಮದಲ್ಲಿ ನಡಿಸಿದರು. ಧಾರ್ಮಿಕ ಶಿಕ್ಷಣಕ್ಕಾಗಿ ಶ್ರೀ ಜಗದ್ಗುರು ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ವೈಧಿಕ ಜ್ಯೋತಿಷ್ಯ ಪಾಠ ಶಾಲೆಯಲ್ಲಿ ದುಥನಿ ಶ್ರೀಗಳವರ (ಕೊಟ್ಟೂರ ಸ್ವಾಮಿಗಳವರ) ಮಾರ್ಗದರ್ಶನದಲ್ಲಿ ಅಧ್ಯಯನ ಮುಂದುವರೆಸಿದರು ಅದರ ಜೊತೆಯಲ್ಲಿಯೆ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿರುವರು. ಧರ್ಮ ಜಿಜ್ಞಾಸೆ ಹೊಂದಿರುವರು. ೧೯೬೭ ರಲ್ಲಿ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದಲ್ಲಿ ಪ್ರವೇಶ ಪಡೆದರು. ಈಗ ಸಂಸ್ಕೃತ ಸಾಹಿತ್ಯ ಪರೀಕ್ಷೆ ಕಟ್ಟಿರುವರು. ನಯ ವಿನಯ ಸಂಪನ್ನರಾಗಿರುವರು. ಇತ್ತೀಚಿಗೆ ತಿಪಟೂರ ಷಡಕ್ಷರಿ ಮಠದ ಭಾವಿ–ಉತ್ತರಾಧಿಕಾರಿಯಾಗಿರುವರೆಂದು ತಿಳಿದು ಬಂದಿದೆ.

## ಮೂರುಸಾವಿರಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಹಿಂದಿನ ಹಾಗು ಇಂದಿನ ಸಾಧಕರ ಹೆಸರುಗಳು.



1) ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಡಂಬಳ–ಗದಗ.
2) ಶ್ರೀ ಮ.ನಿ. ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಆನಂದಪುರಂ.
3) ಶ್ರೀ ಮ.ನಿ.ಪ್ರ. ಜಡೆಯ ಶಾಂತಲಿಂಗ ಸ್ವಾಮಿಗಳು ದುಧನಿ–ನಿಂಬಾಳ.
4) ಶ್ರೀ ಮ.ನಿ.ಪ್ರ. ಸಿದ್ಧಲಿಂಗ ಸ್ವಾಮಿಗಳು ವಿರಕ್ತಮಠ ಮೊರಟಗಿ.
5) ಶ್ರೀ ಮ.ನಿ.ಪ್ರ. ಸಿದ್ಧಲಿಂಗ ಸ್ವಾಮಿಗಳು ಎರಡೆತ್ತಿನಮಠ ಹುಬ್ಬಳ್ಳಿ.
6) ಶ್ರೀ ಮ.ನಿ.ಪ್ರ. ರೇವಣಸಿದ್ಧ ಸ್ವಾಮಿಗಳು ಗದ್ದುಗೆಮಠ ಕಲಬುರ್ಗಿ.
7) ಶ್ರೀ ಷ. ಬ್ರ. ಶಾಂತವೀರ ಶಿವಾಚಾರ್ಯರು ಬಂದರವಾಡ.
8) ಶ್ರೀ ಷ. ಬ್ರ. ಚನ್ನಬಸವ ಶಿವಾಚಾರ್ಯ ಹಿರೇಮಠ ಮಟಮಾರಿ–ಬಿಚ್ಚಾಲಿ.
9) ಶ್ರೀ ಷ. ಬ್ರ. ರುದ್ರಮುನಿ ಶಿವಾಚಾರ್ಯರು ರುದ್ರಸ್ವಾಮಿಮಠ ನಿಡಗುಂದಿ.
10) ಶ್ರೀ ಷ. ಬ್ರ. ಗುರುನಂಜೇಶ್ವರ ಶಿವಾಚಾರ್ಯರು ಗುರುನಂಜೇಶ್ವರಮಠ ಕೂಡಲ.
11) ಶ್ರೀ ಶಿವಲಿಂಗ ದೇಶಿಕರು ಬಣ್ಣದಮಠ ಶಿರ್ಶಿ.
12) ಶ್ರೀ ಮರುಳಸಿದ್ಧ ದೇಶಿಕರು ವಿರಕ್ತಮಠ ಮಾಡ್ಯಾಳ.
13) ಶ್ರೀ ಶಿವಲಿಂಗದೇವರು ಶಿವಲಿಂಗೇಶ್ವರಮಠ ಹುಬ್ಬಳ್ಳಿ–ಶೇಳಗಿ.
14) ಶ್ರೀ ಪ್ರಭುದೇವರು ಪ್ರಭುದೇವರಮಠ ಹುಲಸೂರು–ಬಸವಕಲ್ಯಾಣ.
15) ಶ್ರೀ ಚಂದ್ರಶೇಖರ ದೇವರು ಹೊಸಮಠ ಹುಬ್ಬಳ್ಳಿ. ಎಂ.ಎ.
16) ಶ್ರೀ ಮಹಾಂತ ದೇವರು ಕಲ್ಮಠ ಸವಣೂರ ಬಿ.ಎ.
17) ಶ್ರೀ ಉಮಾಪತಿ ದೇವರು ಬನ್ನೂರು.
18) ಶ್ರೀ ಮಲ್ಲಿಕಾರ್ಜುನ ದೇವರು ಹಿರೇಮಠ ತೆಲಸಂಗ ಎಂ. ಎ.
19) ಶ್ರೀ ಬಸವ ಪ್ರಭುದೇವರು ತಾಳಿಕೋಟಿ.
20) ಶ್ರೀ ರೇಣುಕದೇವರು ಚಿಕ್ಕತೊಟ್ಟಲಕೆರೆ.
21) ಶ್ರೀ ರುದ್ರಮುನಿ ದೇವರು, ಒಡೆಯರ, ಚೌಡಯ್ಯ ದಾನಪುರ ಎಂ.ಎ.
22) ಶ್ರೀ ಷಡಕ್ಷರಿದೇವರು ಕಟಗಿಹಳ್ಳಿಮಠ ಗುತ್ತಲ. ಬಿ.ಎ.

23) ಶ್ರೀ ಗುರುಸಿದ್ಧದೇವರು ಕಾರಂಜಿಮಠ ಬೆಳಗಾಂವ
24) ಶ್ರೀ ಶಿವಕುಮಾರ ದೇವರು ಕುನ್ನಾಳ ಬಿ.ಎ.
25) ಶ್ರೀ ಮಹೇಶ್ವರ ದೇವರು ಹಿರಿಯಮಠ ಮಂತ್ರೋಡಿ.
26) ಶ್ರೀ ವೃಷಭಲಿಂಗದೇವರು ವಿರಕ್ತಮಠ ಬಂಥನಾಳ.
27) ಶ್ರೀ ಶಿವಯೋಗಿ ದೇವರು ವಿರಕ್ತಮಠ ಬೊಮ್ಮನಹಳ್ಳಿ-ಮುಳ್ಳಳ್ಳಿ.
28) ಶ್ರೀ ವಿಶ್ವನಾಥದೇವರು ರುದ್ರಾಕ್ಷಿಮಠ ಹುಬ್ಬಳ್ಳಿ-ಬೈಲಹೊಂಗಲ.
29) ಶ್ರೀ ಶಿವಶಂಕರ ದೇವರು ತೇರದಾಳ.
30) ಶ್ರೀ ಚಂದ್ರಶೇಖರ ದೇವರು ಮುಳ್ಳೂರು ಹಿರೇಮಠ. ಬಿ.ಎ.
31) ಶ್ರೀ ಚನ್ನವೀರ ದೇವರು ಹಿರೇಮಠ ನರಗುಂದ.
32) ಶ್ರೀ ಶಿವಾನಂದ ದೇವರು ಕರ್ಜಗಿ
33) ಶ್ರೀ ಶಿವಲಿಂಗದೇವರು ಮುಧೋಳ.
34) ಶ್ರೀ ಚಂದ್ರಕಾಂತ ದೇವರು ಹೊಳೆಹಿಪ್ಪರಗಿ
35) ಶ್ರೀ ಕಾಂತ ದೇವರು ತುರಕರ ಸೀಗೆಹಳ್ಳಿ
36) ಶ್ರೀ ವಿರುಪಾಕ್ಷ ದೇವರು ಕೆರುಟಗಿ
37) ಶ್ರೀ ಬಸವಲಿಂಗ ದೇವರು ಕರೇಗುಡ್ಡ
38) ಶ್ರೀ ಸದಾಶಿವ ದೇವರು ನಂದಗಾಂವ
39) ಶ್ರೀ ಗುರುನಂಜೇಶ್ವರ ದೇವರು ಟೆಂಗಳಿ
40) ಶ್ರೀ ಗುರುಸಿದ್ಧ ದೇವರು



## ಜಗದ್ಗುರು ಮೂರುಸಾವಿರ ಮಠದ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸಂಸ್ಥಾಪಕರ ಹಾಗೂ ಸದಸ್ಯರ ಹೆಸರುಗಳು

1) ಶ್ರೀ ಜಗದ್ಗುರು ಮಹಾಸನ್ನಿಧಿಯವರು ಸಂಸ್ಥಾಪಕರು ಹಾಗು ಅಧ್ಯಕ್ಷರು.
2) ಶ್ರೀ ಬಸವರಾಜ ಶಿವಲಿಂಗಪ್ಪ ನೀಲಕಂಠ. ವಕೀಲರು ಹುಬ್ಬಳ್ಳಿ.
3) ಶ್ರೀ ಸಿದ್ಧಲಿಂಗಪ್ಪ ಚನ್ನಪ್ಪ ಅಳಗುಂಡಗಿ. ಹುಬ್ಬಳ್ಳಿ.
4) ಶ್ರೀ ಬಸಟ್ಟೆಪ್ಪ ಬಸವಣ್ಣೆಪ್ಪ ಇಜ್ಜಂಗಿ. ಹುಬ್ಬಳ್ಳಿ.
5) ಶ್ರೀ ಶಿವಪ್ಪ ಶಿವಮೂರ್ತಪ್ಪ ಶೆಟ್ಟರ. ವಕೀಲರು ಹುಬ್ಬಳ್ಳಿ
6) ಶ್ರೀ ಮಲ್ಲೇಶಪ್ಪಾ ವೀರಭದ್ರಪ್ಪ ವಾಲಿಶೆಟ್ರ. ಹುಬ್ಬಳ್ಳಿ.
7) ಶ್ರೀ ವೀರಭದ್ರಯ್ಯಾ ವೀರಯ್ಯಾ ಶಿರಹಟ್ಟಿಮಠ ವಕೀಲರು. ಹುಬ್ಬಳ್ಳಿ.
8) ಶ್ರೀ ಚಂದ್ರಶೇಖರಯ್ಯಾ ಚನ್ನಯ್ಯಾ ಎಮ್ಮೆಟ್ಟಿ ಹಿರೇಮಠ. ಹುಬ್ಬಳ್ಳಿ.
9) ಶ್ರೀ ಸಂಗಪ್ಪ ಶಾಂತಪ್ಪ ನಿಲೂಗಲ್ಲ. ಹುಬ್ಬಳ್ಳಿ.
10) ಶ್ರೀ ವಿರೂಪಾಕ್ಷಪ್ಪಾ ಚನಮಲ್ಲಪ್ಪ ಅಸುಂಡಿ, ಬಿಡನಾಳ.
11) ಶ್ರೀ ಚಂದ್ರಶೇಖರಪ್ಪಾ ಬಸವಲಿಂಗಪ್ಪಾ ಮಟ್ಟಿ. ಹಳೇ ಹುಬ್ಬಳ್ಳಿ.

